ಮುದ್ರಕ ಮತ್ತು ಪ್ರಕಾಶಕ

**ಬಿ. ಪಿ. ಕಾಳೆ,**

ಶ್ರೀ ಶೇಷಾಚಲ ಪ್ರೆಸ್ಸ

ಮದಿಹಾಳ-ಧಾರವಾಡ.



[೩ನೇ ಆವೃತ್ತಿ]

೧೯೫೦

೧ನೇ ಮುದ್ರಣ ೧೯೨೪

೨ನೇ ,, ೧೯೩೭

# ಕಂಕಣ ಚೋರ

## ಅನಿಷ್ಟದ ಆಶಂಕೆ.

ಪಾಟಲಿಪುತ್ರವೆಂಬ ಮಗಧದೇಶದ ರಾಜಧಾನಿಯಲ್ಲಿ ಇಂದು ಮಹಾ ಗೊಂದಲವೆದ್ದಿತ್ತು. ಪಟ್ಟಣದ ಓಣಿಗಳಲ್ಲೆಲ್ಲ ಭೀತಿಯ ಚಿಹ್ನಗಳು ತೋರ ಹತ್ತಿದ್ದವು. ರಾಜಸೇವಕರು ಭಯದಿಂದ ನಡುಗಲಾರಂಭಿಸಿದ್ದರು ಮಹಾ ರಾಜ ಧನನಂದನು ಕ್ರೋಧಾವಿಷ್ಟನಾಗಿದ್ದನು. ಅಂತಃಪುರದ ಜನರೂ ಭಯದಿಂದ ಅತ್ಯಂತ ವ್ಯಾಕುಲರಾಗಿದ್ದರು. ಹೀಗೆ ಆ ರಾಜಧಾನಿಯ ಸಮಸ್ತ ಜನರನ್ನೂ ಅಂದು ಆ ತರಹದ ಗೊಂದಲದಲ್ಲಿ ಕೆಡಹಲಿಕ್ಕೆ ಅಲ್ಲಿ ಅಂಥ ಮಹತ್ವದ ಯಾವ ಕಾರಣ ಉಂಟಾಗಿರಬಹುದು? ಅದನ್ನು ಅಲ್ಲಿ ಯವರಂತೂ ಯಾರೂ ಬಾಯಿಬಿಚ್ಚಿ ಆಡಲೊಲ್ಲರು. ಯಾವನೊಬ್ಬ ಅರಿಯದ ಪಥಿಕನು ಮತ್ತೊಬ್ಬ ಪಥಿಕನನ್ನು ಆ ಬಗ್ಗೆ ಕೇಳಹೋದರೆ, ಸಮೀಪದಲ್ಲಿ ಬರುತ್ತಿರುವ ರಾಜಸೇವಕನನ್ನು ಕಂಡು, ಆ ಎರಡನೆಯವನು ಪಲಾಯನ ಸೂಕ್ತವನ್ನೇ ಪಠಿಸುವನು! ಗತಾನು ಗತಿಕೋ ಲೋಕಃ| ಎಂಬಂತೆ, ಪ್ರಶ್ನೆ ಮಾಡಿದ ಆ ಮೊದಲನೆಯ ಪಥಿಕನೂ ದಾರಿ ಸಿಕ್ಕತ್ತ ಓಡುವನು!

ಅಲ್ಲಿ ಇಷ್ಟು ಗೊಂದಲವೇಳಲಿಕ್ಕೆ ಉಂಟಾದ ಕಾರಣವನ್ನು ಅಲ್ಲಿಯ ರಾಜದರ್ಬಾರದೊಳಗಿನ ಜನರು ಮೊದಲು ಮಾಡಿಕೊಂಡು, ಮನೆತನಸ್ತರ ಅಂತಃಪುರದೊಳಗಿನ ಹೆಂಗಳೆಯರ ವರೆಗಿನ ಎಲ್ಲರೂ ತಿಳಿದಿದ್ದರು; ಆದರೆ ಬಾಯಿಬಿಚ್ಚಿ ಆಡಿದರೆ, ತಾವು ಯಾವ ಸಂಕಟಕ್ಕೆ ಗುರಿಯಾಗಬೇಕಾಗು ವದೋ? ಎಂಬ ಅಂಜಿಕೆಯಿಂದ ಒಬ್ಬರೂ ಅದನ್ನು ಒಡನುಡಿಯುವ ಸಾಹಸಕ್ಕೆ ಹೋಗುತ್ತಿರಲಿಲ್ಲ.

ಪಾಟಲಿಪುತ್ರದ ಇತರ ಭಾಗದೊಳಗಿನ ಭಯ-ಗೊಂದಲಗಳಿಗಿಂತ ರಾಣೀವಾಸ-ಅಂತಃಪುರ-ದಲ್ಲಿ ಮಹಾಗೊಂದಲವೆದ್ದಿತ್ತು. ಅಲ್ಲಿಯ ವಿದ್ಯುಲ್ಲತೆಯಂತಹ ಸುಂದರ ನವ ತರುಣ ದಾಸಿಯರ ಪ್ರಫುಲ್ಲಿತ ಮುಖಚಂದ್ರಗಳು, ಖಗ್ರಾಸಗ್ರಹಣ ಹಿಡಿದಂತೆ ಅಂದು ಕಪ್ಪಿಟ್ಟು ಹೋಗಿದ್ದವು. ಮಹಾರಾಣೀ ಮಗಧೇಶ್ವರಿಯ ಖಾಸ ದಾಸಿಯರಂತೂ ಹೌಹಾರಿ ಹೋಗಿದ್ದರು. ಫಾಸೀ ಶಿಕ್ಷೆಯಾದ ಅಪರಾಧಿಯ ಮುಖಚರ್ಯೆಯು ಯಾವ ಪ್ರಕಾರದ್ದಾಗಿರುತ್ತದೋ, ಕೇವಲ ಅದರಂತೆಯೇ ಆ ಖಾಸ ದಾಸಿಯರ ಮುಖಚರ್ಯೆಗಳು ತೋರುತ್ತಿದ್ದವೆಂದರೆ ತಪ್ಪಾಗಲಿಕ್ಕಿಲ್ಲ. ಯಾವ ಕಾರಣದಿಂದ ಈ ದೆಸೆಯು ಪ್ರಾಪ್ತವಾಗಿತ್ತೋ, ಅದನ್ನು ಅವರೆಲ್ಲರೂ ಬಲ್ಲವರಾಗಿದ್ದರು; ಆದರೆ ರಾಣೀವಾಸದೊಳಗೆ ಉಂಟಾದ ಆ ಉತ್ಪಾತಪ್ರದ ಸಂಗತಿಯನ್ನು ಒಡನುಡಿದರೆ, ತಾವು ಎಲ್ಲಿ ಜೀವಕ್ಕೆರವಾಗಬೇಕಾಗುವದೋ, ಎಂಬ ಅಂಜಿಕೆಯಿಂದ ಅವರು ಮುಗ್ಧಭಾವವನ್ನು ಧರಿಸಿದ್ದರು.

ಆ ಪಟ್ಟಣದ ಮುಖ್ಯ ಕೊತವಾಲನು ಹಿಂದಿನ ರಾತ್ರಿಯನ್ನು ಸಂಪೂರ್ಣವಾಗಿ ಎಚ್ಚತ್ತೇ ಕಳೆದಿದ್ದನು; ಆದರಿಂದ ಆರಕ್ತವಾಗಿದ್ದ ಅವನ ನೇತ್ರಗಳು ಪುರರಕ್ಷಕರ-ಅನುಚರರ ಮೇಲಿನ ಸಿಟ್ಟಿನಿಂದ ಮತ್ತಿಷ್ಟು ಕೆಂಪಡರಿ, ಅವನು ಸಿಟ್ಟಿಗೆದ್ದ ಕಾಳಭೈರವನ ಇಲ್ಲವೆ ವೀರಭದ್ರನ ಹಾಗೆ ತೋರಹತ್ತಿದ್ದನು. ಆ ಮಗಧರಾಜಧಾನಿಯಲ್ಲಿ ಎದ್ದ ಅಂದಿನ ಗೊಂದಲದ ಕಾರಣವೇನಂದರೆ:—

ಮಗಧೇಶ್ವರನ ಪಟ್ಟದರಸಿಯಾದ ಮುರಲೆಯ ಎಡಗೈಯೊಳಗಿನ ಸ್ವರ್ಣಮಯ ರತ್ನಖಚಿತ ಕಂಕಣವು ಕಳವಾಗಿ ಹೋಗಿತ್ತು. ಕಳೆದ ರಾತ್ರಿಯಲ್ಲಿ ಮುರಲಾರಾಣಿಯು ಆ ಕಂಕಣವನ್ನು ಕೈಯಲ್ಲಿಟ್ಟುಕೊಂಡೇ ತನ್ನ ಬಂಗಾರದ ಪಲ್ಲಂಗದ ಮೇಲೆ ಪವಡಿಸಿದ್ದಳು; ಆದರೆ ಆಕೆಗೆ ನಿದ್ದೆ ಹತ್ತಿದಾಗ ಯಾರೋ, ಯಾವ ಬಗೆಯಿಂದಲೋ ಅಂಥ ಸುರಕ್ಷಿತ-ಬಿಚ್ಚುಗತ್ತಿಯ ಪಹರೆಯುಳ್ಳ-ಆ ಅಂತಃಪುರದೊಳಗಿನ ಕೋಣೆಯೊಳಗಿಂದ, ಅವಳ ಎಡಗೈಯೊಳಗಿನ ಆ ಬಹು ಮೂಲ್ಯ ಕಂಕಣವನ್ನು ಅಪಹರಿಸಿದ್ದರು! ಆದರೆ ಅದನ್ನು ಕದ್ದವರಾರೆಂಬದನ್ನು ಮಾತ್ರ ಯಾರೂ ಹೇಳಲಾದಾರಾಗಿದ್ದರು. ಆದ್ದರಿಂದಲೇ ಅಂದು ಆ ರಾಜಪುರಿಯಲ್ಲಿ ಅಷ್ಟು ವಿಚಿತ್ರವಾದ ಗೊಂದಲವೆದ್ದಿತ್ತು.

ಯಾವ ರಾತ್ರಿಯಲ್ಲಿ ಆ ಕಂಕಣವು ಕಳವಾಗಿ ಹೋಗಿತ್ತೋ, ಅಂದು ರಾಜಮಹಿಷಿಯ ಕಕ್ಷದಲ್ಲಿ ಮುರಲಾರಾಣಿಯು ತನ್ನ ಪಲ್ಲಂಗದ ಮೇಲೆ

ಪವಡಿಸಿದ್ದು, ಆಕೆಯ ಪಾದದೆಡೆಯಲ್ಲಿ ಚಮೇಲಿ ಎಂಬ ಹೆಸರಿನ ದಾಸಿಯು ಮಲಗಿಕೊಂಡಿದ್ದಳು ಮಹಾರಾಜಾ ನಂದನು ಅಂದು ಅಂತಃಪುರದಲ್ಲಿರಲಿಲ್ಲ. ಅವನು ಪುರಪ್ರಾಂತದೊಳಗಿನ ವಿಲಾಸಕಾನನವೆಂಬ ಕ್ರೀಡಾವನಕ್ಕೆ ಹೋಗಿದ್ದನು ಬೆಳಗಾದ ಮೇಲೆಯೇ ಅವನು ಅಲ್ಲಿಂದ ಅರಮನೆಗೆ ಬಂದನು. ಆತನು ಬಂದಾಗ ಮುರಲಾರಾಣಿಯು ಇನ್ನೂ ಗಾಢನಿದ್ರೆಯಲ್ಲಿಯೇ ಇದ್ದಳು ತನ್ನ ಪ್ರಿಯ ಸತಿಯು, ಪ್ರೇಮದ ಪುತ್ಥಳಿಯು, ವಿಶ್ರಾಂತಿಯ ನಿವಾಸವು, ಸೌಂದರ್ಯದ ಆಗರವು, ಮಧುರಯೌವನದ ಮೂರ್ತಸ್ವರೂಪವು ಇನ್ನೂ ಮಲಗಿರುವದನ್ನು ಕಂಡು, ನಂದ ಮಹಾರಾಜನು ಅವಳ ಆ ಸ್ವರ್ಣಮಯ ಪಲ್ಲಂಗದ ಮೇಲಿನ ಬಹುಮೂಲ್ಯಕಿನಕಾಪಿನ ಲೋಡಿನ ಬಳಿಯಲ್ಲಿ ಕುಳಿತು, ಮೆಲ್ಲನೆ ಆಕೆಯ ಗಲ್ಲವನ್ನು ಸ್ಪರ್ಶ ಮಾಡಿದನು; ಹಾಗು:—'ಪ್ರಿಯೇ, ಮುರಲಾ' ಎಂದು ಪ್ರೇಮಲಧ್ವನಿಯಿಂದ ಕರೆದನು. ಮಹಾರಾಜನ ಹಸ್ತಸ್ಪರ್ಶದಿಂದಲೂ, ಆಹ್ವಾನದಿಂದಲೂ ಮುರಲೆಯ ಕಣ್ಣೊಳಗಿನ ಬೆಳಗಿನ ಝೂಪದ ನಿದ್ರೆಯು ಒಮ್ಮೆಲೆ ಬೈಲಾಗಲು, ಆಕೆಯು ಕಣ್ದೆರೆದು ನೋಡಿದವಳೇ, ಚಟ್ಕನೆ ಎದ್ದು ಕುಳಿತಳು; ಹಾಗು ತನ್ನ ಅಂಗವಸ್ತ್ರವನ್ನೂ, ಕೂದಲುಗಳನ್ನೂ ಸರಿಪಡಿಸಿಕೊಂಡು, ಪಲ್ಲಂಗದಿಂದಿಳಿದು, ರಾಜನ ಅಡಿದಾವರೆಗಳಿಗೆರಗಿ, ಕೋಮಲ ಹಾಗು ಮಧುರಸ್ವರದಿಂದ:—ಮಹಾರಾಜ, ಈ ದಾಸಿಯನ್ನು ಕರೆದುದೇತಕ್ಕೆ? ಎಂದು ಪ್ರಶ್ನೆ ಮಾಡಿದಳು

ಕೂಡಲೆ ನಂದನು ಅವಳನ್ನು ಜಗ್ಗಿ, ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು:—ಪ್ರಿಯೇ, ಮುರಲೇ, ನನ್ನ ಜೀವದರಗಿಳಿಯೇ! ನಾನು ನಿನ್ನ ಗುಲಾಮನು; ನನ್ನ ಮೇಲೆ ಸಿಟ್ಟಾಗಬೇಡ. ನಾನು ನಿನ್ನನ್ನು ಬಿಟ್ಟು, ಬೇರೆಡೆಯಲ್ಲಿ ಎಂದೂ, ಯಾವದೊಂದು ರಾತ್ರಿಯನ್ನೂ ಕಳೆದವನಲ್ಲ. ಆದರೆ ನಿನ್ನಿನ ರಾತ್ರಿಯಲ್ಲಿ ನನ್ನಿಂದ ಆ ತರಹದ ಮೊದಲನೇ ಅಪರಾಧವು ಘಟಿಸಿರುತ್ತದೆ. ಅದಕ್ಕಾಗಿ ನೀನು ನನ್ನ ಮೇಲೆ ಸಿಟ್ಟಾಗಬೇಡ. ವಿಶೇಷ ಕೆಲಸವಿದ್ದದರಿಂದ, ನಾನು ನಿನ್ನೆ ರಾತ್ರಿಯನ್ನೆಲ್ಲ ವಿಲಾಸಕಾನನದಲ್ಲಿಯೇ ಕಳೆಯಬೇಕಾಯಿತು.

ಅದನ್ನು ಕೇಳಿ ಮುರಲೆಯು-ಮಗಧೇಶ್ವರಿಯಾದ ಮುರಲಾ ಮಹಾರಾಣಿಯು-ಕಡು ಲಜ್ಜೆಯಿಂದ ಪುನಃ ನಂದರಾಜನ ಅಡಿದಾವರೆಗಳಿಗೆರಗಿ: ಮಹಾರಾಜರು ಈ ಪ್ರಕಾರದ ಕ್ಷಮಾಯಾಚನೆಯ ಮಾತನ್ನೆಂದೂ ಆಡಬಾರದು. ನಾನು ಈ ಪವಿತ್ರ ಚರಣಗಳ ದಾಸಿಯೇ ಹೊರತು, ನನ್ನಲ್ಲಿ

ತಾವು ಬೇರೆ ಯಾವ ಭಾವವನ್ನೂ ವಹಿಸಬಾರದನ್ನು ಎಂದು ಹೇಳಿ, ಮುಖ ಮಾರ್ಜನೆ-ಪ್ರಾತರ್ವಿಧಿಗಳಿಗಾಗಿ ಬೇರೆ ಕಡೆಗೆ ಹೊರಟುಹೋದಳು.

ನಂದರಾಜನ ಪಟ್ಟದರಾಸಿಯ ಮಹಾಲಿನಲ್ಲಿ ದಾಸಿಯರಿಗೆ ಕೊರತೆಯೇ? ಬಚ್ಚಲ ಮನೆಯಲ್ಲಿ ಹತ್ತೆಂಟು ಜನ ದಾಸಿಯರಿದ್ದು, ನಾಮುಂದೆ-ನಾ ಮುಂದೆ ಎಂದು, ಅವರೆಲ್ಲರೂ ಬಿಸಿನೀರು, ದಂತಧಾವನ, ಕೈರುಮಾಲು ಮುಂತಾದವುಗಳನ್ನು ಹಿಡಕೊಂಡು ನಿಂತೇಬಿಟ್ಟಿದ್ದರು. ಮುರಲಾರಾಣಿಯು ಪ್ರಾತರ್ವಿಧಿಯನ್ನು ತೀರಿಸಿಕೊಂಡು ಸ್ನಾನಕ್ಕೆ ಅಣಿಯಾದಳು. ಕೂಡಲೆ ಇಬ್ಬರು ದಾಸಿಯರು ಆಕೆಗೆ ನೀರು ಹಾಕಹತ್ತಿದರು. ಇಬ್ಬರು ಮೈ ತಿಕ್ಕಿದರು ಒಬ್ಬಳು ಅಂಗಾಂಗಗಳನ್ನು ಒಣಬಟ್ಟೆಯಿಂದ ಒರೆಸಿದಳು. ಇನ್ನೊಬ್ಬಳು ಧೌತವಸ್ತ್ರವನ್ನು ನೀರಿಗೆ ಮಾಡಿಕೊಟ್ಟಳು. ಕುಂಕುಮ-ಕಾಡಿಗೆ ಮುಂತಾದವುಗಳನ್ನಿಡಲಿಕ್ಕೆ ಮತ್ತೊಬ್ಬಳು ಸಜ್ಜಾದಳು.

ಮುರಲಾರಾಣಿಯು ಕ್ಷಣ ಸಹ ವಿಲಂಬ ಮಾಡದೆ ತನ್ನ ಪ್ರಾತಃ ಕೃತ್ಯ-ಸ್ನಾನಗಳನ್ನು ತೀರಿಸಿಕೊಂಡು, ಪುನಃ ನಂದಮಹಾರಾಜನು ಕುಳಿತಿದ್ದ ತನ್ನ ಶಯ್ಯಾಗಾರಕ್ಕೆ ಬಂದಳು ನಂದಭೂಪತಿಯು ಮುರಲೆಯನ್ನು ಸ್ವಾಭಾವಿಕವಾಗಿ ಬಹು ಪ್ರೀತಿಸುತ್ತಿದ್ದನು. ಆದರಲ್ಲಿಯೂ ಇಂದಿನ ಸುಪ್ರಭಾತಕಾಲದಲ್ಲಿಯ ಅವಳ ನಯನ ಮನೋಹರ ರೂಪವನ್ನು ಕಂಡು ಅವನಲ್ಲಿ ಅವಳ ವಿಷಯದ ರೂಪಲಾಲಸೆಯು ದ್ವಿಗುಣಿತವಾಯಿತು. ಆಗ ಅವನು ಅವಳನ್ನು ತನ್ನ ಅಂಕದಲ್ಲಿ ಕೂರಿಸಿಕೊಂಡು ಪ್ರೀತಿಯಿಂದ ಮುದ್ದಿಸ ತೊಡಗಿದನು ನಂದರಾಜನು ಅಂದು ಅವಳನ್ನು ಆ ಪರಿ ಮುದ್ದಿಸುವದನ್ನೂ ಅವಳೊಡನೆ ಅಷ್ಟು ಸುಖ-ಸಲ್ಲಾಪಗಳಲ್ಲಿ ಆಸಕ್ತನಾದುದನ್ನೂ ನೋಡಿದರೆ, ಎಣ್ಣೆ ತೀರಿದ ದೀಪವು ಶಾಂತವಾಗುವ ಕಾಲಕ್ಕೆ ಹೇಗೆ ಹೆಚ್ಚಾಗಿ ಪ್ರಕಾಶಮಾನವಾಗುವದೋ, ಹಾಗೆ ಇವರೀರ್ವರ ಪ್ರೇಮಭಂಗವು ತೀರ ಸಮೀಪಿಸಿರುವದೆಂದು ಯಾವನೊಬ್ಬ ತಾರ್ಕಿಕನಿಗೆ ತಟ್ಟನೆ ತಿಳಿಯಬಹುದಾಗಿತ್ತು.

ಧನನಂದನು ಮುರಲಾ ರಾಣಿಯ ಹಸ್ತದ್ವಯಗಳನ್ನು ಹಿಡಿದು ಆಲಿಂಗಿಸುತ್ತಿರುವಾಗ ಅವಳ ಬಲಗೈಯೊಳಗಿನ ಕಂಕಣವು ಮಾತ್ರ ನಟ್ಟು ಅವನ ಕೈಗೆ ತುಸ ನೋವನ್ನುಂಟು ಮಾಡಿತು. ಕೂಡಲೆ ತನಗೆ ಇವಳ ವಾಮಹಸ್ತದೊಳಗಿನ ಕಂಕಣವು ನಡದೆ, ಒರೀ ದಕ್ಷಿಣ ಹಸ್ತದ ಕಂಕಣವೊಂದೇ ನಟ್ಟಿತೇಕೆಂಬ ವಿಚಾರವು ಯಾವ ಕಾರಣದಿಂದಲೋ ಆ ನಂದ ಭೂಪತಿಯಲ್ಲಿ ಪ್ರಾದುರ್ಭವಿಸಲು, ಅವನು ಅವಳನ್ನು ತನ್ನ ಬಾಹು ಪಾಶ

ದಿಂದ ಮುಕ್ತಳನ್ನಾಗ ಮಾಡಿ, ಅವಳ ಎಡಗೈಯನ್ನು ತನ್ನ ಕೈಯಲ್ಲಿ ತಕ್ಕೊಂಡು ದಿಟ್ಟಿಸಿ ನೋಡಿದನು ದಾರಿಯಲ್ಲಿ ಅಡ್ಡ ಬಿದ್ದಿದ್ದ ಸರ್ಪವನ್ನು ಕಂಡ ಅಜಾಗರೂಕನಾದ ಪಥಿಕನು ಒಮ್ಮೆಲೆ ಹೌಹಾರಿ ಹೇಗೆ ಮೆಟ್ಟಿ ಬೀಳುವನೋ, ಹಾಗ ತನ್ನ ಪ್ರೀತಿಯ ಮಡದಿಯಾದ ಮುರಲಾರಾಣಿಯ ವಾಮಹಸ್ತದಲ್ಲಿ ಕಂಕಣವಿರದ್ದನ್ನು ನೋಡಿ ಆ ಧನನಂದ ಮಹಾರಾಜನು ಚಲವಿಚಲಿತ ಮನಸ್ಕನಾದನು. ಈ ಮೊದಲು ಅತ್ಯಾದರದಿಂದ ಹಿಡಿದಿದ್ದ ಆಕೆಯ ಆ ಕೈಯನ್ನು ಅವನು ಕೂಡಲೆ ಒಳ್ಳೇ ಕಸುವಿನಿಂದ ಹಿಂದಕ್ಕೆ ದೂಡಿದನು. ಆ ಕೈ ಝೂಡಣೆ ಹೊಡೆಯುವ ಭಾವದಿಂದಲೇ ಅವನಿಗೆ ಬಹು ಸಿಟ್ಟು ಬಂದಿದೆಯೆಂಬದು ಅವನನ್ನು ನೋಡುವವರಿಗೆ ಒಮ್ಮೆಲೆ ಕಂಡು ಬರುವಂತಿತ್ತು. ಅವನು ಉತ್ತರ ಕ್ಷಣದಲ್ಲಿ ಆ ಮಂಚದಿಂದ ಎದ್ದು ನಿಂತನು; ಹಾಗು ಯಾವನು ಅರೆಕ್ಷಣದ ಹಿಂದೆ ಮುರಲೆಯನ್ನು ತನ್ನ ಹೃದಯೇಶ್ವರಿಯೆಂದು ಭಾವಿಸಿ, ಅವಳೊಡನೆ ಪ್ರೇಮಾಲಾಪಗಳಲ್ಲಿ ಮಗ್ನನಾಗಿದ್ದನೋ, ಆ ನಂದಮಹಾರಾಜನೇ ಮುರಲೆಯೆಂದರೆ ತನ್ನ ಕಡು ವೈರಿಯೆಂದು ಭಾವಿಸುವ ದೃಷ್ಟಿಯಿಂದ ಈಗ ಅವಳ ಕಡೆಗೆ ನೋಡುತ್ತ ಒಳ್ಳೇ ಕಠೋರವಾಣಿಯಿಂದ:—'ಮುರಲೆ, ಮಹಾರಾಣಿಯಾಗಿದ್ದ ಅಭಾಗಿನಿ ಮುರಲೆ!' ಎಂದು ಸಂಬೋಧಿಸಿದನು.

ಕ್ಷಣದಲ್ಲಿ ನಂದರಾಜನಲ್ಲುಂಟಾದ ಈ ವಿಪರೀತ ಸ್ಥಿತಿಯ ಮರ್ಮವನ್ನು ಕೊಂಚವೂ ತಿಳಿಯದಿದ್ದ ಮುರಲೆಯು ವಿಸ್ಮಯಾನ್ವಿತಳಾಗಿ ಮಹಾರಾಜನ ಮುಖವನ್ನೇ ಟಕಮಕ ನೋಡುತ್ತ:—ಮಹಾರಾಜ, ಪ್ರಾಣವಲ್ಲಭರೇ, ಏನಾಗಬೇಕು? ಎಂದು ಕೇಳಲು,

ಗದ್ಗದಕಂಠದಿಂದ ನಂದರಾಜನು:—ಮುರಲೇ, ನಿನ್ನ ಎಡಗೈಯೊಳಗಿನ ರತ್ನಖಚಿತವಾದ ಆ ಕಂಕಣವೆಲ್ಲಿ?

ಇದೇನು ನುಡಿಯುತ್ತಿರುವಿರಿ ಮಹಾರಾಜ? ಎಂದವಳೇ, ಮುರಲೆಯು ತನ್ನ ಎಡಗೈಯನ್ನನುಲಕ್ಷಿಸಿದಳು. ಆ ಕೈಯೊಳಗಿನ ಬೇರೆ ಎಲ್ಲ ಅಲಂಕಾರಗಳೂ ಇದ್ದು, ಆ ಕಂಕಣವೊಂದೇ ಅಲ್ಲಿರಲಿಲ್ಲ. ಇಟ್ಟಂದಿನಿಂದ ಅವಳು ಅದನ್ನು ಎಂದೂ ಬಿಚ್ಚಿಡದ್ದರಿಂದ, ತಾನು ಎಲ್ಲಿಯಾದರೂ ಬಿಚ್ಚಿಟ್ಟಿರಬಹುದೇನೆಂಬ ಕಲ್ಪನೆ ಕೂಡ ಅವಳ ಮನಸ್ಸಿನಲ್ಲಿ ಬರಲಿಲ್ಲ; ಅದರಿಂದ ಅವಳಿಗೆ ಒಮ್ಮೆಲೆ ಬವಳಿ ಬಂದಂತಾಯಿತು. ಯಾಕಂದರೆ, ಅವಳ ಆ ವಾಮಹಸ್ತದೊಳಗಿನ ಕಂಕಣವೇ ಅವಳ ಸೌಭಾಗ್ಯತಿಲಕವಾದಂತಾಗಿತ್ತು! ಅದು ಅವಳ ಹಸ್ತದಲ್ಲಿರುವ ವರೆಗೆ ಅವಳ ಪತಿಯಾದ ನಂದರಾಜನಿಗೆ

ಯಾವ ವಿಪತ್ತೂ ಒದಗುವ ಸಂಭವವಿರಲಿಲ್ಲ. ಅದು ಇಲ್ಲದಾದ ಕೂಡಲೆ ಮುರಲಾರಾಣಿಯ ಸರ್ವಸ್ವವೂ-ನಂದರಾಜನಿಗೆ ರಾಜಪದ ಭ್ರಷ್ಟತೆಯೂ ಪ್ರಾಣಸಂಕಟವೂ ಉಂಟಾಗುವ-ಲುಪ್ತವಾಗಬಹುದಾಗಿತ್ತು! ಆದ್ದರಿಂದಲೇ ಆ ರಾಜದಂಪತಿಗಳೀರ್ವರೂ ಆ ಕಂಕಣವು ಕಾಣದಾಗಲು, ಅಂದು ಅಷ್ಟು ವಿಚಲಿತ ಮನಸ್ಕರಾಗಿದ್ದರು.

ಆಗ ಮಹಾರಾಜ ಧನನಂದನು ವಿಷಣ್ಣವದನನಾಗಿ:—ಮುರಲೇ, ಆ ಕಂಕಣವನ್ನು ಬಹು ಎಚ್ಚರಿಕೆಯಿಂದ ಕಾಪಾಡಿಕೊಳ್ಳಬೇಕೆಂಬ ಬಗ್ಗೆ ನಿನಗೆ ಚನ್ನಾಗಿ ತಿಳಿಹೇಳಿದ್ದಿಲ್ಲವೆ? ಯಾವ ದಿವಸ ನಿನ್ನನ್ನು ನಾನು ಅಗ್ನಿಸಾಕ್ಷಿಯಾಗಿ ವರಿಸಿದೆನೋ, ಅಂದಿನಿಂದಲೂ ಆ ಕಂಕಣವು ನಿನ್ನೀ ವಾಮಹಸ್ತದಲ್ಲಿಯೇ ಶೋಭಿಸುತಲಿತ್ತು; ಆದರೆ ನಿನ್ನ ಅಜಾಗರೂಕತೆಯ ಮೂಲಕ ಅದು ಇಂದು ಇಲ್ಲದಂತಾಗಿದೆ ಇದರಿಂದ ನೀನು ನನ್ನ ಸರ್ವನಾಶಕ್ಕೇ ಕಾರಣಳಾಗಿರುವೆಯೆಂತಲ್ಲ-ನಿನ್ನ ಸ್ವಂತದ ನಾಶಕ್ಕೂ ಕಾರಣೀಭೂತಳಾಗಿರುತ್ತೀ!

'ಬಹು ಎಚ್ಚರಿಕೆಯಿಂದ ಇರಬೇಕೆಂದು ತಾವು ಹೇಳಿದ್ದೇನೋ ನಿಜ; ಆದರೆ ಆ ಬಗ್ಗೆ ಅಷ್ಟು ಜಾಗ್ರತೆ ಯಾಕೆ ವಹಿಸಬೇಕೆಂಬುದರ ಕಾರಣವನ್ನು ಮಾತ್ರ ತಾವು ಇದು ವರೆಗೂ ಈ ದಾಸಿಗೆ ತಿಳಿಸಿರಲಿಲ್ಲವಲ್ಲ!' ಎಂದು ಬಾಡಿದ ಮುಖವುಳ್ಳವಳಾದ ಮುರಲೆಯು ಗುಣುಗುಟ್ಟಿದಳು.

ಅದಕ್ಕೆ ಮಹಾರಾಜನು:—ಮುರಲಾರಾಣಿಯೇ, ಕೇಳು: ನಾನು ನಿನ್ನನ್ನು ವರಿಸಬೇಕೆಂದು ಇಚ್ಛಿಸಿದಾಗ ನಮ್ಮ ಗುರುಗಳು ನನಗೆ ಹೇಳಿದುದೇನಂದರೆ:—'ಈ ಮುರಲೆಯು ತಾರಾ ಬಲದಿಂದ ನೋಡಲು, ನಿನಗೆ ಇವಳಿಂದ ಸುಖನಾಗುವಂತಿಲ್ಲ. ಈಕೆಯು ಒಳ್ಳೇ ಲಕ್ಷಣವತಿಯಾಗಿ ತೋರುತ್ತಿದ್ದರೂ, ರಾಶಿಚಕ್ರಗಳ ಗಣನೆಯಿಂದ ಇವಳು ನಿನಗೆ ಯೋಗ್ಯಳಾದ ಪತ್ನಿಯಾಗಲಾರಳು. ನಂದನೇ ಎಚ್ಚರಿಕೆ! ಈ ರಮಣಿಯ ಸಹವಾಸದಿಂದ ನಿನಗೆ ಖಂಡಿತವಾಗಿಯೂ ಅಕಲ್ಯಾಣವಾಗುವದು' ಆದರೆ ಮುರಲೇ, ನಿನ್ನ ಅಪ್ರತಿಮ ಲಾವಣ್ಯ-ನವ ತಾರುಣ್ಯಗಳಿಗೆ ನಾನು ಆಗ ಮರುಳಾಗಿದ್ದೆನು ಅದರಿಂದ ಸುಖಾಪೇಕ್ಷಿಯಾದ ನಾನು ಗುರು ವಾಕ್ಯವನ್ನು ಕೂಡ ಅಷ್ಟೊಂದು ಗಣನೆಗೆ ತಾರದೆ, ನಿನ್ನನ್ನು ಪತ್ನಿಯಾಗಿ ವರಿಸಿದೆನು. ಆದರೂ ನನ್ನ ಪೂಜ್ಯಗುರುದೇವನು ನನ್ನಲ್ಲಿ ಕ್ರೋಧವನ್ನು ತಾಳದೆ:—ಮಹಾರಾಜಾ, ನಂದಾ, ನೀನು ನನ್ನ ಪ್ರಿಯಶಿಷ್ಯನಾಗಿರುವೆಯಾದ್ದರಿಂದ, ನಾನು ಈ ಮುರಲೆಯಿಂದ ನಿನಗೆ ಉಂಟಾಗಬಹುದಾದ ಗ್ರಹಬಾಧೆಗಳ ನಿವಾರಣ

ಕ್ಕಾಗಿ ಒಂದು ಯೋಗ್ಯ ಉಪಾಯವನ್ನು ಸೂಚಿಸುತ್ತೇನೆ. ಇವಳಿಗಾಗಿ ನೀನೊಂದು ರತ್ನಖಚಿತ ಕಂಕಣವನ್ನು ಮಾಡಿಸಿ ನನ್ನ ಕಡೆಗೆ ತಂದು ಕೊಡು. ನಿನ್ನ ಅರಿಷ್ಟ ನಿವಾರಣಕ್ಕಾಗಿ ನಾನು ಅದನ್ನು ಮಂತ್ರಪೂತವನ್ನಾಗಿ ಮಾಡಿ ಕೊಡುತ್ತೇನೆ ಬಳಿಕ ನೀನು ಅದನ್ನು ನಿನ್ನ ಆ ಮುರಲಾ ರಾಣಿಯು ಹಸ್ತದಲ್ಲಿಡು. ಅಲ್ಲಿಂದ ಅದನ್ನು ಎಂದೂ, ಯಾವ ಕಾಲಕ್ಕೂ ಹೊರಗೆ ತೆಗೆಯದಂತೆ ಆಕೆಗೆ ಕಟ್ಟಪ್ಪಣೆ ಮಾಡು. ಒಂದುವೇಳೆ ಅವಳ ಕೈಯೊಳಗಿನ ಆ ಕಂಕಣವು ಲುಪ್ತವಾದರೆ, ಅದರಿಂದ ನಿನ್ನ ರಾಜ್ಯವು ಲುಪ್ತವಾಗುವದು; ಪ್ರಾಣಹಾನಿಯುಂಟಾಗುವದು, ಹಾಗು ನಿನ್ನ ಆ ಪ್ರಿಯ ಮಡದಿಗೆ ಅಕಾಲ ವೈಧವ್ಯವು ಪ್ರಾಪ್ತವಾಗುವದು' ಎಂದು ಹೇಳಿದ್ದನು. ಅಭಾಗಿನಿಯಾದ ಮುರಲೇ, ಅಂಥ ಆ ಮಂತ್ರಪೂತ ಕಂಕಣವನ್ನು ನೀನು ಇಂದು ಕಳೆದು ಬಿಟ್ಟಿರುತ್ತೀಯಲ್ಲ!

ಆಗ ಮುರಲೆಯು ನತಮುಖದಿಂದ:—ಮಹಾರಾಜ, ತಿಳಿದೂ ತಿಳಿದು ನಾನು ಈ ಅನಿಷ್ಟಕಾರ್ಯವನ್ನು ಮಾಡಿಲ್ಲ. ಕೈ ತಪ್ಪಿ ನನ್ನಿಂದ ಈ ಕಾರ್ಯವು ಘಟಿಸಿರುತ್ತದೆ. ಆದುದರಿಂದ ದಯಾಳುಗಳಾದ ಗುರುದೇವರೇ ಇದಕ್ಕೇನೊಂದುಪಾಯವನ್ನು ಮಾಡಿ, ಈ ಅರಿಷ್ಟದಿಂದ ತಮ್ಮನ್ನು ಪಾರು ಮಾಡಬಹುದಾಗಿದೆ ಕಾರಣ ಮಹಾರಾಜ, ತಾವು ಗುರುದೇವರನ್ನು ಈಗಲೇ ಕರೆಕಳುಹಿಸಿ, ಈ ವಿಷಯದಲ್ಲಿ ಅವರ ಪರಾಮರ್ಷವನ್ನು ತಕ್ಕೊಳ್ಳುವದುಚಿತವಾಗಿದೆ.

ಧನನಂದನು ನಿರಾಶಾಯುಕ್ತಸ್ವರದಿಂದ:—ಛೇ-ಛೇ! ಅದೆಂದೂ ಆಗದ ಮಾತು. ಈ ಅನುಚಿತ ಕಾರ್ಯವು ಯಾವ ಮಾಯೆಯಿಂದ ಘಟಿಸಿತೋ ಅದಾರಿಗೆ ಗೊತ್ತು? ನಮ್ಮ ಗುರುದೇವನು ಪ್ರಜ್ಞಾವಂತನು, ತ್ರಿಕಾಲಜ್ಞನು. ಅವನು ಬೇಡ-ಬೇಡವೆಂದು ಕೈಯಲ್ಲಿ ಕಡ್ಡೀ ಕೊಟ್ಟು ಹೇಳುತ್ತಿದ್ದರೂ ನಾನು ನಿನ್ನನ್ನು ವರಿಸಿರುವೆನಾದ್ದರಿಂದ, ಈಗ ಉಂಟಾಗಿಗಿರುವ ಫಲವನ್ನು ನಾನೇ ಉಣ್ಣಬೇಕಾಗಿರುತ್ತದೆ. ಮುರಲೇ, ಈ ಕಂಕಣ ಜೋರದಿಂದ ನನ್ನ, ನಿನ್ನ ಹಾಗು ನನ್ನ ಈ ಪ್ರಿಯ ಮಗಧರಾಜ್ಯದ ಸರ್ವನಾಶವೂ ಮುಂದರಿದಿರುತ್ತದೆ

ಆಗ ಮುರಲೆಯು ಕಣ್ಣೀರುದುರಿಸುತ್ತ ಮಹಾಜನ ಪಾದಕಮಲಗಳನ್ನು ಗಟ್ಟಿಯಾಗಿ ಹಿಡಿದುಕೊಂಡು:-ಮಹಾರಾಜರೇ, ಪ್ರಾಣವಲ್ಲಭರೇ, ಇಂಥ ಘೋರ ಅನಿಷ್ಟಕ್ಕೆಅದಾರು ಕಾರಣರಾಗಿರಬಹುದು? ಈ ವಿಘ್ನನಾಶಕ್ಕೆ ಉಪಾಯವು ಇಲ್ಲವೇ ಇಲ್ಲವೇನು? ಈ ಮುರಲೆಯ ಹಾಳು ಹೇಹವನ್ನು

ಬಲಿಯಾಗಿ ಅರ್ಪಿಸಿದರೂ ಕೂಡ ಈ ವಿಘ್ನವು ಪರಿಹಾರವಾಗಲಿಕ್ಕಿಲ್ಲವೇ? ಈ ಮುರಲೆಯು ಸತ್ತರೆ ಯಾವ ಕೇಡೂ ಆಗಲಿಕ್ಕಿಲ್ಲ. ಈ ವಿರಾಟ್‌ವಿಶ್ವವೆಂಬ ಮಹಾಸಾಗರದಲ್ಲಿ ನನ್ನ ಅವಸಾನದಿಂದ ಒಂದು ಕ್ಷುದ್ರ ತೆರೆಯೂ ಕೂಡ ಏಳಲಿಕ್ಕಿಲ್ಲ; ಆದರೆ ಅದರಿಂದ ತಮ್ಮ ಮೇಲಿನ ಅರಿಷ್ಟವು ನಿವಾರಣವಾದರೆ ಸಾಕು!

ಮುರಲೆಯು ಆ ಅಶ್ರುವರ್ಷಣದಿಂದ ನೊಂದುಕೊಂಡಲು ನಂದನ ಅಂತಃಕರಣದಲ್ಲಿ ಆಕೆಯ ವಿಷಯದ ಅನುರಾಗವು ಪುನಃ ತಲೆದೋರಲಾರಂಭಿಸಿತ್ತು: ಆದರೆ ಅಷ್ಟರಲ್ಲಿ ಅವಳ ಅಜಾಗರೂಕತೆಯಿಂದಲೇ ಈ ಅನರ್ಥವುಂಟಾಗುವದೆಂಬ ಮಾತು ಅವನ ನೆನಪಿಗೆ ಬರಲು, ಅವನು ತಿರಸ್ಕಾರಪೂರ್ಣದೃಷ್ಟಿಯಿಂದ ಅವಳನ್ನು ನೋಡುತ್ತ, ಜ್ಯೋತಿಷಶಾಸ್ತ್ರದ ಫಲಾಫಲಗಳ ವಿಷಯದಲ್ಲಿಯೂ, ಗುರುದೇವನ ಭವಿಷ್ಯದ್ವಾಣಿಯ ಶುಭಾಶುಭಗಳ ಮರ್ಮವನ್ನು ಯೋಚಿಸುವದರಲ್ಲಿಯೂ ತನ್ನ ಮನಸ್ಸನ್ನು ತೊಡಗಿಸಿದನು. ಆಗಿನ ಕಾಲದಲ್ಲಿ ಅವನಲ್ಲಿ ಉಂಟಾದ ಆ ಘೋರ ಚಿಂತೆಯಿಂದ ಅವನು ಉನ್ಮಾದನಂತೆ ತೋರಹತ್ತಿದನು.

ಮಹಾರಾಜ, ಸುಮ್ಮನೆ ಆಲೋಚಿಸುವದರಲ್ಲಿ ಕಾಲಹರಣ ಮಾಡುವದರಿಂದೇನು ಪ್ರಯೋಜನ? ಇದಕ್ಕೆ ಉಪಾಯವೇ ಇಲ್ಲವೇನು? ಈಗಲೇ ಈ ದೇಹವನ್ನು ತುಂಡುತುಂಡಾಗಿ ಮಾಡಿ, ನನ್ನ ರಕ್ತವನ್ನು ಮಹಾಕಾಲಭೈರವನ ಮಂದಿರದೊಳಗಿನ ಭೈರವಿಯ ಶೋಣಿತ ಲಾಲಸೆಯ ನಾಲಿಗೆಗೆ ಸವರಿ, ತೃಪ್ತಿಯನ್ನುಂಟು ಮಾಡಿರಿ. ಅದರಿಂದ ಅವಳು ಸಂತುಷ್ಟಳಾಗಿ, ಈ ವಿಪತ್ತಿನಿಂದ ನಿಮ್ಮನ್ನು ದಾಟಿಸುವಳು. ಈ ನಶ್ವರ ದೇಹವು ಇಂದಿಲ್ಲ ನಾಳೆಯಾದರೂ ನೀರ ಮೇಲಿನ ಗುಳ್ಳೆಯಂತೆ ವಿಲಯವಾಗೇ ಆಗುವದು. ನಾನು ನನ್ನ ದೇಹದ ಬಗ್ಗೆ ತಿಲಮಾತ್ರವೂ ಯೋಚಿಸುವದಿಲ್ಲ; ಆದರೆ ಈ ಅನಿಷ್ಟ ಪ್ರಸಂಗದಿಂದ ಮಹಾರಾಜರಿಗೆ ಒಂದಿಷ್ಟೂ ಸಂಕಟವುಂಟಾಗಬಾರದೆಂದು ಬಯಸುತ್ತೇನೆ, ಎಂದು ಗದ್ಗದ ಕಂಠದಿಂದ ಮುರಲೆಯು ನುಡಿದಳು.

ಮತ್ತಾವ ಪ್ರಸಂಗದಲ್ಲಿಯಾದರೂ ಮುರಲೆಯು ತುಸ ವಿಷಣ್ಣವದನಳಾಗಿದ್ದರೆ, ಅದರ ಕಾರಣವನ್ನು ತಿಳಿದು, ಆಕೆಗೆ ಸಮಾಧಾನವುಂಟಾಗುವಂತೆ ಮಾಡಿಯೇ ಮಹಾರಾಜ ಧನನಂದನು ತನ್ನ ಬೇರೆ ಕೆಲಸದಲ್ಲಿ ತೊಡಗುತ್ತಿದ್ದನು, ಆದರೆ ಇಂದು ಮುರಲೆಯು ಕಣ್ಣೊಳಗಿಂದ ಪ್ರತ್ಯಕ್ಷವಾಗಿ ಭಾಗೀರಥಿಯು ಪ್ರವಹಿಸುತ್ತಿದ್ದರೂ, ಬಾಯಿಂದ ಎಂಥೆಂಥ ಅಭದ್ರವಾಣಿ

ಗಳು ಹೊರಡುತ್ತಿದ್ದರೂ, ಮಹಾರಾಜ ನಂದನು ಅತ್ತ ಕಡೆಗೆ ಲಕ್ಷ್ಯ ಗೊಡಲೇ ಇಲ್ಲ. ಅವನು ಹೃದಯಸ್ಥವಾದ ಘೋರಚಿಂತೆಯ ತರಂಗಗಳಲ್ಲಿಯೇ ಆಂದೋಲನ ಹೊಂದುತ್ತಿದ್ದನು. ಅವನಿಗೆ ಏನೂ ಬೇಡಾಗಿತ್ತು. ಇಂಥ ಸ್ಥಿತಿಯಲ್ಲಿ ಮುರಲೆಯು ಪುನಃ ಅವನ ಕಾಲುಗಳನ್ನು ಹಿಡಿಯ ಬರಲು, ಅವನು ಆಕ್ರೋಶದಿಂದ ಅವಳನ್ನು ಒದೆದು, ಕೇವಲ ಉನ್ಮತ್ತನಂತೆ ಆ ಮಹಾರಾಣಿಯ ಶಯ್ಯಾಗಾರದಿಂದ ಹೊರಹೊರಟನು; ಆದರೆ ಮಹಾರಾಜನಿಂದಾದ ಆ ಭಯಂಕರ ಅಪಮಾನದಿಂದ ಮುರಲಾರಾಣಿಗೆ ಮಾತ್ರ ವಿಶೇಷವೇನೂ ಅನಿಸಲಿಲ್ಲ, ಯಾಕಂದರೆ ಆ ಸಾಧ್ವಿಯ ಚಿತ್ತದಲ್ಲಿ ಅಪಮಾನ-ಅವಹೇಲನೆಗಳಿಗೆ ಅಂದು ಇಂಬೇ ಇರಲಿಲ್ಲ. ತನ್ನ ಆರಾಧ್ಯದೇವತೆಗೆ-ಪ್ರಿಯಪ್ರಾಣವಲ್ಲಭನಿಗೆ-ಮುಂದಾಗುವ ಅನಿಷ್ಟದ ಆಶಂಕೆಯಲ್ಲೇ ಅವಳು ಮಗ್ನಳಾಗಿ ಹೋಗಿದ್ದಳು!

ಇಷ್ಟು ಗೊಂದಲ, ಮನೋಚಾಂಚಲ್ಯ ಹಾಗು ದುಃಖಗಳುಂಟಾಗಗಲಿಕ್ಕೆ ಅಂದು ಆ ಪಾಟಲಿಪುತ್ರದ ಅಂತಃಪುರದಲ್ಲಾದ ಕಂಕಣಚೋರವೇ ಕಾರಣವಾಗಿತ್ತು.

---

## ಒಡನುಡಿಯಲಾರೆ.

ದಣೇ ಬರೆಹವೆಂದು ಇದಕ್ಕೇ ಅನ್ನುವ ಪರಿಪಾಠವಿದೆ. ಅದೃಷ್ಟವು ಬಿಸಿಲ್ಗುದುರೆಯಂತೆ ಯಾವಾಗಲೂ ಅನಿಶ್ಚಿತವಾದದ್ದೇ. ಅದೃಷ್ಟ-ಹಣೆಯ ಬರೆಹಗಳ-ಬಲದಿಂದಲೇ ಯಾವನು ಇಂದು ಲಕ್ಷಾಧೀಶನಾಗಿರುವನೋ, ಅವನೇ ನಾಳೆ ಭಿಕ್ಷಾಪತಿಯಾಗುವನು; ಯಾವನು ಇಂದು ಸಾಧು-ಸತ್ಪುರುಷರಂತೆ ತೋರುವನೋ, ಅವನೇ ನಾಳೆ ಕಳ್ಳ-ಘಟಿಂಗನಾಗಿ ಕಾಣುವನು. ಇಂದು ಯಾವನು ಕೇವಲ ಲಾಂಛಿತನೂ ಕ್ಷುದ್ರನೂ ಆಗಿರುತ್ತಾನೆಯೋ, ಆತನೇ ನಾಳೆ ಸನ್ಮಾನಿತನೂ ಬಲಾಢ್ಯನೂ ಆಗುವನು; ಯಾವನು ಇಂದು ಪರಮ ಸುಖಿಯಾಗಿರುವನೋ, ಅವನೇ ನಾಳೆ ಕಡು ದುಃಖಿಯಾಗುವನು. ಈ ಅದೃಷ್ಟದ ಚಕ್ರದಲ್ಲಿ ದೇವ-ದೇವತೆಗಳೂ ಕೂಡ ಸಿಕ್ಕು ಒದ್ದಾಡುತ್ತಿರಲು, ನಮ್ಮಂಥ ಪಾಮರರ ಪಾಡೇನು? ಅದೃಷ್ಟವಿಹೀನರ ಬೋಧಪ್ರದವಾದ ಎಷ್ಟೋ ಕಥೆಗಳು ಪುರಾಣಾದಿ ನಮ್ಮ ಪ್ರಾಚೀನ ಗ್ರಂಥಗಳಲ್ಲಿ ತುಂಬಿರುತ್ತವೆ.

ಮುರಲಾರಾಣಿಯ ಅಂತರ್ಗೃಹದಿಂದ ಹೊರಟ ಧನನಂದನು ನೆಟ್ಟಗೆ ತನ್ನ ಮಂತ್ರಣಾಗಾರಕ್ಕೆ ಬಂದನು ಆ ಗೃಹದಲ್ಲಿ ಸಭಾಸದರು ಮಹಾರಾಜನ ಆಗಮನವನ್ನೇ ನಿರೀಕ್ಷಿಸುತ್ತ ಕುಳಿತಿದ್ದರು ನಂದಭೂಪತಿಯು ಅಲ್ಲಿಗೆ ಹೋದ ಕೂಡಲೆ ಗಂಭೀರ ಸ್ವರದಿಂದ:—ಈ ಸಭಾಗೃಹದಲ್ಲಿ ಧರ್ಮಾಧಿಕಾರಿ, ಮುಖ್ಯಪ್ರಧಾನ, ಅಂಗರಕ್ಷಕ ಹಾಗು ಮುಖ್ಯ ಕೊತವಾಲ ಇವರಿಷ್ಟು ಜನರೇ ಇರಬೇಕು, ಉಳಿದವರೆಲ್ಲರೂ ಈಗಲೆ ಹೊರಟು ಹೋಗಬೇಕು, ಎಂದು ಆಜ್ಞೆ ಮಾಡಿದನು

ಮಹಾರಾಜನು ಈ ಪ್ರಕಾರವಾಗಿ ನುಡಿಯಲು, ಅಂಥ ಮಹತ್ವದ ಯಾವುದೊಂದು ಪ್ರಸಂಗವುಂಟಾಗಿರಬೇಕೆಂದು ನೆನೆದು, ರಾಜನಿಗೆ ಬೇಕಾಗಿದ್ದ ಆ ನಾಲ್ವರ ಹೊರತು, ಮಿಕ್ಕವರೆಲ್ಲರೂ ರಾಜನಿಗೆ ಬೊಗ್ಗಿ ಬೊಗ್ಗಿ ನಮಸ್ಕರಿಸುತ್ತ ಆ ಸಭಾಗೃಹದಿಂದ ಲಗುಬಗೆಯಾಗಿ ಹೊರಹೊರಟರು

ಅಲ್ಲಿ ಉಳಿದಿದ್ದ ನಾಲ್ವರಲ್ಲಿ ಮುಖ್ಯ ಮಂತ್ರಿಯೇ ಶ್ರೇಷ್ಠ ಅಧಿಕಾರಿಯೂ, ವಯೋವೃದ್ಧನೂ, ಜ್ಞಾನವೃದ್ಧನೂ ಆಗಿದ್ದನು ಅವನು ಅನೇಕ ವರ್ಷಗಳಿಂದ ಮಗಧ ರಾಜ್ಯದ ಸೇವೆಯನ್ನು ಮಾಡಿದ್ದನು ಈಗಿನ ಮಹಾರಾಜನನ್ನು ಆತನು ಎತ್ತಿ ಕೂಡ ಆಡಿಸಿದ್ದನು ಆದರಿಂದ ಅವನೇ ಈ ಪ್ರಸಂಗದಲ್ಲ ಮುಂದುವರಿದು ಮಹಾರಾಜನನ್ನು ಕುರಿತು:—ರಾಜ-ರಾಜೇಶ್ವರರಾದ ಧನನಂದ ಮಹಾರಾಜರೇ, ಇಂಥೀ ಅಕಾಲದಲ್ಲಿ ಈ ತರಹದ ಗುಪ್ತಮಂತ್ರಾಲೋಚನೆ ಮಾಡುವ ಪ್ರಸಂಗವೇಕೆ ಪ್ರಾಪ್ತವಾಗಿದೆ? ಎಂದು ಪ್ರಶ್ನೆ ಮಾಡಿದನು

ವಿಕೃತ ಧ್ವನಿಯಿಂದ ಮಗಧೇಶ್ವರನು:— ಅಮಾತ್ಯಾ, ಸರ್ವನಾಶವಾಗಿರುತ್ತದೆ! ಮಹಾರಾಣಿಯಾದ ಮುರಲೆಯು ಮಲಗಿದ್ದ ಕಾಲಕ್ಕೆ, ಆಕೆಯ ಎಡಗೈಯೊಳಗಿನ ಮಂತ್ರಪೂತ ರತ್ನಖಚಿತ ಕಂಕಣವನ್ನು ಯಾರೊ ಅಪಹರಿಸಿರುತ್ತಾರೆ ಅವಳ ವಾಮಹಸ್ತದೊಳಗಿನ ಆ ಕಂಕಣದ ಬಗ್ಗೆ ಗುರುದೇವನು ಏನೇನು ಹೇಳಿದ್ದನೆಂಬದು ನಿನಗೆ ಗೊತ್ತೇ ಇದೆ. ರಾಜಗೃಹ-ಅಂತಃಪುರ-ದೊಳಗೆ ಪ್ರತ್ಯಕ್ಷ ಮಹಾರಾಣಿಯ ಶಯ್ಯಾಗಾರದಲ್ಲಿ, ಆಕೆಯ ಮೈಮೇಲಿನ ಒಡವೆಯು ಕಳವಾಗಿರುವದೆಂಬ ಸಂಗತಿಯು ಮಗಧ ರಾಜ್ಯದ ಪುರ ರಕ್ಷಕರಿಗೆ ಎಂಥ ಲಾಂಛನಾಸ್ಪದವು! ಎಲೈ ಮುಖ್ಯ ಕೊತವಾಲನೇ, ಇಷ್ಟು ದಿನಗಳ ವರೆಗೆ ನೀನು ಈ ಧನನಂದನ ಅನುಗ್ರಹವನ್ನು ಮಾತ್ರ ಕಂಡುಕೊಂಡಿರುತ್ತೀ, ಆದರೆ ಇಂದು ನನ್ನ-ಈ ಮಗಧೇಶ್ವರನ ನಿಗ್ರಹದ ಬಿಸಿಯನ್ನಿಷ್ಟು ನಿನಗೆ ತೋರಿಸಬೇಕಾಗಿದೆ. ನಿನ್ನೆ

ರಾತ್ರಿ ರಾಜಗೃಹದ ಒಳಗೂ ಹೊರಗೂ ಯಾರು-ಯಾರು ಪಹರೆ ಮಾಡು ತ್ತಿದ್ದರೋ, ಅವರೆಲ್ಲರನ್ನೂ ಈಗಲೇ ಶೂಲಕ್ಕೇರಿಸುತ್ತೇನೆ. ಆ ವಿಶ್ವಾಸ ಘಾತುಕರಿಗೆ ಈ ಪ್ರಕಾರದ ಶಿಕ್ಷೆ ವಿಧಿಸುವದರಿಂದ, ಸಮಸ್ತ ಆರ್ಯಾ ವರ್ತವೂ ಗಡಗುಟ್ಟಿ ನಡಗಬೇಕು!

ರಾಜನ ಈ ಪ್ರಕಾರದ ನಿಷ್ಠುರ ವಾಣಿಯನ್ನು ಕೇಳಿ ಸಕಲರ ಗೊಂಡೆ ಗಳೂ ಒಣಗಿದವು ಮಗಧೇಶ್ವರನ ಸಿಟ್ಟಿಗಾಹುತಿಯಾದ ಪ್ರಾಣಿಯು ಅದು ವರೆಗೆ ಒಬ್ಬನೂ ಉಳಿದಿರಲಿಲ್ಲ. ಆತನ ಆಪ್ಪಣೆಯು ಎಂದೂ ವ್ಯರ್ಥ ವಾಗುತ್ತಿರಲಿಲ್ಲ. ಮಗಧ ದೇಶದ ಸರ್ವ ಪ್ರಜೆಗಳೂ ಅವನ ಭ್ರೂಕ್ಷೇಪಕ್ಕೆ ಅಂಜಿ ನಡೆಯುತ್ತಿದ್ದರು

ಆಗ ಆ ವೃದ್ಧಮಂತ್ರಿಯು ಕೈಜೋಡಿಸಿ:— ಮಹಾರಾಜ, ಈ ಗುಹ್ಯೆಯ ಶೋಧಕ್ಕಾಗಿ ನಮಗೆ ಕೆಲವು ಸಮಯವನ್ನು ಕೊಡಬೇಕು ನಾವೆಲ್ಲರೂ ಕೂಡಿ ಯಾವ ಬಗೆಯಿಂದಲೇ ಯಾಕಾಗಲೊಲ್ಲದು, ಮಹಾ ರಾಣಿಯ ಅಪಹೃತ ಕಂಕಣವನ್ನು ದೊರೆಕಿಸಿ ಕೊಡುತ್ತೇವೆ.

ಮಂತ್ರಿಯ ಈ ಮಾತಿಸಿಂದ ಮಗಧೇಶ್ವರನು ಪ್ರಕೃತಿಸ್ಥನಾದನು ಹೃದಯಸ್ಥ ಚಿಂತೆಯು ದೂರಾದ್ದರಿಂದ, ಅವನು ಪ್ರಸನ್ನಮುಖದಿಂದ:— ಒಳ್ಳೇದು; ಈ ಗುಹ್ಯೆಯ ಶೋಧಕ್ಕಾಗಿ ನಾನು ನಿಮಗೆ ಒಂದು ತಿಂಗಳ- ಸಂಪೂರ್ಣ ೩೦ ದಿನಗಳ-ಅವಧಿಯನ್ನು ಕೊಟ್ಟಿರುತ್ತೇನೆ. ಇಂದಿನಿಂದ ಮೂವತ್ತೊಂದನೆಯ ದಿನದ ಪ್ರಭಾತಕಾಲದಲ್ಲಿ ಕಳೆದು ಹೋದ ಆ ಕಂಕಣವು ಪುನಃ ನನ್ನೆದುರಿಗೆ ಬರದೆ ಇದ್ದರೆ, ಈಗ ಈ ಮಂತ್ರಣಾಗಾರ ದಲ್ಲಿರುವ ಯಾವ ವ್ಯಕ್ತಿಯನ್ನೂ ನಾನು ಕ್ಷಮಿಸತಕ್ಕವನಲ್ಲ! ಎಚ್ಚರಿಕೆ!!

ಮಗಧೇಶ್ವರನು ಇದಕ್ಕೂ ಹೆಚ್ಚು ಮಾತಾಡದೆ, ಲಗುಬಗೆಯಿಂದ ಆಸ್ಥಾನದಿಂದ ಹೊರಬಿದ್ದನು. ರಾಜನು ಹೋಗಿ ಎಷ್ಟೋ ಹೊತ್ತಾದರೂ, ಅಲ್ಲಿಯವರೊಬ್ಬರ ಬಾಯಿಂದಲೂ ಯಾವ ಶಬ್ದವೂ ಹೊರಡಲಿಲ್ಲ ಬಳಿಕ ಆ ನಾಲ್ವರೂ ಮೂಕ ಪ್ರಾಣಿಗಳಂತೆ, ಮಂದಗತಿಯಿಂದ ಆ ಸಭಾಸ್ಥಾನ ದಿಂದ ಎದ್ದು ಹೋದರು

ಅವರುಗಳು ಬೇರೆ ಎಲ್ಲಿಯೂ ಹೋಗದೆ, ರಾಜಪ್ರಾಸಾದದ ಪಕ್ಕದ ಲ್ಲಿಯೇ ಇದ್ದ ಸಚಿವಶ್ರೇಷ್ಠನ ನೆಲಮನೆಯೊಳಗಿನ ಗುಪ್ತ ಮಂತ್ರಣಾಗಾರ ವನ್ನು ಸರಸರನೆ ಸೇರಿದರು. ಮಗಧರಾಜ್ಯದ ಸಚಿವತ್ವವನ್ನು ವಹಿಸಿದ್ದ ಆ ಮುಖ್ಯಮಂತ್ರಿಯು ಮುಪ್ಪಾಗಿದ್ದನು ರಾಜ್ಯದಲ್ಲ ಎಂಥ ಅಘಟಿತ ಘಟ ನೆಯುಂಟಾದರೂ ಮುಖ್ಯಾಮಾತ್ಯನು ಹಾ ಹಾ ಅನ್ನುವಷ್ಟರಲ್ಲಿ ಅದರ

ಇಂಗಿತವನ್ನು ತಿಳಿದು ಸರಿಪಡಿಸುತ್ತಿದ್ದನು, ಆದರೆ ಧೀರಬುದ್ಧಿಯೆಂಬ ಹೆಸರಿನ ಆ ಮಂತ್ರಿಯ ತೀಕ್ಷ್ಣಬುದ್ಧಿಯೂ, ಇಂದಿನ ಈ ಪ್ರಸಂಗದಿಂದ ಮಾತ್ರ ತೀರ ಮಸಣಿಸಿ ಹೋಗಿ, ಕೆಲಸಕ್ಕೆ ಬಾರದಾಯಿತು!

ಮಗಧೇಶ್ವರನ ರಾಜಪುರಿಯಲ್ಲಿ ಪಹರೆಯ ಬಂದೋಬಸ್ತು ಚೆನ್ನಾಗಿ ಇತ್ತು. ಆ ಅರಮನೆಯ ಸುತ್ತಲೂ ಆಕಾಶವನ್ನು ಮುಟ್ಟುವಂಥ ಎತ್ತರವಾದ ಪ್ರಸ್ತರಮಯ ಭವ್ಯಗೋಡೆಗಳು ಇದ್ದು, ಆ ಗೋಡೆಗಳ ಹೊರಮಗ್ಗಲಿಗೆ ಪೂರ್ವ ದಿಕ್ಕಿನಲ್ಲಿ ಪ್ರಚಂಡವಾದ ಭಾಗೀರಥಿಯು ಹರಿಯುತ್ತಿದ್ದಳು. ಉಳಿದ ದಿಕ್ಕುಗಳಲ್ಲಿ ನೀರಿನಿಂದ ಹೊರಚೆಲ್ಲುತ್ತಿದ್ದ ಆಳವಾದ ಕಂದಕಗಳು ಇದ್ದವು. ಆ ಅರಮನೆಯಲ್ಲಿ ಮೂರು ಪ್ರಾಕಾರಗಳಿದ್ದು, ಮೊದಲಿನ ಪ್ರಾಕಾರದಲ್ಲಿ ಮಹಾರಾಜ ನಂದನ ಅಂತಃಪುರವಿತ್ತು; ಮಧ್ಯ ಪ್ರಾಕಾರವು ರಾಣೀವಾಸದ್ದು; ಕಡೆಯ ಪ್ರಾಕಾರದಲ್ಲಿ ದಾಸಿಯರೂ, ಸ್ತ್ರೀ ಕಾವಲುಗಾರರೂ ಇರುತ್ತಿದ್ದರು. ಇಂಥ ದೊಡ್ಡ ಅರಮನೆಗೆ ಉತ್ತರದಿಕ್ಕಿನಲ್ಲಿ ಒಂದೇ ಮಹಾದ್ವಾರವಿದ್ದು, ಅಲ್ಲಿ ಬಿಚ್ಚುಗತ್ತಿಯ ಪಹರೆಯು ಹಗಲು-ರಾತ್ರಿಗಳೆನ್ನದೆ ಒಂದೇಸವನೆ ಇರುತ್ತಿತ್ತು. ಇದರ ಹೊರತು ರಾಣೀವಾಸದ ಸುತ್ತುಮುತ್ತ ಹಬಸೀಜಾತಿಯ ಸ್ತ್ರೀಯರ ಪಹರೆಯಿರುತ್ತಿತ್ತು. ರಾತ್ರಿಯ ಪ್ರತಿಯೊಂದು ಪ್ರಹರದ ಪ್ರಾರಂಭಕ್ಕೆ ಮುಖ್ಯ ಪಹರೆಯವನು ತಾನು ಸ್ವತಃ ಬಂದು, ಬಾಗಿಲುಗಳನ್ನು ನೋಡಿ, ಸರತಿ ತೀರಿದ ಪಹರೆಯವರನ್ನು ತನ್ನೆದುರಿಗೆ ವಿಶ್ರಾಂತಿಗೆ ಕಳಿಸಿ, ಹೊಸಬರನ್ನು ಯೋಜಿಸುತ್ತಿದ್ದನು. ಪ್ರತಿಯೊಂದು ಮಹಾಲಿನ ಪ್ರವೇಶದ್ವಾರಗಳ ಬೀಗದ ಕೈಗಳು ಅವನ ಹತ್ತರವೇ ಇರುತ್ತಿದ್ದವು. ಇಷ್ಟು ಸುರಕ್ಷಿತವಾದ ಅಂತಃಪುರದೊಳಗಿನ ಪಟ್ಟದರಸಿಯ ಶಯ್ಯಾಗಾರದಲ್ಲಿ ಪ್ರವೇಶಿಸಿ, ಅವಳ ಮೈ-ಮೇಲಿನ ರತ್ನಖಚಿತ-ಮಂತ್ರಪೂತ ಕಂಕಣವನ್ನು ಅದಾವ ಸಾಹಸಿಯು ಕಳವು ಮಾಡಿರಬಹುದೆಂಬುದು ಧೀರಬುದ್ಧಿಗೂ, ಅವನ ಮಂತ್ರಣಾಗಾರದಲ್ಲಿದ್ದ ಉಳಿದ ಮೂವರಲ್ಲಾರಿಗೂ ತಿಳಿಯಲೊಲ್ಲದು. ಎಲ್ಲರೂ ನತಮುಖರಾಗಿ ಮೌನದಿಂದ ಕುಳಿತುಕೊಂಡಿದ್ದರು. ಕಡೆಗೆ ಸಚಿವಶ್ರೇಷ್ಠನೇ:

ಧೀರಬುದ್ಧಿ:—ಮಿತ್ರರೇ, ಈ ಕಳವನ್ನು ಯಾರು ಮಾಡಿರಬಹುದೆಂದು ನಿಮಗನಿಸುತ್ತದೆ? ನಿಮ್ಮ ನಿಮ್ಮ ಮತವನ್ನು ಒಬ್ಬೊಬ್ಬರೇ ಸ್ಪಷ್ಟವಾಗಿ ತಿಳಿಸಬೇಕು. ಯಾರೂ ಯಾರ ಭಿಡೆಯನ್ನೂ ಇಡಬಾರದು.

ಧನನಂದನ ಅಂಗರಕ್ಷಕ:—ಮಹಾಶಯರೇ, ಈ ನಿಂದ್ಯಕೃತ್ಯವನ್ನು ಮಹಾರಾಜರ ಈ ಮೊದಲಿನ ಪಟ್ಟದರಸಿಯಾಗಿದ್ದ ಹಾಗು ಪ್ರಕೃತದಲ್ಲಿ

ಮಹಾರಾಜರ ಅವಕೃಪೆಗೆ ಪಾತ್ರಳಾಗಿ ಅಪಮಾನ ಹೊಂದಿರುವ ರಾಣೀ ರಜತಕುಮಾರಿಯೇ ಮಾಡಿಸಿರಬಹುದೆಂದು ನನ್ನ ಅನುಮಾನವಿರುತ್ತದೆ

ಧರ್ಮಾಧಿಕಾರಿ:—ಅವಳು ಈಗ ಎಲ್ಲಿರುತ್ತಾಳೆ? ಪುರಪ್ರಾಂತದ ಯ ವಿಲಾಸಕಾನನದಲ್ಲಿ ವಾಸಿಸಿರುವವಳು ಅವಳೇ ಅಲ್ಲವೇ?

ಮುಖ್ಯ ಕೊತವಾಲ:—ವಿಲಾಸಕಾನನದಲ್ಲಿ ಇರುವವಳು ರಾಣೀ ರಜತಕುಮಾರಿಯಲ್ಲವೆಂದು ನಾನು ಖಂಡಿತವಾಗಿ ಹೇಳಬಲ್ಲೆನು ರಜತ ಕುಮಾರಿಯು ಈಚೆಗೆ ಈ ಪಾಟಲೀಪುತ್ರದಲ್ಲಿಲ್ಲ. ಮಹಾರಾಜರ ಅನು ಮತಿ ಪಡೆದು, ತನ್ನ ಅಪ್ಪನ ಕಡೆಗೆ ಹೊರಟು ಹೋಗಿರುತ್ತಾಳೆ

ಅಂಗರಕ್ಷಕ:— ಛೇ! ಹಾಗಲ್ಲ ರಾಣೀ ರಜತಕುಮಾರಿಯೇ ಮಹಾ ರಾಜರನ್ನು ಪುನಃ ವಶಮಾಡಿಕೊಳ್ಳುವದಕ್ಕಾಗಿ ಆ ವಿಲಾಸಕಾನನದಲ್ಲಿ ಹೋಗಿರುತ್ತಾಳೆಂದು ಜನರಲ್ಲಿ ಪ್ರವಾದವಿರುತ್ತದೆ ನಾವು ಮಹಾರಾ ಜರ ಅಂಗರಕ್ಷಕರಿರುವದರಿಂದ, ಮಹಾರಾಜರು ಹೋಗುವ ಪ್ರತಿಯೊಂದು ಸ್ಥಳದಲ್ಲೂ ನಮಗೆ ಅನಿರ್ಬಂಧವಾಗಿ ಪ್ರವೇಶವುಂಟು; ಆದರೆ ಇತ್ತೀಚೆಗೆ ಆ ವಿಲಾಸಕಾನನದಲ್ಲಿ ಮಹಾರಾಜರೊಬ್ಬರ ಹೊರತು, ಬೇರೆ ಯಾರಿಗೂ ಪ್ರವೇಶವಿರುವದಿಲ್ಲ ಆದರಿಂದಲೇ ಅಲ್ಲಿ ರಾಣೀ ರಜತಕುಮಾರಿಯೇ ವಾಸಿ ಸುತ್ತಿದ್ದು, ತಾನು ಮಹಾಜರನ್ನು ಯಾವ ಬಗೆಯಿಂದ ವಶಪಡಿಸಿಕೊಳ್ಳ ಹತ್ತಿರುವಳೆಂಬ ಸುದ್ದಿ ಕೂಡ ಈ ಮಾಗಧೀ ಪ್ರಜೆಗಳಿಗೆ ತಿಳಿಯಬಾರ ದೆಂದು ಅವಳು ಹಾಗೆ ಅಲ್ಲಿ ಹೋಗಲಿಕ್ಕೆ ಇತರರಿಗೆ ಪ್ರತಿಬಂಧ ಮಾಡಿರ ಬಹುದಾಗಿದೆಯೆಂದು ನನಗನಿಸುತ್ತದೆ

ಧೀರಬುದ್ಧಿಯು ಮುಖ್ಯ ಕೊತವಾಲನನ್ನು ಕುರಿತು:—ಕೊತವಾ ಲನೇ, ಅಲ್ಲಿರುವ ದಾಸಿಯರನ್ನಾದರೂ ನೋಡಿರುವಿಯಾ? ರಜತಕುಮಾ ರಿಯ ದಾಸಿಯರೆಲ್ಲರೂ ನಿನ್ನ ಪರಿಚಯದವರಷ್ಟೇ?

ಕೊತವಾಲ:—ಅವರೆಲ್ಲರೂ ನನ್ನ ಪರಿಚಯದವರೇ ಇದ್ದರು; ಆದರೆ ಈಗ ವಿಲಾಸಕಾನನದ ಪ್ರವೇಶದ್ವಾರದ ಬಳಿಯಲ್ಲಿ ಕಾಣುವ ದಾಸಿ ಯರಂತೂ ಅವರಲ್ಲ.

ಅಂಗರಕ್ಷಕ.—ಮುರಲಾರಾಣಿಯಲ್ಲಿ ಪ್ರೀತಿ ತಾಳಿದ ಮಹಾರಾಜರ ಮನಸ್ಸನ್ನು ತಿರುಗಿಸಿ, ತನ್ನಲ್ಲಿ ಆಕರ್ಷಿಸಲೆತ್ನಿಸುವ ರಜತಕುಮಾರಿಯು ಮಹಾ ಮಾಯಗಾರ್ತಿಯು. ಅವಳು ಬಾಗಿಲ ಬಳಿಯಲ್ಲಿ ಬೇರೆ ಹೊಸ ದಾಸಿಯರನ್ನು ನೇಮಿಸಿರಬಹುದು ಮುರಲಾರಾಣಿಯು ಕೈಯೊಳಗಿನ ಆ

ಮಂತ್ರಪೂತ ಕಂಕಣದ ಅಪಹರಣದಿಂದ ಈ ಇಡಿಯ ಮಗಧದೇಶದಲ್ಲಿ ಯಾರಿಗಾದರೂ ಸಮಾಧಾನವಾಗುವ ಸಂಭವವಿದ್ದರೆ, ಅದು ಆ ರಾಣಿ ರಜತಕುಮಾರಿಗೇ ಹೋಯಿತು, ಅನ್ಯರಿಗಲ್ಲ. ಆದುದರಿಂದ ಅವಳೇ ಈ ಹೇಯ ಕೃತಿಯನ್ನು ಬಹು ಸಾಹಸದಿಂದ ಮಾಡಿಸಿರಬಹುದಾಗಿದೆ.

ಅಂಗರಕ್ಷಕನ ಮಾತಿಗೆ ಧೀರಬುದ್ಧಿಯೂ, ಧರ್ಮಾಧಿಕಾರಿಯೂ ತಲೆದೂಗಿದರು ಮುಖ್ಯ ಕೊತವಾಲನು ಮಾತ್ರ ಅದಕ್ಕೆ ವಿರುದ್ಧವಾಗಿ ಮಾತಾಡಿದನು ಆಗ ಆ ನಾಲ್ವರಲ್ಲಿಯೇ ಪ್ರಚಂಡವಾದ ವಾಗ್ಯುದ್ಧಕ್ಕೆ ಪ್ರಾರಂಭವಾಯಿತು. ಕಡೆಗೆ ಧರ್ಮಾಧಿಕಾರಿಯು ಎಲ್ಲರನ್ನೂ ಸುಮ್ಮನಿರಿಸಿ:— ಈ ಸೂಕ್ಷ್ಮ ವಿಷಯವು ಬಹಿರಂಗಕ್ಕೆ ಬೀಳುವ ಹಾಗೆ ನಾವು ಇಷ್ಟು ಗಟ್ಟಿಯಾಗಿ ಮಾತಾಡಬಾರದು. ಈ ವಿಷಯದ ಸತ್ಯಾಂಶವನ್ನು ತಿಳಿಯಬೇಕಾದರೆ, ನಮ್ಮವರಲ್ಲಾರಾದರೂ ಹೋಗಿ, ಮುರಲಾರಾಣಿಗೆ ಭೇಟಿಯಾಗಿ, ಅವಳಿಗೂ ರಾಣೀ ರಜತಕುಮಾರಿಗೂ ಮನಸಾ-ಮನಸಾ ಹೇಗಿದೆಯೆಂಬದನ್ನು ಮೊದಲು ಪರೀಕ್ಷಿಸಿಕೊಳ್ಳಬೇಕು ತದನಂತರ ಮುಂದಿನ ಆಲೋಚನೆ ಮಾಡಬೇಕು. ಹೇಳಿರಿ, ಮಹಾರಾಣಿ ಮುರಲೆಯನ್ನು ಭೇಟಿಯಾಗಿ, ಅವಳಿಂದ ಈ ವಿಷಯವನ್ನು ತಿಳಿದು ಬರಲಿಕ್ಕೆ ಯಾರು ಸಮರ್ಥರಿರುವರೆಂಬದನ್ನು? ಎಂದು ಕೇಳಲು, ಎಲ್ಲರೂ ಮೂಕರಾಗಿ ಬಿಟ್ಟರು.

ಕೆಲ ಕಾಲದ ಮೇಲೆ ಪಕ್ವಕೇಶನಾದ ಧೀರಬುದ್ಧಿಯು:— ನಾನೇ ಹೋಗಿ ಬರುವೆನು. ಎಂದ ಮಾತನ್ನು ಕೇಳಿ. ಉಳಿದ ಮೂವರೂ ಆ ಮಂತ್ರಣಾಗಾರದಿಂದ ಹೊರಬಿದ್ದು, ತಮ್ಮ ತಮ್ಮ ಮನೆಯ ದಾರೀ ಹಿಡಿದರು.

ಧೀರಬುದ್ಧಿಯು ಆ ಸಂಪೂರ್ಣ ದಿನವನ್ನು ಆ ಕಂಕಣಚೋರದ ಆಲೋಚನೆಯಲ್ಲಿಯೇ ಕಳೆದನು. ಸಂಜೆಯಾಗಿ ಮಬ್ಬಾದರೂ, ಅವನಿಗೆ ಆ ವಿಷಯದಲ್ಲಿ ಯಾವದೊಂದು ಸಯುಕ್ತಿಕ ವಿಚಾರವು ಬಗೆಬೀಳಲಿಲ್ಲ. ಹೀಗೆ ಅವನು ಚಿಂತಾಸಕ್ತನಾಗಿರಲು. ಒಬ್ಬ ಗುಪ್ತಪ್ರಣಿಧಿ(ಹೇರ)ಯು ಅವನ ಸಮೀಪಕ್ಕೆ ಬಂದು, ಪದ್ಧತಿಯ ಮೇರೆಗೆ ಅಭಿವಂದಿಸಿ, ಅವನ ಕೈಗೊಂದು ಥೈಲಿಯನ್ನಿತ್ತನು.

ಕೂಡಲೆ ಧೀರಬುದ್ಧಿಯು ಲಗುಬಗೆಯಿಂದ ಆ ಥೈಲಿಯ ಮೊಹರನ್ನು ಒಡೆದು, ಥೈಲಿಯನ್ನು ಬಿಚ್ಚಿ, ಒಳಗಿನ ತಾಡವಾಲಿಯ ಪತ್ರವನ್ನು ತೆಗೆದನು. ದೀಪದ ಬೆಳಕನ್ನು ಥಾಳಾಗಿ ಮಾಡಿ, ಕಣ್ಣಿಗೆ ಚಾಳೀಸನ್ನು ಹಾಕಿ

ಕೊಂಡು, ಅವನು ಅದನ್ನು ಓದತೊಡಗಿದನು. ಆ ಪತ್ರವು ಸಂಕೇತ ಲಿಪಿ ಯಲ್ಲಿ ಬರೆದಿತ್ತು. ಆ ಪತ್ರದ ಶಿರೋಭಾಗದಲ್ಲಿ ಒಂದು ತ್ರಿಶೂಲದ ಚಿಹ್ನವಿತ್ತು ಆ ತ್ರಿಶೂಲದ ಚಿಹ್ನವನ್ನು ನೋಡಿದ ಕೂಡಲೆ ಆ ಧೀರ ಬುದ್ಧಿಯು ಗದಗುಟ್ಟಿ ನಡುಗಿದನು, ಮೊದಲೇ ಚಿಂತೆಯಿಂದ ಆವರಿಸಿದ್ದ ಆವನ ಮುಖಮಂಡಲವು, ಘೋರ ದುಶ್ಚಿಂತೆಯಿಂದ ಕಪ್ಪಿಟ್ಟಿತು! ಅವನು ಆ ಪತ್ರದಲ್ಲ ಓದಿ ತಿಳಿದ ಸಂಗತಿ ಯಾವುದೆಂದರೆ:— ಅಪಹೃತವಾದ ಕಂಕಣವನ್ನು ಶೋಧಿಸುವ ಕೆಲಸವು ನಿನ್ನ ಅಳವಿನದಲ್ಲ. ನಿನ್ನ ಪರೀಕ್ಷೆಯು ಕಾಲವೇ ಬಂದೊದಗಿದೆ. ಈ ಪರೀಕ್ಷೆಯಲ್ಲಿ ನಿನ್ನ ಸಂಪೂರ್ಣ ಅಪಜಯ ವಾಯಿತೆಂದು ಜಗಜ್ಜಾಹೀರಾದ ಒಂದೆರಡು ದಿನಗಳಲ್ಲಿಯೇ, ಆ ಮಂತ್ರ ಪೂತ ಕಂಕಣವನ್ನು ಅಪಹರಿಸಿರುವವನು ತಾನೇ ಸ್ವತಃ ಕಂಕಣ ಸಹಿತ ವಾಗಿ ಬಂದು ಮಹಾರಾಜನೆಡೆಗೆ ಹಾಜರಾಗುವನು.

ಈ ಸಂಗತಿಯನ್ನು ಮನನ ಮಾಡಿದೊಡನೆ, ಆ ವೃದ್ಧ ರಾಜ ಮಂತ್ರಿಯು ಒಂದಿಷ್ಟು ಉತ್ತೇಜಿತನಾಗಿ ತಟ್ಟನೆ ಎದ್ದು ನಿಂತನು ಯಾವ ಪ್ರಣಿಧಿಯು ಆ ಪತ್ರವನ್ನು ತಂದಿದ್ದನೋ, ಅವನನ್ನು ಉಚ್ಚಕಂಠದಿಂದ ಕರೆದನು. ಆ ಹೇರನು ಬಂದು ಮೊದಲಿನಂತೆ ಅಮಾತ್ಯನನ್ನು ಅಭಿ ವಂದಿಸಿ, ಕೈ ಜೋಡಿಸಿಕೊಂಡು ನಿಂತನು ಆಗ ಧೀರಬುದ್ಧಿಯು ಗಂಭೀರ ಸ್ವರದಿಂದ:—ನಿನಗೆ ಈ ಪತ್ರವು ಎಲ್ಲಿ ದೊರೆಕಿತು? ಯಾರು ಕೊಟ್ಟರು?

ಪ್ರಣಿಧಿಯು:—ಮಹಾಕಾಲಭೈರವನ ಗುಡಿಯೊಳಗೆ ವಾಸವಾಗಿ ರುವ ಓರ್ವ ಸಂನ್ಯಾಸಿನಿಯು ನನಗೀ ಪತ್ರವನ್ನು ಕೊಟ್ಟಳು. ತಮ್ಮಂಥ ವರಿಗೆ ಮುಟ್ಟಿಸುವ ಪತ್ರವೆಂದ ಬಳಿಕ, ನಾನು ಈ ಬಗ್ಗೆ ಅವಳೆಡೆಯಲ್ಲಿ ಏನೊಂದೂ ಪ್ರಶ್ನೆ ಮಾಡದೆ, ಅದನ್ನು ತಂದು ತಮಗೆ ಮುಟ್ಟಿಸಿರುವೆನು.

ರಾಜಮಂತ್ರಿಯಾದ ಧೀರಬುದ್ಧಿಯು ಸಾಮಾನ್ಯ ವ್ಯಕ್ತಿಯಾಗಿರ ಲಿಲ್ಲ. ಆ ಮಗಧ ರಾಜ್ಯದಲ್ಲಿ ಇಂಥ ಶ್ರೇಷ್ಠಯೋಗ್ಯತೆಯವನು ಇವನೇ ಎಂದು ಆಗ ಪ್ರಸಿದ್ಧಿಯಿತ್ತು. ಆ ಪತ್ರವನ್ನು ಯಾರು ಬರೆದಿರಬಹು ದೆಂಬ ರಹಸ್ಯವನ್ನು ಕಂಡು ಹಿಡಿಯುವ ಕುತೂಹಲವು ಆಗ ಅವನಲ್ಲಿ ಹುಟ್ಟಿತು. ಕೂಡವೆ ಅವನು ಆ ಹೇರನನ್ನು ಕುರಿತು:—ಈ ಪತ್ರವು ಬಹು ಮಹತ್ವದ್ದು. ಈ ಪತ್ರವನ್ನು ಯಾರು ಬರೆದಿರುವರೋ, ಯಾವ ಉಪಾಯದಿಂದಲಾದರೂ ನಾವು ಅವರ ಪತ್ತೆ ಹಚ್ಚಲೇಬೇಕಾಗಿದೆ. ಆದುದ ರಿಂದ ನೀನು ಈಗಲೇ ನನ್ನೊಡನೆ ಆ ಶೈವಸಂನ್ಯಾಸಿನಿಯ ಬಳಿಗೆ ನಡೆ.

ಸಚಿವಶ್ರೇಷ್ಠನು ತನ್ನ ಮಂದಿರದಿಂದ ಆ ಸಂನ್ಯಾಸಿನಿಯ ಕಡೆಗ ನಡೆವಾಗ ಮಧ್ಯರಾತ್ರಿಯು ಮೀರಿತ್ತು. ಅಮಾವಾಸ್ಯೆಯು ಇನ್ನೆರಡು ದಿನಗಳಿಗೇ ಇದ್ದದರಿಂದ, ಆಗ ಕಾರ್ಗತ್ತಲೆಯ ಸಾಮ್ರಾಜ್ಯವು ಆ ಪಾಟಲಿಪುತ್ರದಲ್ಲೆಲ್ಲ ಸಂಪೂರ್ಣವಾಗಿ ಪ್ರಸ್ಥಾಪಿತವಾಗಿತ್ತು. ಧೀರಬುದ್ಧಿಯು ಆ ಪ್ರಣಿಧಿಯೊಡನೆ ಆ ಗಭೀರರಾತ್ರಿಯ ಕಗ್ಗತ್ತಲೆಯಲ್ಲಿ ಮೌನದಿಂದ ಸಾಗಿದನು. ಒಂದೆರಡು ಗಳಿಗೆಯ ವರೆಗೆ ದಾರಿ ಕ್ರಮಿಸಿ, ಅವರು ಶ್ರೀ ಮಹಾಕಾಲೇಶ್ವರನ ವಿಸ್ತಾರವಾದ ಮಂದಿರಕ್ಕೆ ತಲುಪಿದರು. ಆ ದೇವಾಲಯದ ಮಹಾದ್ವಾರವು ಇನ್ನೂ ಮುಚ್ಚಲ್ಪಟ್ಟಿರಲಿಲ್ಲ. ಬಹು ಎತ್ತರವಾದ ಬೆಳ್ಳಿಯ ಜೋಡು ಸಮೆಗಳಲ್ಲಿ ತುಪ್ಪದ ನಂದಾದೀಪಗಳು ಧಾಳಾಗಿ ಉರಿಯುತ್ತಿದ್ದವು. ಆದರಿಂದ ಆ ಪ್ರಶಾಂತ ಸಮಯದಲ್ಲಿ ಅಲ್ಲಿ ಒಂದು ಬಗೆಯ ಮನೋವೇಧಕ ದೃಶ್ಯವು ಕಾಣಿಸುತ್ತಿತ್ತು. ಮಂದಿರವಾಸಿನಿಯಾದ ಶೈವಸಂನ್ಯಾಸಿನಿಯು ವಿಸ್ತೃತವಾಗಿ ಹಾಕಿದ್ದ ಅಜಿನಾಸನದ ಮೇಲೆ ಕುಳಿತು ಗಿಯೇ ಶಕ್ತಿಸ್ತೋತ್ರವನ್ನು ಪಠಿಸುತ್ತಿದ್ದಳು. ಆದರೆ ಆಕೆಯ ಮನಸ್ಸು ಆಗ ಸ್ತೋತ್ರಗಾನದಲ್ಲಿ ತಲ್ಲೀನವಾಗಿರದೆ, ಯಾವುದೊಂದು ಇತರ ಆಲೋಚನೆಯಿಂದ ಆವೃತ್ತವಾಗಿತ್ತೆಂಬದು ಆ ದೀಪದ ಬೆಳಕಿನಲ್ಲಿ ಆಕೆಯ ಮುಖವನ್ನು ಸೂಕ್ಷ್ಮದೃಷ್ಟಿಯಿಂದ ನೋಡಿದವರಿಗೆ ಗೊತ್ತಾಗದೆ ಇರುತ್ತಿರಲಿಲ್ಲ.

ಕೆಲ ಹೊತ್ತಿನಲ್ಲಿ ಗತ್ತಿನಲ್ಲಿ ಪಠಿಸುತ್ತಿದ್ದ ಆಕೆಯ ಸ್ತೋತ್ರಪಠಣವು ಮುಗಿಯಿತು. ಆಗ ಅವಳು ಚಟಕ್ಕನೆ ಎದ್ದು, ಮಹಾಕಾಳಿಸಿಗೆ ಸಾಷ್ಟಾಂಗ ಪ್ರಣಿಪಾತವಂ ಮಾಡಿದಳು. ಆ ಬಳಿಕ ಎದ್ದು ನಿಂತು ದೇವರನ್ನುದ್ದೇಶಿಸಿ ಪ್ರಾರ್ಥಿಸಲಾರಂಭಿಸತಕ್ಕವಳು, ಅಷ್ಟರಲ್ಲಿ ಧೀರಬುದ್ಧಿಯು ಆಕೆಯ ಎದುರಿಗೆ ಬೇಗ ನಿಂತುಕೊಂಡನು. ಮಗಧದೇಶದ ಸರ್ವಶ್ರೇಷ್ಠ ಅಧಿಕಾರಿಯು ಅಂಥ ಆ ಅಪರಾತ್ರಿಯಲ್ಲಿ ಆಕಸ್ಮಿಕವಾಗಿ ತನ್ನೆದುರಿಗೆ ಬಂದು ನಿಂತರೂ, ಆ ತ್ರಿಕಾಲಜ್ಞಳಾದ ಸಂನ್ಯಾಸಿನಿಯು ಅದರಿಂದ ಕೊಂಚವೂ ಅಂಜಲಿಲ್ಲ.

ರಾಜಸಚಿವನಾದ ಧೀರಬುದ್ಧಿಯು ಆ ಸಂನ್ಯಾಸಿನಿಗೆ ಪರಿಚಯದವನು. ಆದರಿಂದ ಅವನು ನಮಸ್ಕಾರ ಮಾಡಿದ ಕೂಡಲೆ ಅವಳು ಅವನನ್ನು ಆಶೀರ್ವದಿಸಿ, ಕೂಡ್ರ ಹೇಳಿ:— ಸಚಿವಶ್ರೇಷ್ಠರೇ, ಈ ಮಧ್ಯರಾತ್ರಿಯಲ್ಲಿ ನೀವು ಇಲ್ಲಿಗೆ ಬಂದ ಕಾರಣವೇನೆಂಬದು ಗೊತ್ತಾಯಿತು. ಯಾಕೆ, ನೀವು ಆ ಪತ್ರದ ಅನುಸಂಧಾನಕ್ಕೇ ಬಂದಿರ ವಿರಲ್ಲವೇ?

ಧೀರಬುದ್ಧಿಯು:-- ತಾಯಿ, ನೀನು ಸಾಕ್ಷಾತ್ ಶಕ್ತಿಸ್ವರೂಪಿಣಿಯಾದ ಭೈರವಿಯು. ಈ ಪಾಟಲಿಪುತ್ರದ ವಿಘ್ನವಿನಾಶಿಯಾದ ಮಹಾಕಾಲಭೈರವನ ಸೇವಿಕೆಯು ಮಾತೇ, ಈ ದೇಶಕ್ಕೆ ಮಹಾವಿಪತ್ಕಾಲವುಂಟಾಗುವಂಥ ಕಠಿಣ ಪ್ರಸಂಗವುಂಟಾಗಿದೆ. ಮಹಾರಾಜರು ಈಗ ಕೇವಲ ಹುಚ್ಚರಂತಾಗಿರುವರು. ಪಟ್ಟದರಸಿಯಾದ ಮುರಲಾರಾಣಿಯು ಒಂದೇಸವನೆ ಬಿಕ್ಕುತ್ತಿರುವಳು. ಇಂದು ಬೆಳಗಿನಲ್ಲಿ ಒಂದು ಗುಪ್ತ ಸಭೆ ಕೂಡಿತ್ತು. ಈ ಕಂಕಣಚೋರನನ್ನು ಹಿಡಿದುಕೊಡದಿದ್ದರೆ, ನಾವೆಲ್ಲರೂ ರಾಜನ ಕೋಪಕ್ಕೆ ಗುರಿಯಾಗಿ ಪ್ರಾಣದಂಡನೆಗೆ ಈಡಾಗಬೇಕಾಗಿರುತ್ತದೆ. ತಾಯಿ, ಈ ವಿಪತ್ತಿನಿಂದ ನಾವು ಪಾರಾಗುವ ಬಗೆಯೇನು? ಈ ಪ್ರಣಿಧಿಯ ಕೈಯಲ್ಲಿ ನೀನು ಕೊಟ್ಟು ಕಳಿಸಿದ ಆ ಪತ್ರವನ್ನು ನಿನಗೆ ಯಾರು ಕೊಟ್ಟರು? ಆ ಸಂಗತಿಯು ತಿಳಿದರೆ ಈ ಕಂಕಣಚೋರನ ಪತ್ತೆಗೆ ವಿಶೇಷ ಸಹಾಯವಾಗುವದು

ಸಂನ್ಯಾಸಿನಿ:-- ಕಂಕಣ ಚೌರ್ಯದ ಸಂಗತಿಯನ್ನು ನಾನು ಈ ಮೊದಲೇ ಕೇಳಿ ತಿಳಿದಿರುವೆನು, ಮತ್ತು ಅದರಿಂದ ಉಂಟಾಗಬಹುದಾದ ಘೋರಪ್ರಸಂಗದ ಕಲ್ಪನೆಯೂ ನನಗಿದೆ ಯಾವ ವ್ಯಕ್ತಿಯು ಆ ಪತ್ರವನ್ನು ನಿನಗೆ ಮುಟ್ಟಿಸುವದಕ್ಕಾಗಿ ನನ್ನ ಕೈಯಲ್ಲಿ ಕೊಟ್ಟು ಹೋಯಿತೋ, ಅದರ ಪರಿಚಯವು ನನಗೆ ಚೆನ್ನಾಗಿರುತ್ತದೆ. ಆದರೆ ನಾನು ಅದರ ಹೆಸರನ್ನು ಒಡನುಡಿಯಲಾರೆನು, ನೀನು ಎಷ್ಟು ಪ್ರಾರ್ಥಿಸಿದರೂ, ಎಂಥ ಹೆದರಿಕೆ-ಬೆದರಿಕೆ ತೋರಿಸಿದರೂ ಅದೇಕೆ, ಪ್ರತ್ಯಕ್ಷ ನನ್ನನ್ನು ಶೂಲಕ್ಕೇರಿಸಿದರೂ ನಾನು ಈ ಸಂಗತಿಯನ್ನು ನಿನಗೆ ತಿಳಿಸುವದಿಲ್ಲ ಸಾಮ್ರಾಜ್ಯದ ಹಿತಕ್ಕಾಗಿ ನಾನು ಅದನ್ನು ನಿನಗೆ ಹೇಳುವದು ಶ್ರೇಯಸ್ಕರವಿದ್ದರೂ, ಆ ವ್ಯಕ್ತಿಗೆ ಕೊಟ್ಟ ವಚನ ಪರಿಪಾಲನೆಗಾಗಿ ನಾನು ಅದನ್ನು ಎಂದಿಗೂ ಹೇಳಲಾರೆನು

# ಮಾಯವಾಯಿತು.

ಸಂನ್ಯಾಸಿನಿಯ ಈ ಪ್ರಕಾರದ ಭಾಷಣವನ್ನು ಕೇಳಿ, ಮಂತ್ರಿವರ್ಯ ಧೀರಬುದ್ಧಿಯು ಪುನಃ ಅವಳ ಅಡಿದಾವರೆಗಳಿಗೆ ಪೊಡಮಟ್ಟು:— ತಾಯೇ ಕಂಕಣಚೋರನು ತಾನು ಸ್ವತಃ ರಾಜದರ್ಬಾರಕ್ಕೆ ಬರುವೆನೆಂದು ಬರೆದು ತಿಳಿಸಿರುತ್ತಾನೆ ಅವನ ಈ ಮಾತಿನ ವಿಷಯವಾಗಿ ವಿಶ್ವಾಸ-ಅವಿಶ್ವಾಸ

ಗಳೆರಡೂ ಉಂಟಾಗುತ್ತವೆ. ಆ ಕಳ್ಳನು ಕೇವಲ ಧನಲೋಭದಿಂದಲೇ ಈ ಕೆಲಸವನ್ನು ಮಾಡಿರುವನೆಂತಲ್ಲ; ಅವನ ಆ ಚೌರ್ಯಕರ್ಮದಲ್ಲಿ ಮತ್ತಾವುದೋ ಒಂದು ರಹಸ್ಯವು ಕೂಳಲ್ಪಟ್ಟಿರುವಂತೆ ತೋರುತ್ತದೆ ಹಾಗಿಲ್ಲದಿದ್ದರೆ ಆವನು ತಾನಾಗಿಯೇ ರಾಜದರ್ಬಾರಕ್ಕೆ ಬರುವುದೇಕೆ? ಆದುದರಿಂದ ಕೃಪಾಘನಳಾದ ತಾಯೇ, ನೀನು ಆತನ ಹೆಸರನ್ನು ತಿಳಿಸು. ಪ್ರಯತ್ನಪೂರ್ವಕವಾಗಿ ಆವನನ್ನು ಹಿಡಿದರೇ ನಾವು ನಮ್ಮ ಕರ್ತವ್ಯ ವನ್ನು ಮಾಡಿದಂತಾಗುತ್ತದೆ ಹೀಗಾಗದೆ, ಅವನೇ ಸ್ವತಃ ಬಂದು ಮಹಾ ರಾಜರೆದುರಿಗೆ ನಿಂತುಕೊಂಡರೆ, ನಮ್ಮ ಕರ್ತವ್ಯಭ್ರಷ್ಟತೆಯ ದಿಗ್ದರ್ಶನ ವಾಗುವದು; ಹಾಗು ಇದುವರೆಗೆ ದಶದಿಕ್ಕುಗಳಲ್ಲಿ ಪಸರಿಸಿದ ನನ್ನ ಕೀರ್ತಿಗೆ ಕಲಂಕವುಂಟಾಗುವದು

ಕೆಲ ಹೊತ್ತು ಆಲೋಚಿಸಿ, ಆ ಶೈವಸಂನ್ಯಾಸಿನಿಯು:— ಮಂತ್ರಿ ವರನೇ, ನೀನನ್ನುವಂತೆ ಪ್ರಯತ್ನಪೂರ್ವಕವಾಗಿ ನೀನು ಆ ಕಳ್ಳನನ್ನು ಹಿಡಿಯದಿದ್ದರೆ ನಿನ್ನ ಕೀರ್ತಿಗೆ ಕಲಂಕತಟ್ಟುವದೇನೋ ನಿಜವು; ಆದರೆ ನಿನ್ನ ಮಾನ-ಮರ್ಯಾದೆಗಳನ್ನುಳಿಸಿಕೊಳ್ಳುವದಕ್ಕಾಗಿ ನಾನು ವಿಶ್ವಾಸ ಘಾತುಕಳಾಗಲೇನು? ನನ್ನನ್ನು ನಂಬಿದವರ ವಿಷಯವಾಗಿ ನಾನೆಂದೂ ವಿಶ್ವಾಸಘಾತುಕಳಾಗಲಾರೆನು ನಿನ್ನಲ್ಲಿ ಅಷ್ಟು ದಕ್ಷತೆಯಿದ್ದರೆ-ಕರ್ತವ್ಯ ಜಾಗರೂಕತೆಯು ಮನೆಮಾಡಿಕೊಂಡಿದ್ದರೆ-ಅವನ್ನೆಲ್ಲ ಈ ಪ್ರಸಂಗದಲ್ಲಿ ಉಪ ಯೋಗಿಸಿ, ಆ ಕಳ್ಳನನ್ನು ಶೋಧಿಸು; ಅಂದರೆ ಅದರಿಂದ ನಿನ್ನ ಕೀರ್ತಿಯು ದ್ವಿಗುಣಿತವಾದೀತು!

ಧೀರಬುದ್ಧಿಯು ಎಷ್ಟು ಪ್ರಯತ್ನಿಸಿದರೂ, ಬೇಕಾದಷ್ಟು ಹೆದರಿಕೆ-ಬೆದರಿಕೆಗಳನ್ನು ತೋರಿಸಿದರೂ ಆ ಸಂನ್ಯಾಸಿನಿಯು ತಿರುಗಿ ಪಿಟ್ಟೆನ್ನಲಿಲ್ಲ; ಅವಳು ಧ್ಯಾನಸ್ಥಳಾಗಿ ಕುಳಿತುಬಿಟ್ಟಳು. ಸಂನ್ಯಾಸಿನಿಯಿಂದ ಆ ಕಳ್ಳನ ಹೆಸರನ್ನು ಒಡನುಡಿಯಿಸಿಕೊಳ್ಳಬೇಕೆಂದು ಆ ಮಂತ್ರಿವರನು ಆ ರಾತ್ರಿಯ ತೃತೀಯ ಯಾಮವನ್ನೆಲ್ಲ ವೆಚ್ಚ ಮಾಡಿದನು ತನ್ನ ಪ್ರಯತ್ನಕ್ಕೆ ಕೊಂ-ಚವೂ ಯಶ ದೊರೆಯದ್ದರಿಂದ, ಅವನು ನಿರಾಶೆಯಿಂದ ಸಂತಪ್ತನಾಗಿ ನಾಲ್ಕನೇ ಪ್ರಹರದ ಪ್ರಾರಂಭಕ್ಕೆ ಆ ಕಾಲಭೈರವನ ಮಂದಿರದಿಂದ ಹೊರ ಹೊರಟನು

ಅಂದು ಅತಿಶಯವಾಗಿ ಕತ್ತಲು ಬಿದ್ದಿದ್ದರಿಂದ, ಆ ವಿಶಾಲವಾದ ಪಾಟಲಿಪುತ್ರದ ರಾಜಬೀದಿಗಳಲ್ಲಿ ಸಹ ಓಡಾಡುವದಕ್ಕೆ ಭಯವುಂಟಾಗು ತ್ತಿತ್ತು; ಆದರೆ ಮುಂದೇನು ಮಾಡಬೇಕೆಂಬ ವಿಚಾರದಲ್ಲಿ ಮಗ್ನನಾಗಿ

ನಡೆದಿದ್ದ ನಮ್ಮ ಧೀರಬುದ್ಧಿಯು ಮಾತ್ರ ಆ ಕಾರ್ಗತ್ತಲೆಗೆ ಕೊಂಚವೂ ಹೆದರಿದ್ದಿಲ್ಲ. ಹೆದರಿದ್ದಿಲ್ಲವೆನ್ನುವದಕ್ಕಿಂತ ಅವನ ಚಿತ್ತಕ್ಕೆ ಬಾಹ್ಯಸೃಷ್ಟಿಯ ವ್ಯಾಪಾರದ ಕಡೆಗೆ ಇಣಿಕಿ ನೋಡಲು ಸ್ವಲ್ಪವೂ ಆಸ್ಪದವಿರದೆ, ಅದು ಕೇವಲ ಆ ಕಂಕಣಚೋರನ ಶೋಧದ ವಿಷಯದಲ್ಲಿಯೇ ತಲ್ಲೀನವಾಗಿ ಬಿಟ್ಟಿತ್ತು. ಧೀರಬುದ್ಧಿಯ ಹಿಂದಿನಿಂದ ನಡೆದಿದ್ದ ಆ ಪ್ರಣಿಧಿಯ ಸ್ಥಿತಿಯು ಮಾತ್ರ ಇದಕ್ಕೆ ತೀರ ವಿಪರೀತವಾಗಿತ್ತು. ರಾತ್ರಿಯಲ್ಲೆಲ್ಲ ನಿದ್ರೆಯಿರದ್ದರಿಂದ ಮೊದಲೇ ಶಕ್ತಿಹೀನವಾಗಿದ್ದ ಅವನ ಕಾಲುಗಳು, ಆ ಭಯಂಕರ ಕಾರ್ಗತ್ತಲೆಯು ಹಾಗು ನಡುನಡುವೆ ಆಗುತ್ತಿರುವ ಗುಡುಗು ಮಿಂಚುಗಳ ದೃಶ್ಯದಿಂದ ಮತ್ತಿಷ್ಟು ಅವಸಾನಗೆಟ್ಟಿದ್ದವು; ಆದರೆ ನೌಕರಿಯ ಪಾಶದಲ್ಲಿ ಸಿಕ್ಕಿದ್ದ ಪಾಪ! ಆ ಬಡ ಪ್ರಣಿಧಿಯು ತನ್ನ ಸ್ಥಿತಿಯನ್ನು ಪಿಟ್ಟೆಂದುಸುರಲಾರದೆ, ನೆಟ್ಟಗೆ ತನ್ನ ಒಡೆಯನನ್ನನುಸರಿಸುತ್ತ ನಾಗಿದ್ದನು.

ಹೀಗೆ ಅವರೀರ್ವರೂ ಸುಮ್ಮನೆ ನಡೆದಿರಲು, ಅಡ್ಡಪಕ್ಕದಿಂದ ತನ್ನನ್ನು ಯಾರೋ ಸ್ಪರ್ಶಮಾಡಿದಂತೆ ಧೀರಬುದ್ಧಿಗೆ ಭಾಸವಾಯಿತು. ನಿಂತಲ್ಲಿಯೇ ನಿಂತು ತನ್ನನ್ನು ಮುಟ್ಟಿದವರ ಕಡೆಗೆ ಧೀರಬುದ್ಧಿಯು ಟಕಮಕವೆಂದು ನೋಡಲಾರಂಭಿಸಿದನು; ಆದರೆ ಆ ಕಾರ್ಗತ್ತಲೆಯಲ್ಲಿ ಅವನಿಗೆ ಏನೂ ಕಾಣಿಸದ್ದರಿಂದ, ನಿರಾಶನಾಗಿ ಸುಮ್ಮನೆ ಭಾಸವಾಗಿರಬಹುದೆಂದು ಬಗೆದು, ಅವನು ಮತ್ತೆ ಸಾಗಲುಪಕ್ರಮಿಸತಕ್ಕವನು; ಅಷ್ಟರಲ್ಲಿ ಒಂದು ಕೋಲುಮಿಂಚು ಮಿಂಚಿ, ಅದರ ಪ್ರಕಾಶವು ಆಗ ಧೀರಬುದ್ಧಿಯನ್ನು ತಾಕಲಾಡಿದ ವ್ಯಕ್ತಿಯ ಮುಖದ ಮೇಲೆ ಬಿದ್ದಿತು. ಆ ಮನುಷ್ಯನು ದೀರ್ಘಕಾಯನೂ, ಕರಾಲವದನನೂ ಎಂಬವು ಧೀರಬುದ್ಧಿಗೆ ತಿಳಿಯಬಂದಿತು.

ಆಗ ಧೀರಬುದ್ಧಿಯು ಆ ಮನುಷ್ಯನನ್ನು ಕುರಿತು:— ನೀನಾರು?

ಆ ಛದ್ಮವೇಷಧಾರಿಯು:— ನೀನು ಈ ಮಗಧದೇಶದ ಮುಖ್ಯ ಮಂತ್ರಿಯೆಂಬದನ್ನೂ, ಈ ಅಪರಾತ್ರಿಯಲ್ಲಿ ಮಹಾಕಾಲಭೈರವನ ಮಂದಿರಕ್ಕೇಕೆ ಹೋಗಿದ್ದಿಯೆಂಬದನ್ನೂ ನಾನು ಬಲ್ಲೆನು; ಹಾಗು ನೀನು ಇಷ್ಟು ಚಂಚಲಚಿತ್ತನಾಗಿಡುವದಕ್ಕೆ ಉಂಟಾದ ಮಹಾರಾಣೀ ಮುರಲೆಯು ಕೈಯೊಳಗಿನ ಕಂಕಣಚೋರದ ಸಂಗತಿಯೂ ನನಗೆ ಗೊತ್ತಾಗಿರುತ್ತದೆ........

ಧೀರಬುದ್ಧಿಯು ಈ ಸಂಗತಿಯನ್ನು ಕೇಳಿ ಮತ್ತಿಷ್ಟು ವಿಸ್ಮಯಚಕಿತನಾದನು. ಇಷ್ಟು ಗುಪ್ತವಾಗಿ ಹೊರಟಿರುವ ತನ್ನ ಹಾಗು ತನ್ನ ಮನಸ್ಸಿನ ಸ್ಥಿತಿಯನ್ನು ಸಂಪೂರ್ಣವಾಗಿ ಬಲ್ಲಂಥ ಈ ವ್ಯಕ್ತಿಯು ಯಾವನಾಗಿರಬಹುದು? ಕೆಲ ಹೊತ್ತು ಭಾವಿಸಿ, ಅವನು ಆ ವ್ಯಕ್ತಿಯ ವಿಷಯ

ವಾಗಿ ಮನಸ್ಸಿನಲ್ಲಿ ಪೂಜ್ಯತೆಯನ್ನು ತಳೆದು:—ಈತನು ಯಾವ ಮಹಾ ಪುರುಷನಾಗಿರಬಹುದು? ನನ್ನ ಅಂತರಂಗದ ಸಂಪೂರ್ಣ ಸಂಗತಿಯನ್ನು ತಿಳಿದ ಈ ವ್ಯಕ್ತಿಯು ಸತ್ಪುರುಷನೇ ಆಗಿರುವನೆಂಬುದರಲ್ಲಿ ಸಂದೇಹವಿಲ್ಲ, ಎಂದಂದುಕೊಂಡು, ಧೀರಬುದ್ಧಿಯು ಆ ಅಪರಿಚಿತ ವ್ಯಕ್ತಿಯ ಪದದ್ವಯ ಗಳಿಗೆ ನಮಸ್ಕಾರ ಮಾಡಹೋಗಲು, ಆ ಆಗಂತುಕನು ಹಿಂದಕ್ಕೆ ಸರಿದು:- ಇಷ್ಟು ಸನ್ಮಾನಕ್ಕೆ ಯೋಗ್ಯನಾದವನು ನಾನಾಗಿರುವದಿಲ್ಲ ಆದರೂ ನಾನು ನಿನಗಷ್ಟು ಸಹಾಯ ಮಾಡಬಂದಿರುತ್ತೇನೆ. ಕಂಕಣಚೋರನನ್ನು ಹಿಡಿಯುವದಾಗದಿದ್ದರೆ, ಎಲ್ಲಿ ಪ್ರಾಣಕ್ಕೆರವಾಗಬೇಕಾದೀತೋ ಎಂದು ಅಂಜುತ್ತಿರುವ ನಿನಗೆ, ತುಸ ಬುದ್ಧಿವಾದವನ್ನು ಹೇಳುವ ಸಲುವಾಗ ನಾನು ನಿನ್ನೆಡಗೆ ಬಂದಿರುತ್ತೇನೆ

ಆ ಅಪರಿಚಿತ ವ್ಯಕ್ತಿಯು ನುಡಿದ ಮಾತುಗಳನ್ನು ಕೇಳಿ, ಆ ಮಗಧ ದೇಶದ ಪ್ರಧಾನಮಂತ್ರಿಯ ಮೈಗೆಲ್ಲ ಚೇಳು ಕಚ್ಚಿದ ಹಾಗಾಯಿತು! ತಾನು ಈ ರಾಜ್ಯದ ಅನುಭವಸ್ಥ ಹಾಗು ಮುಖ್ಯ ಮಂತ್ರಿಯಾಗಿದ್ದು, ತನ್ನ ಮನಸ್ಸಿನ ಸಂಗತಿಗಳನ್ನೆಲ್ಲ ಪಾರಾಯಣ ಮಾಡುವ ಈ ವ್ಯಕ್ತಿಯು ಯಾರಾಗಿರಬಹುದು? ಸತ್ಪುರುಷ ಅಥವಾ ಅದ್ವಿತೀಯ ವ್ಯಕ್ತಿಯಲ್ಲೆಂದು ಇವನು ಹೇಳಿಕೊಳ್ಳುತ್ತಿರುವದರಿಂದಂತೂ ಈತನ ವಿಷಯದಲ್ಲಿ ನನಗೆ ತುಂಬಾ ಸಂಶಯವುಂಟಾಗುತ್ತದೆ. ಹೀಗೆಂದು ಮನದಲ್ಲಿ ಆಲೋಚಿಸಿ ಕೊಂಡು, ಆ ಧೀರಬುದ್ಧಿಯು ಆ ವ್ಯಕ್ತಿಯನ್ನು ಕುರಿತು:—ಮಹಾತ್ಮಾ, ನೀನು ಯಾರೇ ಇರಲೊಲ್ಲಿಯೇಕೆ? ನಾನು ಈ ಮಗಧದೇಶದ ಮುಖ್ಯ ಮಂತ್ರಿಯಾಗಿದ್ದರೂ ನನಗೆ ಆ ಕಂಕಣಚೋರನ ಪತ್ತೆ ಹತ್ತಲೊಲ್ಲದು ಆದುದರಿಂದ ನಾನು ನಿನಗೆ ನಮಸ್ಕಾರ ಮಾಡುತ್ತೇನೆ, ನೀನು ಆ ಕಳ್ಳನ ಹೆಸರನ್ನಷ್ಟು ನನಗೆ ತಿಳಿಸಲೇಬೇಕು.

ಛದ್ಮ ವೇಷಧಾರಿಯಾದ ಆ ಆಗಂತುಕನು:—ಪ್ರಧಾನನೇ, ಆ ಸಂಗತಿಯನ್ನು ತಿಳಿಸುವದಕ್ಕಾಗಿಯೇ ನಾನು ನಿನಗೆ ಈ ಕಾರ್ಗತ್ತಲೆಯ ಸಮಯದಲ್ಲಿ–ಈ ಪಥಮಧ್ಯದಲ್ಲಿ-ಭೇಟಿಯಾಗಿರುತ್ತೇನೆ. ನೀನು ಆ ಕಳ್ಳ ನನ್ನು ಹಿಡಿಯುವದಕ್ಕಾಗಿ ಒಳ್ಳೇ ಆತುರನಾಗಿರುವದು ನಿಜ, ಆದರೆ ನೀನು ಎಂಥ ಬಲೆಯನ್ನೊಡ್ಡಿದರೂ–ಆದೇಕೆ ಈ ಕೆಲಸಕ್ಕಾಗಿ ನೀನು ಪುನಃ ಪುನಃ ಸಾವಿರಾರು ಸಾರೆ ಜನ್ಮ ತಾಳಿ ಬಂದರೂ–ನಿನ್ನಿಂದ ಇದು ಸಾಧ್ಯ ವಿರುವದಿಲ್ಲ ಯಥಾ ಸಮಯಕ್ಕೆ ಆ ಕಳ್ಳನು ತಾನಾಗಿಯೇ ಕಳವಿನ ಮಾಲಿನೊಡನೆ ರಾಜದರ್ಬಾರಕ್ಕೆ ಬಂದು ಸೇರುತ್ತಾನೆ

ಈ ಗಟ್ಟಿಕಡೆಯ ವಾಕ್ಯವನ್ನು ಕೇಳಿ ಧೀರಬುದ್ಧಿಮಂತ್ರಿಯ ಬುದ್ಧಿಯಲ್ಲಿ ಸಂಪೂರ್ಣವಾದ ಅಧೀರತೆಯು ನೆಲೆಗೊಂಡಿತು. ಯಾಕಂದರೆ, ಅವನಿಗೆ ಕಂಕಣಚೋರ ಮಾಡಿದ ಕಳ್ಳನಿಂದಲೂ ಅದೇ ಪ್ರಕಾರದ ಪತ್ರವು ಬಂದಿತ್ತು; ಸಂನ್ಯಾಸಿನಿಯೂ ಅದನ್ನೇ ಹೇಳಿದ್ದಳು; ಈಗ ಈ ದಾರಿಕಾರನೂ ಅದನ್ನೇ ಹೇಳುತ್ತಿರುವನು. ಆ ಮಂತ್ರಿವರನು ತಲೆತಗ್ಗಿಸಿ, ಈ ಒಂದೇ ಮಾತಿನ ವಿಷಯದ ವಿಚಾರವನ್ನು ಕೆಲಕ್ಷಣಗಳವರೆಗೆ ಮಾಡಿ, ಬಳಿಕ ಅವನು ಆ ಆಗಂತುಕನಿಗೆ ಮತ್ತೆ ಏನನ್ನೋ ಕೇಳಬೇಕೆಂದು ತಲೆಯನ್ನೆತ್ತಿ ಆ ವ್ಯಕ್ತಿಯ ಕಡೆಗೆ ನೋಡಿದನು. ಅಷ್ಟರಲ್ಲಿ ಅದು ಆ ಕಾರ್ಗತ್ತಲೆಯಲ್ಲಿ ಎತ್ತೋ ಮಾಯವಾಗಿ ಬಿಟ್ಟಿತ್ತು!

---

# ಚಂಡಾಲ ಮುರಲಾ ರಾಣಿ....

ನಂದಭೂಪತಿಯು ಪ್ರಧಾನಮಂತ್ರಿ, ಧರ್ಮಾಧಿಕಾರಿ ಮುಂತಾದವರಿಗೆ ಕಂಕಣವನ್ನು ಕದ್ದಂಥ ಕಳ್ಳನನ್ನು ಪತ್ತೆ ಹಚ್ಚುವ ಸಲುವಾಗಿ ಕಟ್ಟಪ್ಪಣೆ ಮಾಡಿ, ಆ ಗುಪ್ತಸಭೆಯಿಂದ ಹೊರಟನು. ಮತ್ತೆಲ್ಲಿಯೂ ಹೋಗದೆ, ನೆಟ್ಟಗೆ ತನ್ನ ಅಶ್ವಶಾಲೆಗೆ ಬಂದನು, ಹಾಗು ಅಲ್ಲಿಯ ಅಶ್ವಪಾಲಕನಿಗೆ ತನ್ನ ಕುದುರೆಗೆ ಥಡಿ ಹಾಕಿ ಸಜ್ಜುಗೊಳಿಸಲಿಕ್ಕೆ ತಿಳಿಸಿದನು. ಉಚ್ಚೈಶ್ರವದಂಥ ಸುಂದರವೂ ಮದೋನ್ಮತ್ತವೂ ಆದ ತುರಂಗವು ಚಿನ್ನ-ರತ್ನಗಳಿಂದ ಪರಿಶೋಭಿಸಲ್ಪಡುವ ಥಡಿಯನ್ನು ಹೇರಿಕೊಂಡು ಮಹಾರಾಜನ ಮುಂದೆ ಒಳ್ಳೇ ಆತುರತೆಯಿಂದ ಬಂದು ನಿಂತಿತು. ನಂದರಾಜನು ಕುದುರೆಯ ಲಗಾಮನ್ನು ಕೈಯಲ್ಲಿ ಹಿಡಿದುಕೊಂಡು, ಒಂದು ದೀರ್ಘನಿಶ್ವಾಸಗರೆದು, ಆ ಕುದುರೆಯನ್ನು ಆರೋಹಿಸಿದನು. ಮಹಾರಾಜನು ತುರಂಗವನ್ನಾರೋಹಿಸಿದ ಕೂಡಲೆ ಮಹಾದ್ವಾರದೊಳಗಿನ ಚೌಘಡೆಯು (ನೌಬತ್) ಬಾರಿಸಹತ್ತಿತು; ಆದರೆ ಕರ್ಮ-ಧರ್ಮ ಸಂಯೋಗದಿಂದ ಅಂದು ಆ ಚೌಘಡೆಯ ನಾದವು ಸುನಾದವಾಗಿರಲಿಲ್ಲ. ಅದು ಭಯ ಮತ್ತು ದುಃಖಗಳನ್ನು ಸೂಚಿಸುವ ದುರ್ನಾದವಾಗಿತ್ತು! ಮೊದಲೇ ಕ್ರೋಧದಿಂದ ಸಂತಪ್ತನಾಗಿದ್ದ ನಂದರಾಜನಿಗೆ, ಆ ಪ್ರಲಯಸೂಚಕ ಚೌಘಡೆಯ ನಾದವು ರುಚಿಸುವ ಬಗೆ ಹೇಗೆ? ಕೂಡಲೆ ಅವನು ಒಬ್ಬ ಸೇವಕನಿಗೆ ಆ ಚೌಘಡೆ

ಯನ್ನು ನಿಲ್ಲಿಸುವ ವಿಷಯವಾಗಿ ತಿಳಿಸಿ, ತಾನು ಕುದುರೆಯ ಲಗಾಮನ್ನು ಸಡಿಲು ಬಿಟ್ಟನು; ಹಾಗು ಅದನ್ನು ವಿಲಾಸಕಾನನದ ಮಾರ್ಗದಿಂದ ನಡೆಯಿಸಲುಪಕ್ರಮಿಸಿದನು.

ರಾಜನ ಕುದುರೆಯು ಮಹಾದ್ವಾರದಿಂದ ಹೊರಬಿದ್ದ ಕೆಲ ಕ್ಷಣಗಳಲ್ಲಿಯೇ ಮತ್ತೆ ಇಬ್ಬರು ಶೀಘ್ರಗಾಮಿ ಅಶ್ವಾರೋಹಿಗಳು ಭರದಿಂದ ರಾಜನ ತುರಂಗವನ್ನು ಅನುಸರಣ ಮಾಡಿದರು. ಅವರನ್ನು ನೋಡಿ ರಾಜನು ತನ್ನ ಕುದುರೆಯನ್ನು ತುಸ ತಡೆದು ನಿಲ್ಲಿಸಿ, ಕಠೋರಧ್ವನಿಯಿಂದ:- ಅಂಗರಕ್ಷಕರೇ, ನೀವು ಎಲ್ಲಿಗೆ ನಡೆದಿರುವಿರಿ? ಎಂದು ಕೇಳಿದನು.

ಅಂಗರಕ್ಷಕರು ಮಹಾರಾಜನ ಮುಖಭಾವವನ್ನು ನೋಡಿ ನಡುಗಿ, ಅವನತ ಮುಖದಿಂದ:—ನಂದಮಹಾರಾಜರಿಗೆ ಜಯವಾಗಲಿ! ಒಬ್ಬರೇ ಹೊರಟಿರುವ ಮಹಾರಾಜರ ಪಾರ್ಶ್ವವರ್ತಿಗಳಾಗಿ ಸಾಗಬೇಕೆಂದು ನಾವು ಹೊರಟಿರುವೆವು

ಕ್ರೋಧಸಂತಪ್ತನಾಗಿ, ಕಿಡಿಯುದುರಿಸುವ ನೇತ್ರಗಳಿಂದ ಆ ಅಂಗರಕ್ಷಕರ ಕಡೆಗೆ ನೋಡುತ್ತ ನಂದಭೂಪತಿಯು:–ಹೀಗೆ ನನ್ನನ್ನು ಅನುಸರಣ ಮಾಡಲು ನಿಮಗೆ ಯಾರು ಆಜ್ಞೆ ಮಾಡಿರುತ್ತಾರೆ?

ನಾವು ಯಾರ ಅಪ್ಪಣೆಯಿಂದಲೂ ಈ ಕೆಲಸವನ್ನು ಕೈಕೊಂಡಿರುವದಿಲ್ಲ. ಮಹಾರಾಜನ ಅಂಗರಕ್ಷಕರಾದ ನಮ್ಮ ಕರ್ತವ್ಯಪಾಲನೆಗಾಗಿಯೇ ನಾವು ನಡೆದಿರುತ್ತೇವೆ, ಎಂದು ಅವರಲ್ಲಿಯ ಒಬ್ಬನು ಮೆಲ್ಲನೆ ನುಡಿದನು.

ಅಂಗರಕ್ಷಕನ ಆ ಸೌಮ್ಯ ಹಾಗು ಯಥಾರ್ಥ ಉತ್ತರವನ್ನು ಕೇಳಿಕೊಳ್ಳುವಷ್ಟು ಕೂಡ ಸಹನಶಕ್ತಿಯಿರದ ಆ ನಂದನು, ಅವರನ್ನು ಬಾಯಿಗೆ ಬಂದ ಹಾಗೆ ಬೈದು ಹಿಂದಿರುಗಿ ಹೋಗ ಹೇಳಿದನು. ಪಾಪ! ಆ ಬಡ ನೌಕರರು ಬಂದ ದಾರಿಗೆ ಸುಂಕವಿಲ್ಲೆಂಬಂತೆ ಹಿಂದಿರುಗಿದರು.

ಕಂಕಣಚೋರದಿಂದ ನಂದಮಹಾರಾಜನ ತಲೆ ಕೆಟ್ಟು ಹುಚ್ಚು ಹಿಡಿದಂತಾಗಿತ್ತು. ಇಲ್ಲದಿದ್ದರೆ ಅವನಂಥ ವಿಚಾರಶೀಲ ಹಾಗು ಗಂಭೀರ ಮನುಷ್ಯನು ಪಿಸಿ ಹಿಡಿದವರ ಹಾಗೆ ತನ್ನ ಅಂಗರಕ್ಷಕರ ಮೈ ಮೇಲೆ ಹೀಗೆ ಏರಿ ಹೋಗುತ್ತಿದ್ದನೇ? ಅಂಗರಕ್ಷಕರು ಹಿಂದಿರುಗಿದ ಕೆಲವು ಕ್ಷಣಗಳಲ್ಲಿಯೇ ನಂದಮಹಾರಾಜನು ಅವರ ಕಡೆಗೆ ಹಿಂದಿರುಗಿ ನೋಡಿ ಉಚ್ಚ ಕಂಠದಿಂದ ಅವರನ್ನು ಕರೆದು:—ಬನ್ನಿರಿ; ಈ ದಿವಸ ನಾನು ಹೋದಲ್ಲಿಗೆ ನನ್ನನ್ನನುಸರಿಸಿ ಬನ್ನಿರಿ, ಎಂದಂದು, ತನ್ನ ಕುದುರೆಯನ್ನು ವೇಗದಿಂದ ಬಿಟ್ಟನು.

ಅಂಗರಕ್ಷಕರು ಅವನ ಮಾತಿಗೆ ವಿಸ್ಮಯಾಶ್ಚರ್ಯಗೊಂಡು ತಮ್ಮ ಕುದುರೆಗಳಿಗೂ ತೀವ್ರ ಹೋಗಲಿಕ್ಕೆ ಕಾಲಿನಿಂದ ಸಂಜ್ಞೆ ಮಾಡಿ, ಮಹಾ ರಾಜನನ್ನು ಹಿಂಬಾಲಿಸಿ ನಡೆದರು

ಈ ಪ್ರಕಾರ ಆ ಮೂವರೂ ಅಶ್ವಾರೋಹಿಗಳು ಒಳ್ಳೇ ವೇಗದಿಂದ ವಿಲಾಸಕಾನನದ ರಾಜಮಾರ್ಗವನ್ನು ಹಿಡಿದು ಸಾಗಲು, ಮಾರ್ಗದಲ್ಲಿಯ ಒಂದು ನೂತನ ದೃಶ್ಯದಿಂದ ಅವರ ಗತಿ ವಿರೋಧವಾಯಿತು. ಅಲ್ಲಿ ಇಬ್ಬರು ಜವಾನರು ಒಬ್ಬ ಕಳ್ಳನನ್ನು ಬಂಧಿಸಿಕೊಂಡು ನಡೆದಿದ್ದರು. ಈ ವರೆಗೆ ಇಂಥ ಎಷ್ಟೋ ದೃಶ್ಯಗಳು ನಂದಮಹಾರಾಜನ ದೃಷ್ಟಿಗೆ ಬೀಳು ತ್ತಿದ್ದವು ಆದರೂ ಆತನು ಆ ಬಗ್ಗೆ ತಾನು ಸ್ವತಃ ಏನೂ ವಿಚಾರ ಮಾಡದೆ, ತನ್ನ ಕೈಕೆಳಗಿನ ಯೋಗ್ಯ ಅಧಿಕಾರಿಗಳು ಈ ಬಗ್ಗೆ ವಿಚಾರಿಸುವ ರೆಂದು ತಿಳಿಯುತ್ತಿದ್ದನು; ಆದರೆ ಇಂದು ಅವನ ಚಿತ್ತವು ಸ್ವಾಧೀನವಿದ್ದ ರಿಂದ, ಅವನು ಆ ಜವಾನರೆದುರಿಗೆ ತನ್ನ ಕುದುರೆಯನ್ನು ನಿಲ್ಲಿಸಿ:— ನೀವು ಈತನನ್ನು ಕರಕೊಂಡು ನಡೆದಿರುವುದೇಕೆ? ಎಂದು ಕೇಳಿದನು.

ಅವರಲ್ಲಿ ಒಬ್ಬ ಜವಾನನು ಮಹಾರಾಜನಿಗೆ ಸನ್ಮಾನಪೂರ್ವಕ ವಾಗಿ ಅಭಿವಂದಿಸಿ:— ಮಹಾರಾಜ, ಈ ಕಳ್ಳನು ಒಬ್ಬ ವಣಿಕನ ಸರ್ವ ಸ್ವವನ್ನೂ ಹರಣ ಮಾಡಿರುತ್ತಾನೆ

ಮಹಾರಾಜ:-- ಕಳವಿನ ಮಾಲು ಈತನಲ್ಲಿಯೇ ದೊರಕಿತೇ?

ಜವಾನರು:— ಸಂಪೂರ್ಣ ಮಾಲು ಈತನಲ್ಲಿಯೇ ಸಿಕ್ಕಿರುತ್ತದೆ.

ಕಳ್ಳನು ಮುಂದೆ ಬಂದು ಮಹಾರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ:-ಮಹಾರಾಜ, ನನಗೆ ಆ ಕಳವಿನ ಬಗ್ಗೆ ನಿಜವಾಗಿ ಏನೂ ಗೊತ್ತಿ ರುವದಿಲ್ಲ. ಈ ಜವಾನರು ಹೊಡೆದು-ಬಡೆದು ಕಳವು ಮಾಡಿರುವೆನೆಂದು ನನ್ನಿಂದ ಒಡಂಬಡಿಸಿರುತ್ತಾರೆ!

ಇದನ್ನು ಕೇಳಿ ನಂದಮಹಾರಾಜನಲ್ಲಿ ಕಂಕಣಚೋರದ ವಿಷಯವು ಪುನಃ ಜಾಗ್ರತವಾಯಿತು. ಆದರಿಂದ ಅವನ ಮುಖವು ಸಿಟ್ಟಿನಿಂದ ಕಾದ ಕಬ್ಬಿಣದಂತೆ ನೋಡಲಸಹ್ಯವಾಗುವಷ್ಟು-ಕೆಂಪಡರಿತು. ಅವನು ಅವಡು ಗಚ್ಚುತ್ತ:— ಜವಾನರೇ, ಈತನೇ ನಿಜವಾದ ಕಳ್ಳನಿರುತ್ತಾನೆ. ನೀಚಾ, ಭ್ರಷ್ಟಾ, ಈ ಮಗಧ ದೇಶದಲ್ಲಿ ವಾಸಿಸುವ ಅಗಣಿತ ಜನರನ್ನು ಬಿಟ್ಟು, ನಿನ್ನನ್ನೇ ಇವರು ಬಂಧಿಸಿರುವದೇಕೆ? ಜವಾನರೇ, ಇವನನ್ನು ಕಾರಾ ಗೃಹದಲ್ಲಿರಿಸಿರಿ; ವಿಚಾರಾಂತ್ಯದಲ್ಲಿ ಇವನನ್ನು ಶೂಲಕ್ಕೇ ಏರಿಸಬೇಕಾ ಗಿದೆ! ಎಂದು ಆಜ್ಞೆ ಮಾಡಿ, ಕುದುರೆಯನ್ನು ಮತ್ತೆ ಬಿಡಲನುವಾದನು.

ಅಷ್ಟರಲ್ಲಿ ಆ ಜವಾನರೊಳಗಿನ ಒಬ್ಬನು ಕಡು ಸಾಹಸದಿಂದ ರಾಜನ ಕುದುರೆಯ ಎದುರಿಗೆ ಒಂದು ನಿಂತು, ಅಭಿವಾದನಪೂರ್ವಕ ನುಡಿದನೇನಂದರೆ. —ಮಹಾರಾಜರ ಆದೇಶದಂತೆ ಇವನು ಕಾರಾಗೃಹಕ್ಕೆ ಒಯ್ಯಲ್ಪಟ್ಟರೂ, ಈತನು ಶೂಲಾರೋಹಣಕ್ಕೆ ಯೋಗ್ಯನಾದ ಅಪರಾಧಿ ಯಾಗಿರುವದಿಲ್ಲ.

'ಅದೇಕೆ? ಕಳವಿನ ಪುರಾವೆಯಾಗುತ್ತಿರಲು ಹಾಗು ಮಗಧೇಶ್ವರ ನಾದ ನಾನು ಸ್ವತಃ ಈತನಿಗೆ ಆ ಶಿಕ್ಷೆಯನ್ನು ವಿಧಿಸುತ್ತಿರಲು, ಈತನು ಅದಕ್ಕೆ ಅಯೋಗ್ಯನಾಗುವ ಬಗೆ ಹೇಗೆ?' ಎಂದು ಕುತೂಹಲ ಚಿತ್ತನಾದ ನಂದಮಹಾರಾಜನು ಪ್ರಶ್ನೆ ಮಾಡಲು,

ಜವಾನ:—ಮಹಾರಾಜ, ಈತನು ಬ್ರಾಹ್ಮಣನು ಆದುದರಿಂದ ಇವನು ಅವಧ್ಯನಾಗಿರುತ್ತಾನೆ

ಬ್ರಾಹ್ಮಣನು ಕಳವನ್ನು ಮಾಡಿರುವನೆಂದು ಕೇಳಿದ ಬಳಿಕಂತೂ ಮಹಾರಾಜನ ಸಿಟ್ಟಿಗೆ ಮೇರೆಯೇ ಉಳಿಯಲಿಲ್ಲ. ಹಲ್ಲು ಕಚ್ಚುತ್ತ, ಒದ ರುತ್ತ ಆತನು:—ಆಶ್ಚರ್ಯ! ಮಹದಾಶ್ಚರ್ಯದ ಸಂಗತಿಯಿದು!! ಈ ಮಗಧ ರಾಜ್ಯದಲ್ಲ ಯಾವ ಸಂಗತಿಯು ಇದು ವರೆಗೂ ಸಂಭವಿಸಿದ್ದಿಲ್ಲವೋ, ಅದು ಇಂದು ಸಂಘಟಿಸಿರುತ್ತದೆ. ರಾಜನ ಅಂತಃಪುರದೊಳಗಿನ ಪಟ್ಟದರ ಸಿಯ ಮೈಮೇಲಿನ ಕಂಕಣವೂ, ಬ್ರಾಹ್ಮಣ ಮಹಾಶಯನಿಂದ ವಣಿಕನ ಸರ್ವಸ್ವವೂ ಯಾವ ರಾಜ್ಯದಲ್ಲಿ ಅಪಹೃತವಾಗಹತ್ತುವವೋ, ಆ ರಾಜ್ಯದ ಸರ್ವನಾಶವು ಮುಂದುವರಿದಿರುವದೆಂಬದರಲ್ಲಿ ಆಶ್ಚರ್ಯವೇನು? ಜವಾ ನರೇ, ಕಳವನ್ನೇ ಮಾಡಿದ ಬಳಿಕ, ಬ್ರಾಹ್ಮಣನೂ ವಧಾರ್ಹನೇ; ಆದುದ ರಿಂದ ಇವನನ್ನು ಕಾರಾಗಾರಕ್ಕೆ ಒಯ್ಯಿರಿ.

ಮಗಧೇಶ್ವರನ ಕುದುರೆಯು ಪುನಃ ಓಡಲಾರಂಭಿಸಿತು. ತುಸ ದೂರದಲ್ಲಿಯೇ ದಿನ್ನೆಯ ಮೇಲಿರುವ ವಿಲಾಸಕಾನನದ ಪ್ರಸ್ತರಮಯ ವಾದ ತೋರಣ(ಪ್ರವೇಶದ್ವಾರ)ವು ಕಾಣಿಸತೊಡಗಿತು. ಆ ಬಾಗಿಲದ ಮೇಲ್ಬದಿಯಲ್ಲಿ ಎತ್ತರವಾದ ಪತಾಕೆಯು ಶೋಭಿಸುತ್ತಿತ್ತು. ವಿಲಾಸ ಕಾನನದಲ್ಲಿ ಮಹಾರಾಜನ ಗುಪ್ತಪ್ರಮೋದ ಗೃಹವಿದ್ದಿತು. ಅಲ್ಲಿ ರಾಣೀ ವಾಸವಿರುವದಿಲ್ಲೆಂದು ಸರ್ವ ಸಾಮಾನ್ಯ ಪ್ರಜೆಗಳು ತಿಳಿಯುತ್ತಿದ್ದರು. ಈಚೆಗೆ ಆ ವಿಲಾಸಕಾನನದ ಬದಿಯ ರಾಜಮಾರ್ಗದಲ್ಲಿ ಸಹ ಯಾರನ್ನೂ ಹಾಯಗೊಡುತ್ತಿದ್ದಿಲ್ಲ. ಆ ರಾಜಮಾರ್ಗದಲ್ಲಿ ಪಹರೆ ಮಾಡುವ ಶಿಪಾಯಿ

ಗಳು ಅಲ್ಲಲ್ಲಿ ಇರುತ್ತಿದ್ದರು ಆ ಮಾರ್ಗದಿಂದ ಕೇವಲ ವಿಶ್ವಾಸಿಕ ರಾಜ ಕರ್ಮಚಾರಿಗಳೂ, ಗುಪ್ತಹೇರರೂ, ಶಹರದ ಮುಖ್ಯ ಕೊತವಾಲನೂ ಇಷ್ಟೇ ಜನರು ಹೋಗಬಹುದಾಗಿತ್ತು; ಆದರೆ ಅವರಿಗಾದರೂ ವಿಲಾಸ ಕಾನನದ ತೋರಣದ ವರೆಗೆ ಪ್ರವೇಶವಿತ್ತೇ ಹೊರತು, ಒಳಗೆ ಪ್ರವೇಶಿಸ ಲಾಸ್ಪದವಿರಲಿಲ್ಲ!

ಮಹಾರಾಜನ ಕುದುರೆಯು ಮತ್ತೆ ತುಸ ದೂರ ನಡೆದ ಬಳಿಕ, ನಂದನು ಅದನ್ನು ಮತ್ತೆ ನಿಲ್ಲಿಸಬೇಕಾಯಿತು. ಯಾಕಂದರೆ ಪಾಟಲಿ ಪುತ್ರ ಪಟ್ಟಣದ ಮುಖ್ಯ ಕೊತವಾಲನು ಒಬ್ಬ ಸ್ತ್ರೀಯನ್ನು ಕಠಿಣ ಪಹರೆ ಯಲ್ಲಿ ತಕ್ಕೊಂಡು ನಡೆದಿದ್ದನು. ಮಹಾರಾಜನು ಕೊತವಾಲನ ಕಡೆಗೆ ನೋಡುತ್ತ:—ಇದೇನು ನಡಿಸಿರುವೆ? ಎಂದು ಪ್ರಶ್ನೆ ಮಾಡಿದನು.

ಪದ್ಧತಿಯ ಪ್ರಕಾರ ಮಹಾರಾಜನನ್ನು ಅಭಿವಂದಿಸಿ ಕೊತವಾಲನು: ಮಹಾರಾಜ, ಈ ಸ್ತ್ರೀಯು ಉತ್ತಮ ಕುಲಪ್ರಸೂತಳು; ಆದರೆ ಇವಳು ಜಾರಿಣಿಯಾಗಿರುತ್ತಾಳೆ ಈಕೆಯ ಗಂಡನು ಇವಳ ಈ ನಿಂದ್ಯಕರ್ಮ ಕ್ಕಾಗಿ ಇವಳನ್ನು ತ್ಯಜಿಸಿದನು. ಆದರಿಂದ ಕ್ರೋಧಸಂತಪ್ತಳಾದ ಇವಳು, ಮಲಗಿದ್ದ ತನ್ನ ಗಂಡನ ಕಿವಿಯಲ್ಲಿ ವಿಷಮಯ ಗಿಡಮೂಲಿಕೆಯ ರಸ ವನ್ನು ಹಿಂಡಿರುವಳು. ಆದರಿಂದ ಈಗ ಈಕೆಯ ಗಂಡನು ಪರಲೋಕದ ದಾರಿಯನ್ನು ಹುಡುಕ ಹತ್ತಿರುತ್ತಾನೆ ಮಹಾರಾಜ!

ಸಿಟ್ಟಿಗೆದ್ದ ಹೆಣ್ಣುಹುಲಿಯಂತೆ ನಂದ ರಾಜನು ಗರ್ಜಿಸಿ, ಆ ಸ್ತ್ರೀ-ಯನ್ನು ಕುರಿತು:—ನಾರಿಯೇ, ನಿನ್ನಿಂದ ಈ ಕೃತ್ಯವು ಘಟಿಸಿರುವದು ನಿಜವೇ? ಗಂಡನನ್ನು ಕೊಲ್ಲಲುದ್ಯುಕ್ತಳಾದ ಮಾರಿಯು ನೀನೇ ಅಲ್ಲವೇ?

ಪಶ್ಚಾತ್ತಾಪ ವಿದಗ್ಧಳಾಗಿದ್ದ ಆ ಸ್ತ್ರೀಯು ಮಗಧೇಶ್ವರನೆದುರಿಗೆ ಮೊಣಕಾಲೂರಿ ನಿಂತು:—ಪ್ರಭೋ, ನನ್ನ ಪತಿಯು ನನ್ನನ್ನು ಬಹು ಪ್ರೀತಿಸುತ್ತಿರುತ್ತಾನೆ; ಆದರೆ ಮಹಾರಾಜ, ನಾನು ಕಾಲಸರ್ಪಿಣಿಯು. ಆತನ ಪವಿತ್ರಪ್ರೇಮವನ್ನು ಉಪೇಕ್ಷಿಸಿ, ಸ್ತ್ರೀ ಧರ್ಮವನ್ನು ಕಾಲಿನಿಂದ ಒದ್ದು, ಪಾಪಿಣಿಯಾದ ನಾನು ಪಾಪಕೂಪದಲ್ಲಿ ಮುಳುಗಿರುವೆನು. ರಾಜನ್, ನನಗೆ ಮರಣದ ದಂಡನೆಯನ್ನು ಬೇಗನೆ ವಿಧಿಸಬೇಕು, ಎಂದಂದಳು.

ಕೆಲ ಕ್ಷಣಗಳ ವರೆಗೆ ಸುಮ್ಮನಿದ್ದು, ಬಳಿಕ ನಂದರಾಜನು: - ಹಾ-ಗೆಯೇ ಮಾಡುತ್ತೇನೆ. ಯಾವ ನನ್ನ ರಾಜ್ಯದಲ್ಲಿ ಸ್ತ್ರೀ ಹತ್ಯೆಯ ಪಾತ ಕವು ಇಂದಿನ ವರಿಗೂ ಸಂಭವಿಸಿರಲಿಲ್ಲವೋ, ಅದನು ಇಂದು ನಿನ್ನಂಥ

ಕುಲಟೆಯು ಸಲುವಾಗಿ ಆಚರಿಸಲೇಬೇಕಾಗಿರುತ್ತದೆ. ಪತಿಘಾತಿಕಿನಿಯೇ, ನಿನಗೆ ಪ್ರಾಣದಂಡನೆಯು ಶಿಕ್ಷೆಯು ಅಯೋಗ್ಯವಾಗಿರುವದು ಯಾಕೆಂದರೆ, ಆ ಶಿಕ್ಷೆಯಿಂದ ನಿನ್ನ ಪ್ರಾಣಗಳು ಒಮ್ಮೆಲೆ ಹೋಗಿ, ನಿನಗೆ ಅನುತಾಪಕ್ಕೆ ಆಸ್ಪದವೇ ಇರಲಾರದು. ಆದುದರಿಂದ ನಿನಗೆ ಅನುತಾಪ ಉಂಟಾಗಲಿಕ್ಕೆ ತಕ್ಕದ್ದಾದ ಶಿಕ್ಷೆಯನ್ನು ವಿಚಾರಿಸಿ, ಹಿಂದಿನಿಂದ ಕೊಡುವೆನು ಪುರ ರಕ್ಷಕನೇ, ಇವಳನ್ನು ಬೆಳಕು ಹಾಗು ಹವೆಗಳಿಲ್ಲದ ಸೆರೆಮನೆಯಲ್ಲಿರಿಸು. ಒಂದು ತಿಂಗಳ ನಂತರ ಇವಳನ್ನು ನನ್ನೆದುರಿಗೆ ಬರ ಮಾಡು; ಅಂದರೆ ಆಗ ಇವಳಿಗೆ ಯೋಗ್ಯ ಶಿಕ್ಷೆಯನ್ನು ವಿಧಿಸುವೆನು ನೀನು ಈಗಲೇ ಹೋಗಿ, ಇವಳ ಗಂಡನನ್ನು ರುಗ್ಣಾಲಯಕ್ಕೆ ಕಳಿಸಿ, ಅವನ ಜೀವ ಉಳಿಯುವ ವ್ಯವಸ್ಥೆ ಮಾಡು

ಹೀಗೆ ಹೇಳಿ ಕೊತವಾಲನನ್ನು ಕಳಿಸಿಕೊಟ್ಟ ಕೆಲ ನಿಮಿಷಗಳಲ್ಲಿಯೇ ಮತ್ತೆ ಒಂದೆರಡು ಇಂಥವೇ ಅಶುಭಸೂಚಕ ದೃಶ್ಯಗಳು ನಂದಮಹಾರಾಜನಿಗೆ ಕಾಣಿಸಿಕೊಂಡವು ಕಂಕಣಚೋರದ ಆಘಾತದಿಂದ ಮೊದಲೇ ಮಸಣಿಸಿದ ಅವನ ಬುದ್ಧಿಯು, ವ ತ್ತಿಷ್ಟು ಮಸಣಿಸಿತು! ಯಾವ ವಿಚಾರವೂ ಇಂದು ಅವನಲ್ಲಿ ದೃಢೀಕರಿಸದಾಯಿತು ಕ್ಷಣಕ್ಷಣಕ್ಕೆ ಹೆಚ್ಚು ಚಂಚಲ ಚಿತ್ತನಾಗುತ್ತ ನಡೆದಿದ್ದ ಮಹಾರಾಜನನ್ನು ಅವನ ಪ್ರೀತಿಯ ಕುದುರೆಯು, ಹ್ಯಾಗಾದರೂ ಮಾಡಿ ಒಮ್ಮೆ ಅವನ ಆ ವಿಲಾಸಕಾನನಕ್ಕೆ ತಂದು ಮುಟ್ಟಿಸಿತು ಆಗ ಆ ವಿಲಾಸಕಾನನದ ಹೆಬ್ಬಾಗಿಲು ಒಳಗಿನಿಂದ ಇಕ್ಕಲ್ಪಟ್ಟಿತ್ತು ಮಹಾರಾಜನು ಬಂದ ಸುದ್ದಿಯನ್ನು ತಿಳಿದ ಕೂಡಲೆ ಆ ಬಾಗಿಲವು ತೆರೆಯಲ್ಪಟ್ಟಿತು ಮಗಧೇಶ್ವರನು ಕುದುರೆಯಿಂದಿಳಿದು ಒಳಗೆ ಪ್ರವೇಶಿಸಿದನು ಒಳಗೆ ಪ್ರವೇಶಿಸುವಾಗ ಅವನು ಬಾಯಿಂದ:—ಯಾವ ರಾಜ್ಯದಲ್ಲಿ ಬ್ರಾಹ್ಮಣರು ಕಳವು ಮಾಡಹತ್ತುವರೋ, ಮಗನು ತಂದೆಯನ್ನು ಕೊಲ್ಲುವನೋ, ಸತಿಯು ಪತಿಯ ಮರಣವನ್ನು ಬಯಸುವಳೋ, ಆ ರಾಜವು ಅಧಃಪತನದ ಮಾರ್ಗವನ್ನು ಹಿಡಿದಿರುವದೆಂಬದರಲ್ಲಿ ಸಂದೇಹವೇನು? ಯ್ಯೋ! ಮೂರ್ಖನಾದ ನಂದನೇ ನೀನು ನಿನ್ನ ಗುರುದೇವನ ಭವಿಷ್ಯದ್ವಾಣಿಯನ್ನು ಅಲ್ಲಗಳೆದುದು ಸರಿಯೇ? ಆ ಮಹಾಮಹಿಮನ ವಾಕ್ಯವು ಎಂದಿಗಾದರೂ ಅಸತ್ಯವಾದೀತೇ? ಮುರಲಾ, ಚಾಂಡಾಲಿನಿಯಾದ ಮುರಲಾರಾಣಿಯೇ, ನನ್ನ ಹಾಗು ನನ್ನ ಪ್ರಿಯ ಮಗಧ ದೇಶದ ಸರ್ವ ನಾಶಕ್ಕೆ ನೀನೇ ಕಾರಣಳಾದೆಯಲ್ಲವೇ? ಎಂದು ತನ್ನಷ್ಟಕ್ಕೆ ತಾನೇ ನುಡಿಯುತ್ತಿದ್ದನು.

ಮಹಾರಾಜನು ಅಂದು ಪುನಃ ರಾಜಧಾನಿಗೆ ಬರಲಿಲ್ಲ. ಮಧ್ಯಾಹ್ನ ತಿರುಗಿ ಸಾಯಂಕಾಲವಾದರೂ ಅವನು ಅಲ್ಲಿಯೇ ಇದ್ದನು. ಇಷ್ಟೇ ಅಲ್ಲ ಮರುದಿನ ಬೆಳಗಾಗುವ ವರೆಗೂ ಸಹ ಅವನು ಆ ವಿಲಾಸಕಾನನವನ್ನು ಬಿಟ್ಟು ಚಲಿಸಲಿಲ್ಲ

ಆ ವಿಲಾಸಕಾನನದಲ್ಲಿ ಮಹಾರಾಜನ ವ್ಯತಿರಿಕ್ತ ಬೇರೆ ಯಾರಿಗೂ ಪ್ರವೇಶವಿರದ್ದರಿಂದ. ಅಲ್ಲಿ ಅವನು ಏನು ಮಾಡುತ್ತಿದ್ದನು? ಯಾರ ಕೂಡ ವಿಹರಿಸುತ್ತಿದ್ದನು? ಅಥವಾ ಯಾರೊಡನೆ ಆಲಾಪ-ಪ್ರಲಾಪ ಮಾಡುತ್ತಿದ್ದನೆಂಬುದೊಂದನ್ನೂ ತಿಳಿಯದ ವಾಚಕರು ಅದನ್ನು ತರ್ಕಿಸುವ ಬಗೆ ಹೇಗೆ? ಅದನ್ನು ತಿಳಕೊಳ್ಳಲಿಕ್ಕೆ ಉತ್ಸುಕರಾದ ವಾಚಕರೇ, ಬನ್ನಿರಿ ನನ್ನೊಡನೆ. ಎಲ್ಲರಿಯೂ ಸಹಜವಾಗಿ ಪ್ರವೇಶಿಸಬಹುದಾದ ನನ್ನೊಡನೆ ನೀವೂ ಬಂದು, ಆ ವಿಲಾಸಕಾನನದಲ್ಲಿ ನಂದ ಮಹಾರಾಜನು ಏನು ಮಾಡುತ್ತಿರುವನೆಂಬದನ್ನು ಕಣ್ಣಾರೆ ನೋಡಿರಿ

# ಉನ್ಮತ್ತನಾದ ನಂದ.

ಮುಖ್ಯ ಬಾಗಿಲದಿಂದ ಒಳಗೆ ಪ್ರವೇಶಿಸಿದ ಒಳಿಕ, ನಂದ ಮಹಾರಾಜನು ೩-೪ ಪ್ರಾಕಾರಗಳನ್ನು ದಾಟಿ ಹೋದನು, ಹಾಗು ಕಡೆಗೆ ನೀಲಕಾಂತದ ಕಲ್ಲುಗಳಿಂದ ಕಟ್ಟಿದ ಮತ್ತು ಸ್ವರ್ಣಮಯ ನೆಲಗಟ್ಟಿಣಿಯಿಂದ ಯುಕ್ತವಾದ ಒಂದು ಕೋಣೆಯಲ್ಲಿ ನಿಂತು, ನಡಗುವ ದನಿಯಿಂದ:— ತಡಿತೇ, ಪ್ರಿಯ ತಡಿತೇ! ಎಂದು ಕೂಗಿದನು

ಮಹಾರಾಜನ ಕಂಠಸ್ವರವನ್ನು ಕೇಳಿದ ಕೂಡಲೆ ಒಂದು ವ್ಯಕ್ತಿಯು ಧಾವಿಸುತ್ತ ಬಂದು, ಮಹಾರಾಜನೆದುರಿಗೆ ನಿಂತಿತು ಮೊದಲೇ ಬಂಗಾರ ರತ್ನಗಳಿಂದ ಹೊಳೆಯುತ್ತಿದ್ದ ಆ ಕಕ್ಷದಲ್ಲಿ ಆ ವ್ಯಕ್ತಿಯು ಆಗಮನದಿಂದ ಮಿಂಚು ಹೊಳೆದಂತಾಯಿತು! ಆಗ ಅಲ್ಲಿಗೆ ಬಂದವಳೇ ತಡಿತೆಯೆಂದು ಬೇರೆ ಹೇಳುವ ಆವಶ್ಯಕತೆಯಿಲ್ಲ, ಆದರೆ ತಡಿತೆಯೆಂಬ ಅವಳು ಯಾರು? ಎಲ್ಲಿಯವಳು? ಎಂಬದು ಮಾತ್ರ ಯಾರಿಗೂ ಗೊತ್ತಿದ್ದಿಲ್ಲ ಆಕೆ ಯಾರೆಂಬದು ಮಹಾರಾಜನ ಅಂತಃಪುರದೊಳಗಿನ ಯಾವ ರಾಣಿಗೂ ಗೊತ್ತಿದ್ದಿಲ್ಲ. ಆ ವಿಲಾಸಕಾನನದೊಳಗಿರುತ್ತಿದ್ದ ದಾಸಿಯರಿಗೂ ಗೊತ್ತಿದ್ದಿಲ್ಲ ಇಷ್ಟೇ

ಅಲ್ಲ, ಪ್ರತ್ಯಕ್ಷ ನಂದಮಹಾರಾಜನಿಗೂ ಕೂಡ ಅವಳಾರೆಂಬುದು ಲವ ಲೇಶವೂ ಗೊತ್ತಿದ್ದಿಲ್ಲ; ಆಕೆಯು ಯಾರೆಂಬುದು ಕೇವಲ ಅವಳೊಬ್ಬಳಿಗೇ ಗೊತ್ತಿದ್ದರೆ ಇರಬಹುದಾಗಿದೆ!

ಲಗುಬಗೆಯಿಂದ ಬಂದ ತಡಿತೆಯು ಮಹಾರಾಜನಿಗೆ ಪ್ರಣಾಮಗಳಂ ಗೈದು ರಕ್ತೋತ್ಫುಲ್ಲವಾದ ಹಾಗು ತಾಂಬೂಲ ಚರ್ವಣದಿಂದ ಕೆಂಪಡ ರಿದ ಅಧರಗಳನ್ನು ವಿಚಲಿತಗೊಳಿಸಿ, ಮುಗುಳುನಗೆ ನಕ್ಕು, ಮಹಾರಾಜನ ಕಡೆಗೆ ನೋಡುತ್ತ:—ಮಹಾರಾಜ, ಈ ದಾಸಿಯನ್ನು ಕರೆದುದೇಕೆ?

ಅವಳ ಆ ವಾಕ್ಯವು ಆ ರತ್ನಖಚಿತ ಕಕ್ಷದ ನಾಲ್ಕೂ ಕಡೆಯ ಭಿತ್ತಿ ಗಳಲ್ಲಿ ಒಂದರ ಹಿಂದೊಂದೊಮ್ಮೆಯಂತೆ ಪ್ರತಿಧ್ವನಿಸಿಗೆಯ್ದಿತು ತಡಿತೆಯು ಬಹು ಸುಂದರಳಾದ ಯುವತಿಯು ಅವಳು 'ತಡಿತ್' ಅಂದರೆ ಮಿಂಚಿ ನಂಥ ಅಪೂರ್ವ ಸೌಂದರ್ಯಶಾಲಿನಿಯಾಗಿದ್ದಳು. ಅಂಗ-ಪ್ರತ್ಯಂಗಗಳಲ್ಲಿ ಮಿಂಚು ನೆಲೆಗೊಂಡಿರುವದರಿಂದಲೇ ಅವಳಿಗೆ ಅವಳ ತಂದೆ-ತಾಯಿಗಳು ತಡಿತಾ, ಎಂಬ ಹೆಸರಿಟ್ಟಿರಬಹುದೆಂದು ತೋರುತ್ತಿತ್ತು

ಮಹಾರಾಜನು ಇನ್ನೂ ಆಸನಾಧಿಷ್ಠಿತನಾಗದಿರುವದನ್ನು ಕಂಡು, ತಡಿತೆಯು ಅವನ ಎರಡೂ ಕೈಗಳನ್ನು ಆದರಪೂರ್ವಕವಾಗಿ ಹಿಡಿದು, ಕಲಾಕೌಶಲ್ಯಗಳಿಂದ ಪರಿಪೂರ್ಣವಾದ ಒಂದು ಚಿತ್ರ-ವಿಚಿತ್ರವಾದ ಆಸ ನದ ಬಳಿಗೆ ಅವನನ್ನು ಕರೆದೊಯ್ದು:—ಮಹಾರಾಜರೇ, ಇಲ್ಲಿ ಕುಳಿತು ಕೊಳ್ಳುವದಾಗಬೇಕು, ಎಂದಂದಳು

ಇಂದು ನಂದರಾಜನ ಹೃದಯವು ಭಯಂಕರವಾದ ಅಂತರ್ಜ್ವಾಲೆ ಯಿಂದ ದಹಿಸುತ್ತಿದ್ದುದರಿಂದ ಅವನಿಗೆ ಯಾವದೂ ಬೇಕಿರಲಿಲ್ಲ ತಡಿತಾ ಸ್ತ್ರೀಯು ಪುರುಷರ ಪ್ರಾಣಘಾತುಕ ಸ್ವರೂಪದಂತಹ ದಾಹಕಶಕ್ತಿಯುಳ್ಳ ವಳಾಗಿದ್ದಳು; ಆದರೆ ಅಂಥ ಆ ಮಿಂಚಿನಂಥ ಹೊಳಪುಳ್ಳ ಹಾಗು ದಾಹಕ ಳಾದ ಸ್ತ್ರೀಯೇ ನಂದಮಹಾರಾಜನನ್ನು ತನ್ನ ಪ್ರಿಯ-ಮಧುರ ಸಂಭಾಷಣ ದಿಂದ ಶಾಂತಗೊಳಿಸುವ ಸಾಧನವಾಗಿದ್ದಳು.

ಅವಳು ತನ್ನ ಸ್ವರ್ಣವರ್ಣದ ಬಾಹುದ್ವಯಗಳಿಂದ ಮಗಧೇಶ್ವರನ ಕೊರಳಿಗೆ ಸುತ್ತುವರೆದು, ಅವನನ್ನು ಬಿಗಿಯಾಗಿ ಅಪ್ಪಿಕೊಂಡಳು; ತನ್ನ ಬಲು ಸುಂದರವಾದ ಮುಖವನ್ನು ಆತನ ಹೃದಯದ ಮೇಲಿರಿಸಿದಳು; ಆಗ ಅವಳ ಕೊರಳೊಳಗಿದ್ದ ವಿಚಿತ್ರವಾದ ನಾಗಕೇಶರದ ಮಾಲೆಯ-ಮನ ಸ್ಸನ್ನು ಹರಣ ಮಾಡುವ-ಸುಗಂಧವು ಮಹಾರಾಜನ ಮೂಗಿನ ಹೊರಳಿ ಗಳಲ್ಲಿ ತುಂಬಿತು. ಅವಳ ಆ ಪ್ರಕಾರದ ಆಲಿಂಗನದಿಂದ ನಂದ ಮಹಾ

ರಾಜನ ಶರೀರದಲ್ಲಿ ಒಂದು ಬಗೆಯ ಅದ್ವಿತೀಯವಾದ ವಿದ್ಯುತ್ತೇ ಸಂಚರಿಸಿತು! ತಡಿತೆಯ ಮಧುರ ಕಂಠ, ಪ್ರೇಮಪರಿಪ್ಲುತವಾದ ಆಕರ್ಷಣೀಯ ವಾಣಿ, ಪ್ರೇಮಜಡಿತವಾದ ಗಾಢಾಲಿಂಗನ ಇವುಗಳಿಂದ ನಂದ ಮಹಾರಾಜನಿಗೆ ಉಂಟಾಗಿದ್ದ ಆ ಭಯಂಕರ ಸಂತಾಪವೆಲ್ಲ ತೃಣವತ್ ಲಘುವಾಯಿತು. ಮಾಯಾವೇಷ್ಟಿತವಾದ ಬೇರೊಂದು ನೂತನ ತರಂಗವು ಸಂತಾಪವಿದಗ್ಧ ನಂದ ಮಹಾರಾಜನ ಹೃದಯಕಮಲದಲ್ಲಿ ಪ್ರಾದುರ್ಭವಿಸಿತು. ಆ ಹೊಸ ತರಂಗದ ಆಘಾತದಿಂದ ಸರ್ವ ನಾಶಕ್ಕೆ ಕಾರಣೀಭೂತಳಾದ ಮುರಲಿಯು ಮಹಾರಾಜನ ಮನಶ್ಚಕ್ಷುಗಳಿಗೆ ಮರೆಯಾಗಲಾರಂಭಿಸಿದಳು! ಮಹಾ ಮಗಧರಾಜ್ಯದ ಚಿಂತೆಯು ಲುಪ್ತಪ್ರಾಯವಾಯಿತು!! ಮಂತ್ರಪೂತ ಕಂಕಣವು ಅಪಹೃತವಾದ ತೀವ್ರ ಜ್ವಾಲೆಯ ಸ್ಮೃತಿಯೂ ಕೂಡ ಲೋಪವಾಗಿ ಬಿಟ್ಟಿತು!!! ತನ ಹಾಗು ತನ್ನ ರಾಜ್ಯದ ಸಂಬಂಧದ ಶುಭಾಶುಭ ಆಕಾಂಕ್ಷೆಗಳೂ ನಾಮಶೇಷವಾದವು! ಮಗಧೇಶ್ವರನಾದ ನಂದಮಹಾರಾಜನು ಸಬಾಹ್ಯಾಭ್ಯಂತರದಲ್ಲಿ ಕೇವಲ ತಡಿತ್ ಮಯವಾಗಿ ಬಿಟ್ಟನು.

ಈ ಪ್ರಕಾರ ಆ ನವ ಯುವತಿಯ ಬಾಹುಪಾಶದಲ್ಲಿ ಶಿಲ್ಕಿ ಅದ್ವಿತೀಯ ಸುಖ-ಸಮಾಧಾನಗಳನ್ನು ತಳೆದಿದ್ದ ಆ ಧನನಂದನು ಕೆಲ ಕ್ಷಣಗಳ ತರುವಾಯ ಆಕೆಯ ಪಾಶದಿಂದ ಮುಕ್ತನಾಗಿ, ಪ್ರೇಮವಿಜಡಿತ ಕಂಠದಿಂದ ಆಕೆಯನ್ನು ಕುರಿತು—ತಡಿತಾ, ತಡಿತಾ, ನೀನು ಯಾರು? ನೀನು ಮಹಾ ಮಾಯಾವಿನಿಯಾಗಿರುತ್ತೀ. ನಿನ್ನ ಈ ಸುಂದರ ಮುಖವನ್ನು ನೋಡಿದ ಕೂಡಲೆ ನಾನು ನನ್ನ ಎಲ್ಲ ಸುಖ-ದುಃಖಗಳನ್ನೂ ಮರೆತು ಬಿಡುತ್ತೇನೆ. ತಡಿತಾ, ನೀನು ಇದೆಂಥ ಮಾಟವನ್ನು ಮಾಡಿರುವೆ?

ತಡಿತೆಯು ನವಿಲಿನಂಥ ತನ್ನ ಎತ್ತರವಾದ ಗೋಣನ್ನು ಎತ್ತರಿಸಿ—ಮಾಟವನ್ನ ಯಾರು ಯಾರಿಗೆ ಮಾಡಿಸಿರುವರು ಮಹಾರಾಜ? ಪ್ರೇಮ ಮಾಡಿದಾಕ್ಷಣಕ್ಕೆ ಮಾಟ ಮಾಡಿಸಿದ ಹಾಗಾಯಿತೇನು? ನಾನು ದಾರಿಯೊಳಗಿನ ಭಿಕ್ಷುಕಿಯು. ಸಿಕ್ಕಷ್ಟು ಭಿಕ್ಷೆಯಲ್ಲಿಯೇ ಸುಖದಿಂದ ಉಪಜೀವಿಸುತ್ತಿದ್ದೆನು. ಆದರೆ ಮಹಾರಾಜ, ತಾವೇ ನನ್ನನ್ನು ಇಲ್ಲಿಗೆ ಕರೆತಂದು, ತಮ್ಮ ಪಾದದ ಆಶ್ರಯ ಕೊಟ್ಟಿರುವಿರೆಂಬದನ್ನು ಇಷ್ಟರಲ್ಲಿಯೇ ಮರೆತು ಬಿಟ್ಟಿರೇನು? ಎಂದೆನ್ನಲು,

ಪುನಃ ಮಗಧೇಶ್ವರನ ಚಿತ್ತವು ಮಂತ್ರಪೂತ ಕಂಕಣಚೋರದ ಚಿಂತೆಯಿಂದ ಸಂತಪ್ತವಾಯಿತು. ಆಗ ಅವನಿಗೆ ಆ ತನ್ನ ಪಟ್ಟದರಸಿಯಾದ

ಮುರಲಿಯಲ್ಲಿ ಇವಳಷ್ಟು ಸೌಂದರ್ಯ, ಮಾಧುರ್ಯ, ಪ್ರೇಮಾಲಾಪ ಮುಂತಾದವುಗಳೊಂದೂ ಇರದಿದ್ದದ್ದು ಅನುಭವಕ್ಕೆ ಬರಲು, ಅವನು ಮತ್ತಷ್ಟು ಚಿಂತಾಕ್ರಾಂತನಾದನು. ಅವನ ಆ ಸ್ಥಿತಿಯನ್ನು ಕಂಡು, ಮಹಾರಾಜನು ಇಂದು ಯಾವದೋ ಒಂದು ಅನಿಷ್ಟ ಚಿಂತೆಯಲ್ಲಿ ಮಗ್ನರಾಗಿರುವರೆಂಬದನ್ನು ತರ್ಕಿಸಿ, ತಡಿತೆಯು ಅವನನ್ನು ಕುರಿತು:—ಮಹಾರಾಜ, ಇಂದು ತಮಗೆ ಆಗಿರುವದಾದರೂ ಏನು? ತಮ್ಮ ಮುಖಮಂಡಲವು ಇಂದು ಇಷ್ಟೇಕೆ ಮಲಿನವಾಗಿ ತೋರುತ್ತಲಿದೆ?

ಮಗಧೇಶ್ವರನು ತನ್ನ ಧೀರ್ಘಬಾಹುಪಾಶಗಳಿಂದ ತಡಿತೆಯನ್ನು ಅಪ್ಪಿಕೊಂಡು:— ತಡಿತೇ, ಇಂದು ನನ್ನ ಸರ್ವನಾಶವಾಗುತ್ತದೆ!

ಹಾಗೆಂದರೇನು ಮಹಾರಾಜ? ತಮ್ಮ ನಾಶಕ್ಕೆ ಯಾರು ಕಾರಣರಾಗಿರುವರು?

ದೇವರು! ಇಲ್ಲವೆ ಮುರಲೆಯು!!

ಮುರಲೆಯೇ? ತಮ್ಮ ಪಟ್ಟದರಸಿಯಾದ ಮಹಾರಾಣಿ ಮುರಲಿಯೋ? ಅವಳು ಪ್ರಯತ್ನಪೂರ್ವಕವಾಗಿ ತಮ್ಮ ಸರ್ವನಾಶಕ್ಕೆ ಕಾರಣಳಾಗಿರುವಳೆಂಬ ಮಾತನ್ನು ಕೇಳಿ, ಆ ಬಗ್ಗೆ ನನ್ನಲ್ಲಿ ಕೊಂಚವೂ ನಂಬಿಕೆಯುಂಟಾಗುವದಿಲ್ಲವಲ್ಲ!

ಬಳಿಕ ನಂದಭೂಪತಿಯು ಕಂಕಣಚೋರದ ಸಮಗ್ರವೃತ್ತಾಂತವನ್ನೂ ತಡಿತೆಗೆ ನಿವೇದಿಸಿದನು. ಅದನ್ನು ಕೇಳಿ-ಕೇಳಿದ ಹಾಗೆ ತಡಿತೆಯ ಮುಖಮಂಡಲವು ಗಂಭೀರಯುಕ್ತವಾಗಿ, ಮಹಾರಾಜನ ಚಿಂತಾಕ್ರಾಂತ ಸ್ಥಿತಿಗೆ ಒಳ್ಳೇ ಸಹಾನುಭೂತಿದರ್ಶಕವಾಗಿ ತೋರತೊಡಗಿತು. ಕೆಲ ಹೊತ್ತಿನ ಮೇಲೆ ಅವಳು:— ವೃಥಾ ಸಂದೇಹವು. ಈ ಸಾಮಾನ್ಯ ಕಳವಿನಿಂದ ಇಷ್ಟು ಅನಿಷ್ಟವು ಸಂಭವನೀಯವಾಗಿ ತೋರುವದಿಲ್ಲ. ಜ್ಯೋತಿಷ ಶಾಸ್ತ್ರವು ಎಷ್ಟೋ ಪ್ರಸಂಗಗಳಲ್ಲಿ ಕೆಲಸಕ್ಕೆ ಬಾರದಾಗುತ್ತದೆ

ಮಹಾರಾಜನು ದೀರ್ಘನಿಶ್ವಾಸವನ್ನು ಬಿಟ್ಟು:— ಜ್ಯೋತಿಶ್ಶಾಸ್ತ್ರದ ವಿಷಯವಾಗಿ ತಡಿತಾ, ನೀನನ್ನುವದು ನಿಜವಿರಬಹುದು; ಆದರೆ ನಮ್ಮ ಗುರುದೇವನು ಸರ್ವಜ್ಞನು! ಭವಿಷ್ಯವನ್ನು ತಿಳಿದ ಅವನು, ನನ್ನನ್ನು ಮೊದಲೇ ಎಚ್ಚರಪಡಿಸಿದ್ದನು; ಮತ್ತು ಅದಕ್ಕೋಸ್ಕರವಾಗಿಯೇ ಆ ಮಂತ್ರಪೂತ ಕಂಕಣವನ್ನು ಪ್ರಾಣಕ್ಕಿಂತಲೂ ಹೆಚ್ಚು ಸಾವಧಾನದಿಂದ ರಕ್ಷಿಸೆಂದು ನಾನಾದರೂ ಮುರಲೆಗೆ ಹೇಳಿದ್ದೆನು. ಗುರುವಾಕ್ಯದ ವಿಷಯದಲ್ಲಿ ನನಗೆ ಕೊಂಚವೂ ಅನುಮಾನವಿರುವದಿಲ್ಲ.

ತಡಿತಾ:—ಈ ವಿಷಯದಲ್ಲಿ ಪಟ್ಟದರಸಿಯು ತಪ್ಪೇನು? ಅವಳು ತಾನಾಗಿ ತನ್ನ ಸರ್ವ ನಾಶದ ಮಾರ್ಗವನ್ನು ಹಿಡಿದಿರುವದಿಲ್ಲ. ಮತ್ಯಾರಾದರೂ ಆ ಕಂಕಣವನ್ನು ಕದ್ದಿರಬಹುದು.

ಮುರಲೆಯು ಅದನ್ನು ಬೇಕಂತ ಕಳೆದಿರಲಿಕ್ಕಿಲ್ಲ; ಆದರೆ ಆ ಕಂಕಣವು ಇಲ್ಲದಂತಾದ್ದರಿಂದ, ನನ್ನ ಪ್ರಿಯ ಮಗಧ ರಾಜ್ಯಕ್ಕೆ ಅನಿಷ್ಟ ಸಂಭವಿಸಿರುವದೇನೋ ನಿಜ ನನ್ನ ಪೂಜ್ಯ ಗುರುದೇವನ ವಚನವು ಎಂದಿಗೂ ವ್ಯರ್ಥವಾಗಲಾರದು.

ಮುಗುಳು ನಗೆ ನಗುತ್ತ ತಡಿತೆ:—ಇಷ್ಟು ದೊಡ್ಡ ಮಗಧ ರಾಜ್ಯದ ಸಾರ್ವಭೌಮನು ಈ ಬಗೆಯ ಕ್ಷುಲ್ಲಕ ಕಾರಣದಿಂದ ಇಷ್ಟು ಸಂತಪ್ತನಾಗುವದು ಸರಿಯಲ್ಲ. ನಿಮ್ಮ ಗುರುದೇವನ ಮಾತಿನಂತೆ ಆ ಕಂಕಣದ ಅಪಹರಣದಿಂದ ಅನಿಷ್ಟವೊದಗುವ ಸಂಭವವಿದ್ದರೆ, ಆ ಗುರುದೇವನನ್ನೇ ಪ್ರಾರ್ಥಿಸಿ, ಈ ಪ್ರಸಂಗದಲ್ಲಿ ಯೋಗ್ಯ ಉಪಾಯವನ್ನು ಕೈಕೊಳ್ಳುವದು ವಿಹಿತವಲ್ಲವೇ? ನಿಮ್ಮ ಗುರುದೇವನು ಸರ್ವಜ್ಞನೇ ಇದ್ದುದಾದರೆ, ಅವನು ಇಂಥ ಸಾಮಾನ್ಯ ವಿಘ್ನಕ್ಕೆ ಸಹಜವಾಗಿ ಪ್ರತೀಕಾರ ಮಾಡಬಹುದು.

ತಡಿತೆಯ ಈ ಸಮಂಜಸ ಯುಕ್ತಿವಾದವನ್ನು ಕೇಳಿ ಚಿಂತಾಸಮುದ್ರದಿಂದ ತನ್ನನ್ನು ದಾಟಿಸಲು ಬಂದ ಯಾವಳೊಬ್ಬ ದೇವತೆಯೋ ಇವಳೆಂದು ಮಹಾರಾಜನಿಗೆ ಭಾಸವಾಯಿತು. ಆಗ ಅವಳು:—ಗುರುದೇವರೆಗೆ ಭೆಟ್ಟಿ ಕೊಡುವ ಸಲುವಾಗಿ ಬಿನ್ನೈಸಿರುವೆನು. ಅವರು ಬಂದ ಮೇಲೆ ಮುಂದಿನ ವ್ಯವಸ್ಥೆಯನ್ನು ಕುರಿತು ಅವರಿಗೆ ಕೇಳುವೆನು

ತಡಿತೆಯು ಪುನ: ಒಳ್ಳೇ ಹುರುಪಿನಿಂದ:—ಕಳ್ಳರು ಹಿಡಿಯಲ್ಪಟ್ಟಿರುವರೇ?

ತಡಿತೇ, ಇನ್ನೂ ಇಲ್ಲ. ಆತನು ಹಿಡಿಯಲ್ಪಟ್ಟಿದ್ದನೆ, ಇಷ್ಟು ಚಿಂತಿಸುತ್ತ ಕೂಡ್ರಲಿಕ್ಕೆ ನಾನೇನು ಮೂರ್ಖನೊ?

ಆತನನ್ನು ಹಿಡಿಯಲು ಪ್ರಯತ್ನ ನಡೆದಿದೆಯಷ್ಟೇ?

ಯಥೇಷ್ಟ ಪ್ರಯತ್ನ ಪಡುತ್ತಿರುವರು; ಆದರೆ ಇದುವರೆಗೆ ಸ್ವಲ್ಪೂ ಫಲಪ್ರಾಪ್ತಿಯಾಗಿಲ್ಲ.

ಇದೊಳ್ಳೇ ಆಶ್ಚರ್ಯದ ಸಂಗತಿ! ಯಾವ ಅಂತ:ಪುರದೊಳಗೆ ಇರುವೆ ಕೂಡ ನುಸಿಯಲಿಕ್ಕೆ ಆಸ್ಪದವಿರುವದಿಲ್ಲವೋ, ಅಂಥ ಆ ತಮ್ಮ ರಾಣಿವಾಸದಲ್ಲಿ, ಅದರಲ್ಲಿಯೂ ತಮ್ಮ ಪಟ್ಟಮಹಿಷಿಯಾದ ಮುರಲಾ ಮಹಾರಾಣಿಯ ಮೈ ಮೇಲಿನ ಆಭರಣದ ಕಳವೇ!

ಇದರಿಂದಲೇ ನನಗೂ ಬಹಳ ಆಶ್ಚರ್ಯವಾಗಿರುತ್ತದೆ; ಹಾಗು ಅದ ಕ್ಕಾಗಿಯೇ ನಾನು ಕಳ್ಳನನ್ನು ಹಿಡಿಯಲೇ ಬೇಕಾಗಿದೆ.

ಆ ಕಳ್ಳ ಒಂದು ವೇಳೆ ಸಿಕ್ಕರೆ?

ಕಳ್ಳ ಸಿಕ್ಕರೆ ಆತನಿಗೆ ಕೂಡಲೆ ಪ್ರಾಣದಂಡನೆಯ ಶಿಕ್ಷೆ ಕೊಡುವೆನು; ಇಲ್ಲವೆ ಅದಕ್ಕೂ ಕ್ರೂರವಾದ ಶಿಕ್ಷೆಯಿದ್ದರೆ ಅದನ್ನೇ ವಿಧಿಸುತ್ತೇನೆ

ಕಳವು ಮಾಡಿದ ವ್ಯಕ್ತಿ ಪುರುಷನಾಗಿರದೆ, ಸ್ತ್ರೀಯಾಗಿದ್ದರೆ?

ಅವಳ ತಲೆ ಬೋಳಿಸಿ, ಕತ್ತೆಯಮೇಲೆ ಕೂರಿಸಿ ಮೆರಸಿ, ನಂತರ ಅವ ಳಿಗೆ ಅನುತಾಪವುಂಟಾಗುವಂತಹ ಮರಣ ದಂಡನೆಯನ್ನು ವಿಧಿಸುವೆನು.

ಈ ವಾಕ್ಯವನ್ನು ಕೇಳಿ ತಡಿತೆಯ ಮೈ ಮೇಲೆ ರೋಮಾಂಚಗಳೆದ್ದವು. ಆದರಿಂದ ಅವಳು ಮತ್ತೆ ಆ ಸಂದರ್ಭದ ಮಾತುಗಳನ್ನೇ ಎತ್ತದಾದಳು. ಮಹಾರಾಜನಿಗೂ ಆ ಕಳವಿನ ಪ್ರಸಂಗದ ಮಾತು-ಕಥೆಗಳು ರುಚಿಸದಾ ದವು. ಆಗ ಆತನು ತಡಿತೆಯನ್ನು ಕುರಿತು:— ತಡಿತೇ, ಉತ್ತೇಜಕವಾದ ಮದ್ಯವಿರುವುದೇ? ತುಸ ಕೊಡು; ಅದರ ಸೇವನದಿಂದ ನನಗೆ ಸ್ವಲ್ಪ ಸಮಾಧಾನವಾದರೆ ಆದೀತು.

ತಡಿತೆಯು ಪಕ್ಕದಲ್ಲಿರುವ ಗೂಡಿನೊಳಗಿಂದ ಒಂದು ಬಂಗಾರದ ಕುಪ್ಪಿಯನ್ನು ತೆಗೆದಳು. ಅದರಲ್ಲಿ ಸುಗಂಧಮಿಶ್ರವಾದ ಒಳ್ಳೇ ಉತ್ತೇಜಕ ಮದ್ಯವಿದ್ದಿತು. ಅವಳು ಅದರಲ್ಲಿಯ ಮದ್ಯವನ್ನು ಒಂದು ರತ್ನಖಚಿತವಾದ ಸಾರಾಯಿಯ ಪಾತ್ರೆಗೆ ಸುರುವಿ, ಆ ಪಾತ್ರೆಯನ್ನು ಮಹಾರಾಜನ ತುಟಿಗೆ ಹಿಡಿದಳು. ಮಗಧೇಶ್ವರನು ಚಕ್ಷುಗಳಿಂದ ತಡಿತೆಯ ಸೌಂದರ್ಯವನ್ನು ಪಾನ ಮಾಡುತ್ತ, ಬಾಯಿಯಿಂದ ಆ ಮದ್ಯವನ್ನು ಸೇವಿಸುತ್ತ, ಅತ್ಯಂತ ತಂದ್ರಾವಸ್ಥೆಯನ್ನನುಭವಿಸಲಾರಂಭಿಸಿದನು. ಆದರಿಂದ ಆ ಕಂಕಣಚೋರ ದಿಂದಾದ ಆತನ ಹೃದಯ ದಾಹವು ಅಡಗಿತು! ಅವನಲ್ಲಿ ಮಾಯಾವೇಷ್ಟಿತ ತಡಿತಾ ವಿಷಯುಕ ತರಂಗವು ಪುನಃ ತಲೆದೋರಿತು!!

ಮಹಾರಾಜನು ಮತ್ತೆ ಮದ್ಯವನ್ನು ಕೊಡೆಂದು ಕೇಳಲು, ಕೊಂಚವೂ ಅನುಮಾನ ಮಾಡದೆ, ಅವಳು ಮತ್ತೆ ಮತ್ತೆ ಆ ಪಾತ್ರೆ ತುಂಬಿ, ಆತನ ತುಟಿಗೆ ಹಿಡಿಯ ಹತ್ತಿದಳು. ಧನನಂದನು ಪುನಃ ಪುನ: ಆಕೆಯ ಮೋರೆ ಯನ್ನು ಎವೆಯಿಕ್ಕದಂತೆ ನಿರೀಕ್ಷಿಸುತ್ತ, ಆ ಪಾತ್ರೆಯನ್ನು ಬರಿದಾಗ ಮಾಡುತ್ತಿದ್ದನು!

ಆ ಬಂಗಾರದ ಕುಪ್ಪಿಯೊಳಗಿನ ಮದ್ಯವೆಲ್ಲ ತೀರುವಷ್ಟರಲ್ಲಿ ಮಹಾ ರಾಜಾ ಮಗಧೇಶ್ವರನು ತಂದ್ರಾವಸ್ಥೆಯಲ್ಲಿ ಸಂಪೂರ್ಣವಾಗಿ ನಿಮಗ

ನಾದನು. ಅನಂತರ ತಡಿತೆಯು ತನ್ನ ಬಲಗೈಯಲ್ಲಿ ವೀಣೆಯನ್ನು ಹಿಡಿದುಕೊಂಡು, ಆತನ ತೊಡೆಗೆ ತೊಡೆಯನ್ನಾನಿಸಿ ಕುಳಿತು ಗಾಯನ ಮಾಡತೊಡಗಿದಳು!

ಮೊದಲೇ ಮದ್ಯದಿಂದ ಮದವೇರಿದ್ದ ನಂದ ಮಹಾರಾಜನಿಗೆ ಆಕೆಯ ಕೋಮಲ ತನುವಿನ ಸ್ಪರ್ಶದಿಂದಲೂ, ಮಧುರ ಗಾನಾಲಾಪದ ಶ್ರವಣದಿಂದಲೂ ಮತ್ತಿಷ್ಟುಮದವೇರಿ, ಆತನು ತೀರ ಉನ್ಮಾದನಂತಾದನು; ಹಾಗು ಆ ಉನ್ಮಾದಾವಸ್ಥೆಯಲ್ಲೇ ಅವನು ಆ ಇಡೀ ದಿವಸ ಮತ್ತು ರಾತ್ರಿಗಳನ್ನು ಆ ವಿಲಾಸ ಕಾನನದಲ್ಲೇ ಕಳೆದನು.



# ಕಂಕಣದ ಕಣ್ಮರೆ

............

ಸಾಯಂಕಾಲವಾದರೂ ನಂದ ಮಹಾರಾಜನು ವಿಲಾಸ ಕಾನನದಿಂದ ತಿರುಗಿ ಬಾರದೆಯಿದ್ದುದನ್ನು ಕೇಳಿ, ಮುರಲೆಯು ಬಹು ಚಡಪಡಿಸಿ ಚಿಂತಾಕ್ರಾಂತಳಾದಳು. ವಿಲಾಸಕಾನನದ ಸುದ್ದಿಯು ಕಿವಿಗೆ ಬಿದ್ದಕೂಡಲೆ ಅವಳು ಮನಸ್ಸಿನಲ್ಲಿ ಮಿಡುಕಹತ್ತುತ್ತಿದ್ದಳು. ಯಾಕೆಂದರೆ ಆ ವಿಲಾಸಕಾನನಕ್ಕೆ ಇತ್ತೀಚೆಗೆ ಪ್ರತಿ ನಿತ್ಯ ಹೋಗುತ್ತಿದ್ದ ಮಹಾರಾಜನು ಅವಳಿಗೆ ಈಗ ಹೇಗೆ ಹೇಗೋ ತೋರಹತ್ತಿದ್ದನು! ಆದುದರಿಂದಲೇ ಮಂತ್ರಪೂತ ಕಂಕಣವನ್ನು ಕಳೆಕೊಂಡು ಮೊದಲೇ ಚಿಂತಾಗ್ರಸ್ತಳಾದ ಮುರಲಾ ಮಹಾರಾಣಿ ಸಂಜೆಯಾದರೂ ತನ್ನ ಪತಿಯು ವಿಲಾಸಕಾನನದಿಂದ ಹಿಂದಿರುಗಿ ಬಾರದ್ದರಿಂದ ಅತ್ಯಂತ ವ್ಯಾಕುಲಳಾದಳು.

ಗುಪ್ತ ಮಂತ್ರಾಲೋಚನೆಗಾಗಿಯೂ, ರಾಜಕಾರಣದ ಸಲುವಾಗಿಯೂ, ನಿರ್ಜನವಾದ ಸ್ಥಳದೊಳಗಿನ ಮನೋಹರ ವಿಶ್ರಾಂತಿಗಾಗಿಯೂ ತಾನು ವಿಲಾಸಕಾನನಕ್ಕೆ ಹೋಗುತ್ತಿರುತ್ತೇನೆಂದು ಧನನಂದನು ಮುರಲೆಯ ಮುಂದೆ ಹೇಳುತ್ತಿದ್ದನು; ಆದರೆ ಮುರಲೆಗೆ ಮೊದಮೊದಲು ಆ ಸಂಗತಿಯು ನಿಜವೆಂದು ಅನಿಸಿದರೂ, ಬರಬರುತ್ತ ನಂದ ಮಹಾರಾಜನು ಆ ವಿಲಾಸ ಕಾನನಕ್ಕೆ ತೆರಳುವ ಉದ್ದೇಶವು ಬೇರೆಯೇ ಇದೆಯೆಂಬುದು ಮನವರಿಕೆಯಾಯಿತು. ಅಲ್ಲಿ ಯಾರು ವಾಸಿಸುತ್ತಿರುವರೆಂಬ ಬಗ್ಗೆ ಅವಳು ತನ್ನದಾಸಿಯರ ಮುಖಾಂತರ ಸಂಧಾನಕಟ್ಟಿದಳು; ಆದರೆ ವಿಲಾಸಕಾನನದ ನಿಸ್ಸಾರ

ಕಾವಲುಗಾರರ ಮುಂದೆ ಆ ದಾಸಿಯರ ಪ್ರಲೋಭನದ ಕಿವಿಮಾತುಗಳು ನಡೆಯದೆ, ಅವರು ವಿಮ್ಮುಖರಾಗಬೇಕಾಯಿತು

ನಂದಮಹಾರಾಜನು ಯಾವ ದಿವಸ ಕಂಕಣವು ಕಳೆದು ಹೋದ ಸಲು ವಾಗಿ ಮುರಲೆಯನ್ನು ಕಾಲಿನಿಂದ ಒದ್ದು ಹೊರಟು ಹೋದನೋ, ಆ ದಿನ ಮುರಲೆಯು ಬಾಯಿಯಲ್ಲಿ ನೀರು ಕೂಡ ಹಾಕದೆ, ಆ ತನ್ನ ಕೋಣೆಯಲ್ಲಿ ಉಪವಾಸದಿಂದಲೇ ನೆಲದ ಮೇಲೆ ಬಿದ್ದುಕೊಂಡು, ಮನದಲ್ಲಿ ಆ ದಯಾಘನ ಕೃಷ್ಣಪರಮಾತ್ಮನನ್ನು ಒಂದೇ ಸವನೆ ಪ್ರಾರ್ಥಿಸಹತ್ತಿದ್ದಳು; ಆದರೆ ಆ ಗೌಳಿಗರ ಪೋರನುಯಾವ ಗೋಪಿಯುಕೂಡ ಕ್ರೀಡಾರತನಾಗಿದ್ದನೊ ಅದಾರು ಬಲ್ಲರು? ಮುರಲೆಯು ಸಂಜೆಯ ವರೆಗೆ ಪ್ರಾರ್ಥಿಸಿದರೂ ಕೂಡ ಆತನು ಅವಳಿಗೆ ದಯೆಪಾಲಿಸಲಿಲ್ಲ.

ಮುರಲೆಯು ಮಹಾ ರಾಣಿಯಾಗಿದ್ದರೂ ಈ ದಿನ ನಂದನು ಅವಳನ್ನು ಹೀಯಾಳಿಸಿದ್ದರಿಂದ, ಆಕೆಯನ್ನು ಯಾರೂ ಮಾತಾಡಿಸದಾದರು. ಯಾವ ದಾಸಿಯರು ಪ್ರತಿ ನಿತ್ಯ ಅವಳ ನೆಳಲಿಗೆ ಕೂಡ ಅಂಜಿ ನಡೆಯುತ್ತಿದ್ದರೋ, ಅದೇ ಆ ವಿನಯಶೀಲ ದಾದಿಗಳು ಮುರಲಾ ರಾಣಿಯು ಇಂದು ಬೆಳಗಿನಿಂದ ಅಲ್ಲಿಯ ಫರಸುಗಲ್ಲಮೇಲೆ ಬಿದ್ದುಕೊಂಡು, ಒಂದೇಸವನೆ ಕಣ್ಣೀರುದುರಿಸುತ್ತ ದುಃಖಿಸಹತ್ತಿದ್ದರೂ, ಅವಳಿಗೆ ನಾಲ್ಕು ಸಮಾಧಾನದ ಮಾತು ಹೇಳಲಿಕ್ಕೂ ಕೂಡ ಯಾರೂ ಬರಲಿಲ್ಲ; ಇಷ್ಟೇ ಅಲ್ಲ, ಕೆಲ ಕೆಲವು ಉದ್ಧಟ ಸ್ವಭಾವದ ನವ ತರುಣ ದಾಸಿಯರು ಆಕೆಗೆ ಕೇಳಿಸುವಷ್ಟು ಗಟ್ಟಿಯಾಗಿ ಕೆಲ ಕೆಲವು ಪಿಸುಣ ನುಡಿಗಳನ್ನು ಕೂಡ ನುಡಿದರು. ದೈವವು ತಿರುಗಿದ ಮೇಲೆ ಯಾರೇನು ಮಾಡುವರು? ಆಗ ಮುರಲೆಗೆ ಬಾಲ್ಯಕಾಲದಿಂದ ಇದುವರೆಗಿನ ತನ್ನ ಚರಿತ್ರವು ನೆನಪಿಗೆ ಬಂದಿತು! ಅದು ಬಹು ಮನೋವೇಧಕವಿದ್ದುದ ರಿಂದ, ಅದರ ಸ್ಮರಣದಿಂದ ಕೆಲ ಕಾಲದ ವರೆಗೆ ಅವಳ ಆ ಅನಿವಾರ ದುಃಖ ಕೂಡ ವಿಸ್ಮರಣಗೊಂಡಿತು. ಅಂಥ ಆ ವಿಚಿತ್ರ ಸಂಗತಿಯಾವುದೆಂಬದನ್ನು ಅರಿಯಲು ಕುತೂಹಲಪಡುತ್ತಿರುವ ನಮ್ಮ ವಾಚಕರಿಗಾಗಿ ನಾವು ಅದನ್ನಿಲ್ಲಿ ಹೇಳುತ್ತೇವೆ:—

ಮುರಲೆಯು ಕೌಮಾರಾವಸ್ಥೆಯಲ್ಲಿರುವಾಗ ಮಗಧ ದೇಶದ ರಾಜನ ಅಂತಃಪುರದಲ್ಲಿ ಪ್ರತಿ ವಾಸಂತ ಪೌರ್ಣಿಮೆಯ ಮೊದಲು ವಸಂತೋತ್ಸವವು ಜರಗುತ್ತಿದ್ದಿತು. ಇಂಥ ಒಂದು ವಸಂತೋತ್ಸವದ ನೈಸರ್ಗಿಕ ಪ್ರಫುಲ್ಲಿತ ಸಮಯದಲ್ಲಿ ಬೆಳ್ಳಿ-ಬಂಗಾರಗಳಿಂದ ಮಾಡಲ್ಪಟ್ಟ ಜೀಕಳಿ-ಕೊಳಿವೆಗಳನ್ನು ಧರಿಸಿದಂಥ ಹಲವು ಮಂದಿ ಕುಮಾರಿಯರೂ, ಬಾಲಿಕೆಯರೂ, ಯುವತಿ

ಯರೂ ರಾಜನ ಅಂತಃಪುರದಲ್ಲಿ ಕಲೆತಿದ್ದರು. ಇಡೀ ಮಗಧ ರಾಜ್ಯದೊಳಗಿನ ಸನ್ಮಾನಿತ ಪ್ರಜೆಗಳ ಮನೆಯ ಹೆಣ್ಣುಮಕ್ಕಳೂ, ದೊಡ್ಡ ದೊಡ್ಡ ಅಧಿಕಾರಿಗಳ ಕುಟುಂಬದವರೂ, ಸರದಾರರ ಝುನಾನಖಾನೆಯವರೂ ರಾಜಪ್ರಾಸಾದದೊಳಗೆ ಆಗುತ್ತಿದ್ದ ಆ ವಸಂತೋತ್ಸವಕ್ಕೆ ಬರಲೇಬೇಕಾದ ರೂಢಿ ಆ ಮಗಧ ರಾಜ್ಯದಲ್ಲಿ ಬಹು ದಿನಗಳಿಂದ ಪ್ರಚಾರದಲ್ಲಿದ್ದಿತು. ಆ ಉತ್ಸವ ಕಾಲಕ್ಕೆ ಮಗಧೇಶ್ವರನ ಹೊರತು ಅನ್ಯನೊಬ್ಬ ಗಂಡಸೂ ಅಲ್ಲಿರುತ್ತಿರಲಿಲ್ಲ.

ಆ ಕಾಲಕ್ಕೆ ಮಗಧೇಶ್ವರನಾದ ನಂದರಾಜನಿಗೆ ರಜತಕುಮಾರಿ ಎಂಬಭಿಧಾನದ ಒಳ್ಳೇ ಪ್ರೀತಿಯ, ರೂಪ-ಲಾವಣ್ಯಗಳಿಂದ ರತಿಯನ್ನು ಹೋಲುವ ಪಟ್ಟದರಸಿಯು ಇದ್ದಳು. ಇಡೀ ದಿವಸ ಒಬ್ಬರ ಮೇಲೊಬ್ಬರು ಜೀಕಳಿಯಿಂದ ಸುಗಂಧಮಿಶ್ರ ಓಕಳಿಯನ್ನು ಹಾರಿಸುತ್ತಿದ್ದಂಥ ಆ ರಮಣೀಗಣವು ಆ ರಾಜಪ್ರಾಸಾದದೊಳಗಿನ ಪ್ರಮೋದೋದ್ಯಾನದಲ್ಲಿದ್ದ ತರು—ಲತೆಗಳಿಂದ ನಿರ್ಮಿಸಲ್ಪಟ್ಟ ಕೇಳೀ ಮಂಟಪಕ್ಕೆ ಪ್ರಾಪ್ತವಾಯಿತು. ಆ ಮಂಟಪದಲ್ಲಿ ವೃದ್ಧ ಸೂರ್ಯನ ಮಂದ ಮಂದ ಕಿರಣಗಳು ಅಲ್ಲಲ್ಲಿ ಪಸರಿಸಿದ್ದವು. ಅವು ಓಕಳಿಯಿಂದ ಮುಳುಗಿದ್ದ ಕೆಲವು ಜನ ಕುಮಾರಿಯರ ಗಲ್ಲಗಳ ಮೇಲೆ ಬಿದ್ದಿದ್ದರೆ, ಬೇರೆ ಕೆಲವು ಮಂದಿ ತರುಣಿಯರ ಉನ್ನತವಾದ ಹಾಗು ಓಕಳಿಯ ಬಣ್ಣದಿಂದ ತೊಯ್ದು ತಪ್ಪಡಿಯಾದ ಪೀನ ಸ್ತನಗಳ ಮೇಲೆ ಬಿದ್ದಿದ್ದವು. ಆ ರಾಸಕ್ರೀಡಾ ಮಂಟಪದ ಒಂದು ಮಗ್ಗಲಲ್ಲಿ ಕೆಲವು ಜನ ಹೆಣ್ಣುಮಕ್ಕಳು ಉತ್ತಮವಾದ ಕೊಳಲನ್ನೂದುತ್ತಿದ್ದರು. ಮತ್ತೊಂದು ಕಡೆಗೆ ಗಾಯನ-ವಾದನಗಳನ್ನು ಮಾಡುತ್ತಿರುವ ನರ್ತಕಿಯರು ಕುಳಿತಿದ್ದರು. ನಟ್ಟನಡುವೆ ಮಂಡಿಸಿದ್ದ ಸ್ವರ್ಣಖಚಿತವಾದ ರಾಸಮಂಟಪದಲ್ಲಿ ನಂದ ಮಹಾರಾಜನು ಕುಳಿತಿದ್ದನು. ಆತನ ಎಡ ಭಾಗದಲ್ಲಿ ಪಟ್ಟದರಸಿಯಾದ ರಜತಕುಮಾರಿ ಕುಳಿತಿದ್ದಳು. ಎದುರಿಗಿನ ಪಾವಟಗೆಯ ಸಾಲಿನಂತಹ ತುಸ ಇಳಿಜಾರಾದ ಪ್ರದೇಶದ ಎರಡೂ ಮಗ್ಗಲುಗಳಲ್ಲಿ ರೂಪ-ಯೌವನ ಸಂಪನ್ನರಾದ ಉಳಿದ ರಾಜಮಹಿಷಿಯರು ನಿಂತುಕೊಂಡಿದ್ದರು. ಅವರಾಚೆಗೆ ರಾಜನನ್ನು ಅರ್ಧಚಂದ್ರಾಕಾರವಾಗಿ ಸುತ್ತುಗಟ್ಟಿ ನಿಂತ ನಿಮಂತ್ರಿತ ಲಲನೆಯರು ಸುಶೋಭಿಸುತಲಿದ್ದರು. ಅವರೆಲ್ಲರ ಅತಿ ಕೋಮಲ ಶರೀರಗಳು ಓಕಳಿಯ ಬಣ್ಣದಿಂದ ಕೆಂಪೇ ಕೆಂಪಾಗಿಬಿಟ್ಟಿದ್ದವು!

ಆಗ ಮತ್ತೆ ಮನೋಹರವಾಗಿ ಕೊಳಲು ಊದ ಹತ್ತಲು. ಕೂಡಲೆ ಯುವತಿಯರು ಮಹಾರಾಜನ ಮೇಲೂ, ಮಹಾರಾಜನು ಆ ತರುಣಿಯರ ಮೇಲೂ ಜೀಕಳಿಗಳಿಂದ ಓಕಳಿಯನ್ನೆರಚಲಾರಂಭಿಸಿದರು. ಆ ಸಮಯ

ದಲ್ಲಿ ಆ ಯುವತಿಯರ ಹಸನ್ಮುಖವು ಎಷ್ಟು ಸುಶೋಭಿತವಾಗಿ ತೋರು ತ್ತಿರುಹುದೆಂಬದನ್ನು ಆದಾರು ಬಣ್ಣಿಸಿ ಹೇಳುವರು? ಆ ಪ್ರಸಂಗದಲ್ಲಿ ಹಾಜರಿದ್ದ ರಸಿಕರ ಹೊರ್ತು ಅನ್ಯರೆಲ್ಲರೂ ಅಸಮರ್ಥರೇ ಸರಿ.

ಅಂಥ ಸುಖಕರವಾದ ಒಂದು ವಸಂತೋತ್ಸವದ ಕಾಲಕ್ಕೆ ಒಂದು ಅಘಟಿತ ಘಟನೆಯು ಘಟಿಸಿತು! ಪಟ್ಟದರಸಿಯಾದ ರಜತಕುಮಾರಿಯು ತಲೆಯ ಮೇಲಿನ ರತ್ನಖಚಿತ ಕಿರೀಟ ಒಮ್ಮಿಂದೊಮ್ಮೆಲೆ ಕಳಚಿ ಭೂಮಿಗೆ ಬಿದ್ದಿತು! ಅದರಿಂದ ಅಲ್ಲಿ ಕಲೆತಿದ್ದ ಎಲ್ಲ ನಾರಿಯರ ಮನಸ್ಸುಗಳೂ ಖಿನ್ನ ವಾದವು. ಈ ಪ್ರಕಾರದ ಅವಲಕ್ಷಣವು ಅಲ್ಲಿ ಎಂದೂ ಯಾವಾಗಲೂ ಸಂಭವಿಸಿರಲಿಲ್ಲ; ಆದರೆ ಅಂದಿನ ದಿವಸ ಆ ಪ್ರಸಂಗವು ಆಕಸ್ಮಿಕವಾಗಿ ಪ್ರಾಪ್ತವಾಯಿತು.

ಆ ಮುಕುಟ ಪತನದಿಂದ ರಾಣಿಯು ವಿಚಲಿತಚಿತ್ತಳಾದಳು; ಮಹಾ ರಾಜನೂ ಖಿನ್ನನಾದನು; ಕೂಡಿದ ನಾರಿಯರಂತೂ ಹೌಹಾರಿ ಹೋದರು. ಈ ಸ್ಥಿತಿಯಲ್ಲಿ ಕೆಲವು ಕ್ಷಣಗಳು ಕಳೆಯಲು, ಮಿಂಚಿನಂತೆ ಹೊಳಪುಳ್ಳ ವಳೂ, ಕಿಶೋರಾವಸ್ಥೆಯನ್ನು ಆಗಲೆ ದಾಟಲನುವಾದವಳೂ ಆದ ಒಬ್ಬಳು ರಾಣಿಯ ಬಳಿಗೆ ಬಂದಳು; ಹಾಗು ಅಲ್ಲಿಯೇ ಕೆಳಗೆ ಬಿದ್ದಿರುವ ಆ ರತ್ನಖಚಿತವಾದ ಕಿರೀಟವನ್ನು ಎತ್ತಿಕೊಂಡು ರಾಣಿಯ ತಲೆಯ ಮೇಲಿಡ ಹೋದಳು. ಆ ಕಿಶೋರಿ ಅತಿ ಸುಂದರಿಯಾದ್ದರಿಂದಲೂ, ಮೊದಲೇ ಗುಲಾಬೀ ಹೂವಿನ ಬಣ್ಣದಂತಿದ್ದ ಅವಳ ಕಪೋಲಗಳು ಓಕಳಿಯ ಬಣ್ಣ ದಿಂದ ಮತ್ತಿಷ್ಟು ನಸುಗೆಂಪಾಗಿ ತೋರುತ್ತಿದ್ದದರಿಂದಲೂ, ಇಷ್ಟುದ್ದನ್ನ ಅವಳ ಅಚ್ಚುಕಪ್ಪಾದ ಕೇಶ ಕಲಾಪವು ಅವಳ ಬೆನ್ನಮೇಲಿನಿಂದ ಹಾಯ್ದು ಕಾಲಿನ ತುದಿಯ ವರೆಗೂ ಇಳಿಬಿದ್ದಿದ್ದರಿಂದಲೂ, ಮುಖಕಾಂತಿಯು ಪೌರ್ಣಿಮೆಯ ಚಂದ್ರನ ಕಾಂತಿಯನ್ನು ಹೋಲುತ್ತಿದ್ದದರಿಂದಲೂ ಧನನಂದ ರಾಜನ ದೃಷ್ಟಿಯು ಆಕೆಯ ಕಡೆಗೆ ಸಹಜವಾಗಿಯೇ ಆಕರ್ಷಿಸಲ್ಪಟ್ಟಿತು. ದೃಷ್ಟಿ ಯಲ್ಲಿ ಒಂದು ತರಹದ ಗೂಢವಾದ ಆಕರ್ಷಣ ಶಕ್ತಿಯಿರುವದರಿಂದ, ಮಹಾರಾಜನ ಆ ದೃಷ್ಟಿಯು ಆ ತರುಣಿಯ ದೃಷ್ಟಿಯನ್ನು ಆಕರ್ಷಿಸಿ ಬಿಟ್ಟಿತು. ಅದರಿಂದ ಆ ರಮಣಿಯು ಅತ್ಯಂತ ಚಂಚಲಳಾದಳು! ಅಂಗಾಲಿ ನಿಂದ ನಡನೆತ್ತಿಯ ವರೆಗಿನ ಆಕೆಯ ದೇಹವು ಥರ ಥರನೆ ಕಂಪಿಸಹತ್ತಿತು! ಶರೀರವು ನಡುಗಹತ್ತಲು, ದೃಷ್ಟಿಯಲ್ಲೂ ಚಾಂಚಲ್ಯವು ಪ್ರಾದುರ್ಭವಿಸಿತು. ತನ್ನ ಕೈಗಳಿಂದ ಎತ್ತಿಹಿಡಿದು, ರಜತಕುಮಾರಿಯ ತಲೆಯ ಮೇಲೆ ಇಡ ಲಿಕ್ಕೆ ಹೋಗಿದ್ದ ಆ ಮುಕುಟವು ಆಕೆಯ ಕೈಯಿಂದ ಜಾರಿ ನೆಲಕ್ಕೆಬಿದ್ದು

ಚೂರು-ಚೂರಾಗಿ ಹೋಯಿತು! ಈಗಂತೂ ಆ ರಾಸಕ್ರೀಡಾ ಮಂಟಪದಲ್ಲಿ ಮೊದಲಿಗಿಂತಲೂ ಹೆಚ್ಚಿನ ವಿಷಣ್ಣತೆ ತಲೆದೋರಿತು!

ಆ ಮುಕುಟವನ್ನು ರಾಣಿಯು ತಲೆಯ ಮೇಲೆ ಇಡಲು ಹೋಗಿದ್ದ ಆ ರಮಣಿಯು 'ವ್ಯಾಧನ ಬಾಣ ನಟ್ಟು ಬಳಲುತ್ತಿದ್ದ ಹೆಣ್ಣು ಚಿಗರಿಯಂತೆ' ಅತ್ಯಂತ ವ್ಯಥಿತ ಚಿತ್ತಳಾಗಿ, ಕೂಡಲೆ ಆ ಸ್ಥಾನದಿಂದ ಹೊರ ಹೊರಟಳು. ಆಗ ಆ ವಸಂತಮಹೋತ್ಸವವು ಹಸಗೆಟ್ಟುಹೋಯಿತು! ಪಟ್ಟದರಸಿಯಾದ ರಜತಕುಮಾರಿಯೂ ವಿಷಣ್ಣವದನದಿಂದ ಅಲ್ಲಿಂದ ಎದ್ದು, ತನ್ನ ಮಹಾಲಿಗೆ ನಡೆದಳು. ಮಹಾರಾಜಾ ಧನನಂದನೂ ಅಲ್ಲಿಂದ ಎದ್ದು, ಮಂದಗತಿಯಿಂದ ಆ ಮಂಟಪವನ್ನು ತ್ಯಜಿಸಿ, ಸಮೀಪದ ಉದ್ಯಾನವನವನ್ನು ಪ್ರವೇಶಿಸಿದನು; ಮತ್ತು ನಿಮಂತ್ರಿತ ಸನ್ಮಾನನೀಯ ರಮಣೀಗಣವೂ ಘಟಿಸಿದ ಸಂಗತಿಯ ಬಗ್ಗೆ ಹೆಚ್ಚಾಗಿ ಹಳಹಳಿಸುತ್ತ ತಮ್ಮ ತಮ್ಮ ಮನೆಗಳ ದಾರೀ ಹಿಡಿಯಿತು.

ವಾಚಕರೇ, ಆಕಸ್ಮಿಕವಾಗಿ ರಾಣೀ ರಜತಕುಮಾರಿಯ ತಲೆಯಿಂದ ಕಳಚಿ ಬಿದ್ದ ಮುಕುಟವನ್ನು ಪುನಃ ಆಕೆಯ ತಲೆಯ ಮೇಲಿರಿಸಹೋಗಿದ್ದ ಆ ನವ ಯೌವನಭರಿತ ಸುಂದರ ಲಲನೆಯು ಮತ್ತೆ ಯಾರೂ ಆಗಿರದೆ ಆಕೆ ನಮ್ಮ ಮುರಲೆಯೇ ಆಗಿದ್ದಳು. ಮುರಲೆಯು ಕ್ಷತ್ರಿಯ ಕುಲೋತ್ಪನ್ನಳಾಗಿದ್ದರೂ, ಅತ್ಯಂತ ಬಡತನದಲ್ಲೇ ಹುಟ್ಟಿಬೆಳೆದವಳು. ಅದರಲ್ಲೂ ಸಮೀಪದ ಆಪ್ತೇಷ್ಟರೆಲ್ಲರೂ ಬಾಲ್ಯಕಾಲದಲ್ಲೇ ತೀರಿಕೊಂಡದ್ದರಿಂದ, ಅವಳು ತನ್ನ ಒಳಗದ ಒಬ್ಬ ವೃದ್ಧಳೊಡನೆ ಪಾಟಲಿಪುತ್ರ ರಾಜಧಾನಿಯೊಳಗೆ ಗಂಗಾ ತೀರದಲ್ಲಿನ ಹುಲ್ಲುಮನೆಯಲ್ಲಿ ವಾಸಿಸುತ್ತಿದ್ದಳು. ಅವಳು ಇದಕ್ಕೆ ಮೊದಲೆಂದೂ ಆ ವಸಂತೋತ್ಸವಕ್ಕೆ ಹೋಗಿರಲಿಲ್ಲ. ಈಗ ಅವಳು ಸರಾಸರಿ ಹದಿನಾರು ವರ್ಷದವಳಿರಬಹುದು. ಸ್ವಾಭಾವಿಕ ನಯನಮನೋಹರವಾದ ರೂಪವುಳ್ಳ ಆ ಮುರಲೆಯು, ಅಂದು ರಾಣಿಯ ಮುಕುಟವನ್ನು ಅವಳಿಗೆ ಧರಿಸ ಹೋದ ಕಾಲಕ್ಕೆ ಅವಳು ನಂದಮಹಾರಾಜನ ಕಣ್ಣಿಗೆ ಬೀಳಲು, ಆದರಿಂದ ಉಭಯತರ ಅಂತರಂಗಗಳಲ್ಲಿಯೂ ಒಂದು ಬಗೆಯ ಅನಿರ್ವಾಚ್ಯ ಸ್ನಿಗ್ಧ ಭಾವವು ತಲೆದೋರಿತು! ಅತ್ಯಂತ ದರಿದ್ರಳೂ ಅನಾಥಳೂ ಅಬಲೆಯೂ ಆಗಿದ್ದ ಮುರಲೆಯು ಆ ತನ್ನ ಅಂತರಂಗದ ಭಾವವನ್ನು ಬೈಲಿಗೆ ಇಟ್ಟು, ಬೆಳಸಿ, ಪರಿಪುಷ್ಟವಾಗಮಾಡುವದು ತೀರ ಅಸಂಭವದ ಮಾತಾಗಿದ್ದಿತು; ಆದರೆ ಮಹಾರಾಜಾ ಧನನಂದನಿಗೆಮಾತ್ರ ಆ ಸಂಗತಿಯು ಅಶಕ್ಯಕೋಟಿಯದಾಗಿರಲಿಲ್ಲ.

ಧನನಂದ ರಾಜನು ವಿಷಣ್ಣವದನದಿಂದ ವಸಂತೋತ್ಸವದೊಗಿನ ಆ ರಾಸಕ್ರೀಡಾಮಂಟಪದಿಂದ ಹೊರ ಬಿದ್ದವನು, ಉದ್ಯಾನ ವನದೊಳಗೆ ಸ್ವಲ್ಪ ವೇಳೆ ಅತ್ತಿತ್ತ ಸುಮ್ಮನೆ ತಿರುಗಾಡಹತ್ತಿದನು. ಅಷ್ಟರಲ್ಲಿ ಸೂರ್ಯನಾರಾಯಣನು ಅಸ್ತಂಗತನಾಗಿ, ಸ್ವಚ್ಛವಾದ ಬೆಳದಿಂಗಳು ಎಲ್ಲೆಲ್ಲಿಯೂ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಹತ್ತಿತು. ಮಾರುತನು ಮಂದರಾಚಲದ ಸುಗಂಧಗಳನ್ನು ಬೆರೆಸಿ ತಂದಿದ್ದ ವಾಯುವನ್ನು ಮಂದ ಮಂದವಾಗಿ ಬೀಸಲಿಕ್ಕೆ ಪ್ರಾರಂಭಿಸಿದನು. ಆ ಸ್ವಚ್ಛವಾದ ಮತ್ತು ತಂಪಾದ ಚಂದ್ರನ ಕಿರಣಗಳಿಂದಲೂ, ಮಂದ ಮಾರುತನಿಂದನೂ ಹಗಲೆಲ್ಲ ದುಡಿದು ದಣಿದ ಎಷ್ಟೋ ಜನ ಜೀವಿಗಳಿಗೆ ಸುಖವೆನಿಸುವದು ಸ್ವಾಭಾವಿಕ; ಆದರೆ ಆ ಶೀತಲ ಚಂದ್ರಕಿರಣಗಳೂ, ಸುಗಂಧಪೂರ್ಣ ಮಂದಮಾರುತವೂ ವಿರಹಿಗಳಿಗೆ ಮಾತ್ರ ತೀರ ಅಪಥ್ಯಕರಗಳಾಗಿ ಪರಿಣಮಿಸುವದರಿಂದ, ಅವರ ಸಂತಾಪವು ಮತ್ತಿಷ್ಟು ಹೆಚ್ಚುವದು. ಧನನಂದ ಮಹಾರಾಜನಿಗೆ ಆ ಬೆಳದಿಂಗಳಿಂದ ಹಾಗು 'ವಸು ಗಾಳಿಯಿಂದ ಸ್ವಲ್ಪವೂ ಸುಖವೆನಿಸದೆ, ಅವನಲ್ಲಿ ಆ ನವತರುಣಿಯ ದರ್ಶನಾಕಾಂಕ್ಷೆಯು ಇಮ್ಮಡಿಸಿತು! ಆದರಿಂದ ಅವನು ಹುಚ್ಚುಹಿಡಿದವರ ಹಾಗೆ ಆ ಉದ್ಯಾನದ ಒಂದು ತುದಿಯಿಂದ ಇನ್ನೊಂದು ತುದಿಯ ವರೆಗೆ ಒಳ್ಳೇ ವೇಗದಿಂದ ಸಾಗಿ ಹೋಗುವನು; ಎಲ್ಲಿಯಾದರೂ ತುಸ ಶಬ್ದವಾದ ಕೂಡಲೆ ಅಲ್ಲಿ ನಿಂತು ಸುತ್ತೂಕಡೆಗೆ ಕೆಲ ಕ್ಷಣಗಳವರೆಗೆ ದಿಟ್ಟಿಸಿ ನೋಡಿ, ಬಳಿಕಮತ್ತೆ ಕಾಲಿಗೆ ಬುದ್ಧೀ ಹೇಳುವನು. ಹೀಗೆ ಅವನು ಆ ಉದ್ಯಾನ ವನದೊಳಗೆ ಒಂದೆರಡು ತಾಸುಗಳ ವರೆಗೆ ಭ್ರಮಿಸಿದರೂ ಅವನ ಇಷ್ಟಾರ್ಥ ಕೈಗೂಡದೆ, ಆತನ ವಿರಹಾಗ್ನಿ ಮಾತ್ರ ಇನ್ನಿಷ್ಟು ಪ್ರಜ್ವಲಿಸಿಗು. ಆಗ ಆ ಮಹಾರಾಜನು ಹತಾಶನಾಗಿ, ಒತ್ತಟ್ಟಿಗೆ ಕುಳಿತು ಮನಸ್ಸಿನಲ್ಲಿ:—ನಾನು ಆ ರಮಣಿಯನ್ನು ಆಗಲೆ ಅಲ್ಲಿಂದ ಹೋಗಗೊಟ್ಟದ್ದೇ ತಪ್ಪು. ಹೋಗಗೊಟ್ಟಿದ್ದರೂ ಚಿಂತೆಯಿದ್ದಿಲ್ಲ; ಆದರೆ ಅವಳು ಎಲ್ಲಿಯವಳು? ಎಲ್ಲಿ ವಾಸಿಸುವಳು? ಹೆಸರೇನು? ಇವಿಷ್ಟನ್ನಾದರೂ ಕೇಳಿಕೊಂಡಿದ್ದರೆ, ಇಲ್ಲಿ ಇಷ್ಟೊತ್ತಿನ ತನಕ ಸುಮ್ಮನೆ ಬಳಲುತ್ತ ಕೂಡ್ರುವ ಪ್ರಸಂಗ ನನಗೆ ಉಂಟಾಗುತ್ತಿರಲಿಲ್ಲ, ಎಂದು ತನ್ನನ್ನು ತಾನೇ ಹಳಿದುಕೊಂಡು, ಕುಳಿತಲ್ಲಿಂದ ಎದ್ದು, ತನ್ನ ರಾಜ ಭವನದ ಕಡೆಗೆ ಹೋಗಬೇಕೆಂದು ಅತ್ತಣ ದಾರೀ ಹಿಡಿದು ಸಾಗಿದನು; ಆದರೆ ಹತ್ತಿಪ್ಪತ್ತು ಹೆಜ್ಜೆ ಹೋಗುವಷ್ಟರೊಳಗೆ ಆತನ ಮನಸ್ಸಿನಲ್ಲಿ ಮತ್ತೆ ಏನೋ ವಿಚಾರ ಬರಲು, ಅವನು ಅಲ್ಲಿಂದ ಹಿಂದಿರುಗಿ, ಆ ಉದ್ಯಾನವನದೊಳಗಿನ ಪುಷ್ಕರಣಿಯ ಕಡೆಗೆ ನಡೆದನು.

ಮಹಾ ರಾಣಿಯ ಮುಕುಟವು ನೆಲಕ್ಕೆ ಬಿದ್ದು ಚೂರು—ಚೂರಾದ್ದರಿಂದ ತನ್ನನ್ನು ರಾಜನು ಎಲ್ಲಿ ದಂಡಿಸುವನೋ, ರಾಣಿಯು ತನ್ನನ್ನು ಯಾವ ಗುಪ್ತ ಕಾರಾಗೃಹಕ್ಕೆ ಕಳಿಸುವಳೋ ಎಂಬ ಅಂಜಿಕೆಯಿಂದ ಮುರಲೆಯು ಅಂದು ತನ್ನ ಹುಲ್ಲ ಚಪ್ಪರದ ಬಿಡಾರಕ್ಕೆ ಹೋಗಲೇ ಇಲ್ಲ. ಎಲ್ಲರ ಕಣ್ಣು ತಪ್ಪಿಸಿ ಅವಳು ಬಹು ಹೊತ್ತಿನ ವರೆಗೆ ಆ ಉದ್ಯಾನವನದೊಳಗಿನ ಒಂದು ಮೂಲೆಯಲ್ಲಿಯ ದಟ್ಟವಾದ ಲತೆಯಲ್ಲಿ ಅಡಗಿಕೊಂಡು ಕುಳಿತಿದ್ದಳು, ದಿನ ಮಣಿ ಅಸ್ತಂಗತನಾದ ಎಷ್ಟೋ ಕಾಲದ ವರೆಗೆ ಅವಳು ಅಲ್ಲಿಯೇ ಸಚಿಂತಾವಸ್ಥೆಯಲ್ಲಿ ಕುಳಿತುಕೊಂಡು, ಅನಂತರ ಮೇಲೆ ವಿವರಿಸಿದ ಆ ಕಲ್ಯಾಣಿಯ ತಟಾಕದಲ್ಲಿ ಹೋಗಿ ಕುಳಿತಿದ್ದಳು. ಅವಳ ಮನಸ್ಸು ಅತ್ಯಂತ ಖಿನ್ನವೂ ಚಿಂತಾಕ್ರಾಂತವೂ ಆಗಿದ್ದರೂ, ಬಾಲ್ಯಸ್ವಭಾವಕ್ಕನುಸಾರವಾಗಿ ಅವಳು ಆ ಪುಷ್ಕರಣಿಯ ತಿಳಿ ನೀರನ್ನು ಆಕಾಶದ ಕಡೆಗೆ ಹಾರಿಸುತ್ತಲೂ, ಹಾಗೆ ಹಾರಿಸಿದ ನೀರೊಳಗಿಂದ ಚಂದ್ರಬಿಂಬವನ್ನು ನಿರೀಕ್ಷಿಸುತ್ತಲೂ, ಇನ್ನೂ ಅನೇಕ ಪ್ರಕಾರದ ಲೀಲೆಗಳನ್ನು ಮಾಡುತ್ತಲೂ ಕಾಲ ಹರಣ ಮಾಡುತಲಿದ್ದಳು. ಆಗ ಆಕೆಗೆ ತಾನು ಎಲ್ಲ ಕುಳಿತಿದ್ದೇನೆ, ಏನು ಮಾಡುತ್ತಿದ್ದೇನೆ? ಎಂಬುದರ ಅರಿವು ಕೂಡ ಚೆನ್ನಾಗಿ ಇದ್ದಂತೆ ಕಾಣಲಿಲ್ಲ

ಯಾಕಂದರೆ, ನಂದ ಮಹಾರಾಜನು ಆ ಪುಷ್ಕರಣೀ ತಟಾಕಕ್ಕೆ ಬಂದು, ಒಳಗೆ ಯಾರೋ ಕುಳಿತಿರುವರೆಂಬದನ್ನು ನೋಡಿ, ಮೇಲಿನಿಂದಲೆ ''ಯಾರವರು?'' ಎಂದು ಗಟ್ಟಿಯಾಗಿ ಗದ್ದರಿಸಿ ವಿಚಾರಿಸಿದನು. ಆದರೂ ಕ್ರೀಡಾಸಕ್ತಳಾಗಿದ್ದ ಆ ಯುವತಿಯು ಮಾತೇ ಆಡಲಿಲ್ಲ ಮಾನವರೋ, ಭೂತ-ಪಿಶಾಚಿಯೋ ಅಥವಾ ವನದೇವಿಯೋ ಎಂಬದನ್ನು ಪರೀಕ್ಷಿಸುವದಕ್ಕಾಗಿ ರಾಜನು ಆ ಪುಷ್ಕರಣಿಯ ಪಾವಟಿಗೆಗಳ ಸಮೀಪಕ್ಕೆ ಬಂದು ಮತ್ತೆ 'ಯಾರವರು?'' ಎಂದು ಕೇಳಿದನು. ಆಗಲೂ ಅವಳು ಉತ್ತರಕೊಡದಿರಲು, ರಾಜನು ಸಮೀಪಕ್ಕೆ ಹೋಗಿ:—ರಮಣೀ. ನೀನಾರು? ನನ್ನ ಪ್ರಾಣಗಳನ್ನು ಕಳವು ಮಾಡಿಕೊಂಡು ಬಂದಿರುವ ನೀನು ಎಲ್ಲಯವಳು? ಎಂದು ಕೂಗಿ ಕೇಳಿದನು.

ಈ ಶಬ್ದಗಳಿಂದ ಆ ಯುವತಿಯ ಚಿತ್ತವು ತಿರುಗಿತು. ಆದರೂ ಆಕೆ ಬಾಯಿಯಿಂದ ಏನೂ ಉತ್ತರ ಕೊಡದೆ, ಮಹಾರಾಜನ ಕಡೆಗೆ ಒಂದು ಸಲ ಸಲಜ್ಜೆಯಿಂದ ನೋಡಿದಳು ಮಾತ್ರ; ಮತ್ತು ಉತ್ತರ ಕ್ಷಣದಲ್ಲೇ ಕುಳಿತು ಸ್ಥಳದಿಂದೆದ್ದು ನಿಂತು:—ಮಹಾರಾಜ, ಈ ದಾಸಿ ತೀರ ದೀನಳು. ಮಗಧೇಶ್ವರನ ಹಾಸಕ್ಕೆ ಇವಳು ಉಪಯುಕ್ತಳಾಗಿರುವದಿಲ್ಲ.

ಸುಂದರೀ, ನೀನಾರು ಯಾರಿಗೆ ಉಪಹಾಸವನ್ನು ಮಾಡುವರು? ನೀನೋ-ನಾನೋ? ನೀನು ನನ್ನಪ್ರಾಣಗಳನ್ನು ಕದ್ದುಕೊಂಡು ಹೋಗಿದ್ದೆ; ಎಷ್ಟೋ ಶ್ರಮ ಪಟ್ಟು, ನಾನು ನಿನ್ನನ್ನೀಗ ಕಂಡು ಹಿಡಿದಿರುತ್ತೇನೆ! ಹೀಗಿದ್ದು, ನಾನೇ ನಿನಗೆ ಉಪಹಾಸ ಮಾಡುತ್ತಿರುವೆನೇ! ಸುಂದರೀ, ನೀನೇ ನನಗೆ ಪರಿಹಾಸ ಮಾಡುತ್ತೀಯೆಂದು ತೋರುತ್ತದೆ.

ಆಗ ಆ ಸುಂದರಿಯು ಏನೂ ಮಾತನಾಡಲಿಲ್ಲ ಬಳಿಕ ಧನನಂದ ಮಹಾರಾಜನು ಅವಳನ್ನು ತನ್ನ ಅಂತಃಪುರಕ್ಕೆ ಕರೆದೊಯ್ದನು; ಹಾಗು ಮರು ದಿನವೇ ಅವಳನ್ನು ಲಗ್ನವಾಗಿ ತನ್ನ ಪಟ್ಟದರಸಿಯನ್ನಾಗಿ ಮಾಡಿದನು; ಮತ್ತು ಈ ನವ ವಧುವಿನ ರೂಪ-ಲಾವಣ್ಯಗಳ ಮುಂದೆ ಮೊದಲಿನ ಪಟ್ಟದರಸಿಯಾದ ರಜತಕುಮಾರಿಯು ತೀರ ತ್ಯಾಜ್ಯಳೆಂದು ತಿಳಿದು, ಅವಳನ್ನು ತನ್ನ ಅಂತಃಪುರದಿಂದ ಹೊರ ಹೊರಡಿಸಿ, 'ನಲಾಂದಾ' ಎಂಬ ಹೆಸರಿನ ರಾಜಕೈದಿಗಳನ್ನಿರಿಸುವ ದುರ್ಗಕ್ಕೆ ಕಳಿಸಿಬಿಟ್ಟನು.

ಮುರಲೆಯು ಅಂದಿನಿಂದ ಧನನಂದನ ಪಟ್ಟದರಸಿಯಾಗಿ ದಿನೇ ದಿನೇ ಹೆಚ್ಚೆಚ್ಚು ಉನ್ನತಿ ಪಡೆಯುತ್ತ ಸಾಗಿದ್ದಳು; ಆದರೆ ವಿವಾಹಕಾಲದಲ್ಲಿಯ ಗುರುದೇವನ ವಾಕ್ಯದಂತೆ, ಇಂದು ಅವಳ ವಾಮ ಹಸ್ತದೊಳಗಿನ ಆ ಮಂತ್ರಪೂತ ಕಂಕಣವು ಹೇಗೋ ಅದೃಶ್ಯವಾಗಲು, ಇಂದಿನಿಂದಲೇ ಅವಳ ಅವನತಿಗೆ ಪ್ರಾರಂಭವಾಗಿತ್ತು. ಸುಖದ ಯುಗವು ಬಹು ತೀವ್ರವಾಗಿಯೂ ದುಃಖದ ನಿಮಿಷವೂ ಸಹ ತೀರ ತಡವಾಗಿಯೂ ಕ್ರಮಿಸುತ್ತವೆಂಬುದು ಸಟೆಯಲ್ಲ. ಯಾಕಂದರೆ ಈಗ ಎಷ್ಟೋ ವರ್ಷಗಳ ವರೆಗೆ ಅತ್ಯಂತ ಸುಖವನ್ನನುಭವಿಸಿದ ನಮ್ಮ ಮುರಲಾ ರಾಣಿಗೆ, ಕಂಕಣವು ಅಪಹೃತವಾದ ಒಂದು ದಿನದ ದುಃಖವೇ ದುಸ್ಸಹವೆಂಬುದು ಚೆನ್ನಾಗಿ ಅನುಭವವಾಯ್ತು.



## ಅವಹೇಲನೆಯಾಗಕೂಡದು.

................

ಲೋಕದಲ್ಲಿ ಸಾಮಾನ್ಯರಾದ ಬಡವರಿಗೇ ಅನೇಕಬಗೆಯ ವೈರಿಗಳಿರುತ್ತಿರಲು, ಅಧಿಕಾರ ಪೂರ್ಣರೂ ಮದಾಂಧರೂ ಆದ ಶ್ರೀಮಂತರಿಗೆ ಹಗೆಗಳಿಗೆ ಕೊರತೆಯೇ? ಮುರಲೆಯು ಮಗಧೇಶ್ವರನ ಪಟ್ಟದ ರಾಣಿಯಾಗಿದ್ದರೂ ಆಕೆಯು ಮೇಲೆ ವಿವರಿಸಿದ ಲೋಕದೊಳಗಿನ ಈ ಸರ್ವ ಸಾಧಾರಣ ನಿಯಮಕ್ಕೆ ಅಪವಾದವಾಗುವ ಬಗೆಯುಂಟೇ? ಅವಳಿಗೆ ಅನೇಕ ಮಂದಿ

ಶತ್ರುಗಳಿದ್ದರು. ಆ ಹಗೆಗಳಲ್ಲಿ ಪ್ರಮುಖಳಾದವಳು ರಾಣೀ ರಜತಕುಮಾರಿಯೇ. ಆಕಸ್ಮಿಕವಾಗಿ ತನ್ನ ತಲೆಯ ಮೇಲಿಂದ ಕಳಚಿ ಬಿದ್ದ ಮುಕುಟವನ್ನು ಈ ಮುರಲಾ ಸೆಟವಿಯೇ ಪುನಃ ತನ್ನ ತಲೆಯ ಮೇಲೆ ಧರಿಸಲಿಕ್ಕೆ ಬಂದು, ಬೇಕೂ ಅಂತ ಅದನ್ನು ನೆಲಕ್ಕಪ್ಪಳಿಸಿ, ಚೂರು-ಚೂರು ಮಾಡಿ,ಆ ವಸಂತೋತ್ಸವದಲ್ಲಿ ಅಪಶಕುನವನ್ನುಂಟು ಮಾಡಿ, ತನ್ನ ಮೇಲಿನ ನಂದ ಮಹಾರಾಜನ ಪ್ರೇಮ ಪರಿಸಮಾಪ್ತಿಗೆ ಕಾರಣಳಾದಳೆಂದು ರಜತಕುಮಾರಿ ದೃಢವಾಗಿ ಭಾವಿಸಿಕೊಂಡಿದ್ದಳು; ಮತ್ತು ಆ ಕಾರಣದಿಂದಲೇ ಅವಳು ಇವಳನ್ನು ಅತ್ಯಂತವಾಗಿ ದ್ವೇಷಿಸುತ್ತಿದ್ದಳು. ಆ ಮಾನದಿಂದ ಇತರ ಪಟ್ಟದರಸಿಯರೂ, ರಜತಕುಮಾರಿಯ ಹಿತೈಷಿ ಜನರೂ ಇವಳನ್ನು ದ್ವೇಷಿಸಿದರೆ ತಪ್ಪೇನು?

ನಂದರಾಜನು ಮುರಲೆಯನ್ನು ವರಿಸಿದಾಗಿನಿಂದ ತನ್ನ ರಾಜ್ಯದಾಢಳಿತದ ಕಡೆಗೆ ಇಣಿಕಿ ಹಾಕದಾದನು; ತನ್ನ ಆಪ್ತೇಷ್ಟರ ಕಡೆಗೆ ಇಣುಕಲಾರದಾದನು. ತನ್ನ ಇತರ ಅಂತಃಪುರದವರ ಕಡೆಗೂ ಹಣಿಕಿ ಹಾಕದಾದನು. ಇಷ್ಟೇ ಅಲ್ಲ, ತನ್ನ ಊಟ-ಓಟಗಳ ಪರಿವೆ ಕೂಡ ಇಲ್ಲದಂತೆ ಸದಾ ಆ ಮುರಲಾ ರಾಣಿಯ ಸ್ವೊತನ ಮಹಾಲಿನಲ್ಲಿ ಅವಳೊಡನೆ ಗುಜಗೋಷ್ಠಿಗಳನ್ನಾಡುವದರಲ್ಲಿಯೂ, ವಿಹರಿಸುವುದರಲ್ಲಿಯೂ ಕಾಲಯಾಪನೆ ಮಾಡುತಲಿದ್ದನು. ಅದರಿಂದ ಮುರಲೆಯನ್ನು ದ್ವೇಷಿಸುವವರ ಸಂಖ್ಯೆಯು ಮಿತಿ ಮೀರಿತು. ರಜತಕುಮಾರಿಯಿಂದ ಮೊದಲುಮಾಡಿಕೊಂಡು, ಸಾಧಾರಣ ಪ್ರತಿಯ ಒಬ್ಬ ರಾಜಸೇವಕನ ವರೆಗೆ ಎಲ್ಲರೂ ಅವಳನ್ನು ವಕ್ರದೃಷ್ಟಿಯಿಂದ ನೋಡುವವರೇ ಆದರು. ಇಂಥ ಸ್ಥಿತಿಯಲ್ಲಿ ಕಂಕಣದ ಅಪಹೃತದಿಂದ ಮುರಲಾ ರಾಣಿಯ ಮೇಲೆ ದುಃಖದ ಗುಡ್ಡವು ಆಕಸ್ಮಿಕವಾಗಿ ಕಡಕೊಂಡು ಬೀಳಲು, ಆಗ ಆಕೆಯ ಆ ಅಸಂಖ್ಯ ಜನ ಶತ್ರುಗಳಿಗೆ ಎಷ್ಟು ಆನಂದವಾಗಿರಬಹುದೆಂಬದನ್ನು ಬೇರೆಯವರು ಹೇಗೆ ಹೇಳಬೇಕು?

ತನ್ನನ್ನು ಬಹು ಜನರು ದ್ವೇಷಿಸುತ್ತಿರುವರೆಂಬದು ಮುರಲೆಗೆ ಅರಿಯದ ವಿಷಯವಾಗಿದ್ದಿಲ್ಲ; ಆದರೆ ಅವಳಾದರೂ ಅದಕ್ಕೇನು ಮಾಡುವಳು? ಆಕೆಯು ತಾನಾಗಿ ಆ ಅಷ್ಟು ಜನರ ದ್ವೇಷಕಟ್ಟಿಕೊಳ್ಳುವ ಪ್ರಸಂಗವನ್ನು ತಂದುಕೊಂಡಿದ್ದಿಲ್ಲ. ನಂದರಾಜನೇ ಅಂದಿನ ಆ ವಸಂತೋತ್ಸವದ ಕಾಲಕ್ಕೆ ಆಕೆಯ ಅತುಲ ಲಾವಣ್ಯಕ್ಕೆ ಮರುಳಾಗಿ, ಅವಳನ್ನು ತನ್ನ ಪಟ್ಟದ ಮಹಿಷಿಯನ್ನಾಗಿ ಮಾಡಿಕೊಂಡು, ಅವಳೊಡನೆ ಸದಾ ಸರ್ವದಾ ಕ್ರೀಡಿಸುತ್ತಿದ್ದನು. ಇಂಥ ಸ್ಥಿತಿಯಲ್ಲಿ ಮುರಲೆಯು ತನ್ನ ದ್ವೇಷಿಕರನ್ನೂ ಆದಿ

ಕೊಳ್ಳುವಂತಿರಲಿಲ್ಲ: ತನ್ನನ್ನು ಅಡಿಕೊಳ್ಳುವಂತಿರಲಿಲ್ಲ ತನಗೆ ಆ ಪರಿ ಅಪ್ರತಿಮ ರೂಪ-ಲಾವಣ್ಯಗಳನ್ನಿತ್ತು, ಮೋಹಿನಿಯನ್ನಾಗಿ ಮಾಡಿದ್ದ ಆ ವಿಧಾತನನ್ನೇ ಆಗಾಗ್ಗೆ ಮನದಣಿಯವಾಗಿ ಹೀಯಾಳಿಸುತ್ತಿದ್ದಳು.

ಕಂಕಣವು ಅಪಹೃತವಾಗಲು. ಮೇಲೆ ಹೇಳಿದಂತೆ ಮುರಲೆಯು ಆ ಇಡೀ ದಿವಸ ನಿರಾಹಾರಿಯಾಗಿ ಬಿದ್ದಲ್ಲಿಯೇ ಬಿದ್ದುಕೊಂಡು ಕೆಲವು ಕಾಲ ದೇವರನ್ನು ಪ್ರಾರ್ಥಿಸುತ್ತಲೂ ಕೆಲವು ಕಾಲ ತನ್ನ ಪೂರ್ವ ಚರಿತ್ರವನ್ನು ಸ್ಮರಿಸುತ್ತಲೂ, ಕೆಲವು ಕಾಲ ತನಗೆ ಅತುಲನೀಯ ರೂಪ-ಲಾವಣ್ಯ ಗಳನ್ನು ದಯಪಾಲಿಸಿದ ವಿಧಾತನನ್ನು ಹಿಯ್ಯಾಳಿಸುತ್ತಲೂ ರಾತ್ರಿಯ ಒಂಬತ್ತು ಗಂಟೆಯ ವರೆಗೂ ಕಾಲ ಹರಣ ಮಾಡಿದಳು. ಅನಂತರದಲ್ಲಿ ಆಕೆ ಬಿದ್ದುಕೊಂಡಲ್ಲಿಂದ ಎದ್ದು ಕುಳಿತು, ಎದುರಿಗಿನ ಕಿಟಕಿಯ ಬಾಗಿಲನ್ನು ತೆರೆದು, ಆದರಾಚೆಗಿನ ಅಂಧಕಾರದಿಂದ ತುಂಬಿದ್ದ ಉದ್ಯಾನವನವನ್ನು ನಿರೀಕ್ಷಿಸಲಾರಂಭಿಸಿದಳು. ಕೆಲವು ಕ್ಷಣಗಳ ವರೆಗೆ ಅವಳು ಆ ಕತ್ತಲು ಕವಿದ ಪ್ರದೇಶವನ್ನು ಎವೆಯಿಕ್ಕದೆ ನೋಡುತ್ತ, ಒಮ್ಮನಸ್ಸಿನಿಂದ ತನ್ನ ಸ್ಥಿತಿಯ ಬಗ್ಗೆ ಮನದಲ್ಲಿ ಆಲೋಚಿಸುತ್ತ ಕುಳಿತಿರಲು, ತನ್ನ ಮೇಲುಪ್ಪರಿಗೆಯ ಮೆಟ್ಟಲುಗಳನ್ನೇರಿ ಬರುತ್ತಿರುವವರ ಕಾಲ ಸಪ್ಪಳದಿಂದ ಅವಳ ಆ ಏಕಾಗ್ರತೆಗೆ ಭಂಗವುಂಟಾಯಿತು. ನಂದಮಹಾರಾಜನೇ ಪುನ: ತನ್ನಲ್ಲಿಗೆ ಬರುತ್ತಿರಬಹುದೆಂದು ಊಹಿಸಿ, ಒಳ್ಳೇ ಸಂತೋಷದಿಂದ ತನ್ನ ಮಹಾಲಿನ ಪ್ರವೇಶ ದ್ವಾರದ ಕಡೆಗೆ ಅವಳು ಎವೆಯಿಕ್ಕದಂತೆ ನೋಡತೊಡಗಿದಳು. ಬಹಳ ಹೊತ್ತಿನ ವರೆಗೆ ನಿರೀಕ್ಷಿಸಿದರೂ, ಬರತಕ್ಕ ವ್ಯಕ್ತಿಯು ಬರಲೇ ಇಲ್ಲ; ಆ ಪಾವಟಿಗೆಗಳ ಮೇಲೆ ಆಗುತ್ತಿದ್ದ ಪದ ಶಬ್ದವೂ ಲೋಪವಾಯಿತು ಆಗ ತನಗೆ ಸುಮ್ಮನೆ ಭಾಸವಾಗಿರಬಹುದೆಂದು ಬಗೆದು, ಅವಳು ಮತ್ತೆ ತಲೆತಗ್ಗಿಸಿ ಕುಳಿತುಕೊಳ್ಳಲು, ಆ ಅನಿವಾರವಾದ ಚಿಂತೆಯು ಅವಳನ್ನು ಮತ್ತೆ ಮತ್ತೆ ಆವರಿಸಹತ್ತಿತು.

ಕೆಲ ನಿಮಿಷಗಳ ತರುವಾಯ ಈ ಮೊದಲು ತೆರೆದಿದ್ದ ಆ ಉದ್ಯಾನದ ಕಡೆಯ ಕಿಟಕಿಯ ಬಾಗಿಲದ ಬಳಿಯಲ್ಲಿ ಗೌಪ್ಯವಾಗಿ ನಿಂತುಕೊಂಡಿರುವ ಒಂದು ವ್ಯಕ್ತಿ ಮೆಲ್ಲನೆ ಮುರಲೆಯ ಬೆನ್ನ ಮೇಲೆ ಕೈಯಿಟ್ಟಿತು!

ಕೂಡಲೆ ಮುರಲಾ ರಾಣಿಯು ಬೆಚ್ಚಿಬಿದ್ದು, ಆ ಆಗಂತುಕ ವ್ಯಕ್ತಿಯತ್ತ ಮೋರೆ ತಿರುವಿದಳು. ಅಲ್ಲಿ ಬೇರೆ ಯಾರೂ ಇರದೆ, ಒಬ್ಬ ಭೈರವಿ (ಗೊಸಾಯಿನಿ) ಯು ನಿಂತುಕೊಂಡಿದ್ದಳು.

ಭೈರವಿಯು ಆ ಅಕ್ರಾಳ-ವಿಕ್ರಾಳವಾದ ಸ್ವರೂಪವನ್ನು ಕಂಡು ಶೀರ ಬೆದರಿದ್ದ ಮುರಲೆಯು ಅವಳನ್ನುದ್ದೇಶಿಸಿ:—ನೀನು ಯಾರು? ಎಂದೆನ್ನಲು,

ಭೈರವಿಯು ಗಂಭೀರ ವಾಣಿಯಿಂದ:—ಮುರಲಾ ಮಹಾರಾಣಿಯೇ, ಹೆದರಬೇಡ. ನಾನು ಮಹಾ ಕಾಲಭೈರವನ ಉಪಾಸಕಳಾದ ಭೈರವಿಯಾಗಿರುತ್ತೇನೆ.

ಮುರಲೆ:—ನಾನು ಅಂಜುವದಿಲ್ಲ; ಆದರೆ ನೀನು ಈ ಅಂತಃಪುರಕ್ಕೆ ಈಗ ಹೇಗೆ ಬಂದೆ?

ಭೈರವಿ:—ನಾವು ಬೇಕಾದಾಗ ಬೇಕಾದಲ್ಲಿ ಸಹಜವಾಗಿ ಪ್ರವೇಶಿಸಬಲ್ಲೆವು.

ಮುರಲೆ:—ನೀನು ಇಲ್ಲಿಗೆ ಯಾವ ಕೆಲಸಕ್ಕೆಂದು ಬಂದಿರುತ್ತೀ?

ಭೈರವಿ:—ಮಹಾರಾಣಿಯೇ, ನೀನು ನನ್ನ ಮಾತಿನಲ್ಲಿ ನಂಬುಗೆ ಇಡವೆಯಾ?

ಮುರಲೆಯು ಕೆಲವು ಹೊತ್ತಿನ ವರೆಗೆ ತನ್ನ ಮನದಲ್ಲೇ ಆಲೋಚಿಸಿದಳು. ಅನಂತರ:—ಅವಿಶ್ವಾಸಪಡಲಿಕ್ಕೆ ಕಾರಣವೇನಮ್ಮಾ? ಭೈರವಿಯುಂಥ ಸಂನ್ಯಾಸಿನಿಯರೂ ಎಂದೂ ಯಾರಿಗೂ ಅನಿಷ್ಟ ಬಗೆಯುವದಿಲ್ಲ

ನಗೆ ಮೊಗದಿಂದ ಭೈರವಿ:— ಆ ಬಗೆಯ ದೃಢ ನಂಬಿಕೆ ಇಡುವುದೇ ವಿಹಿತವು; ಈಗ ಪ್ರತ್ಯುತ್ತರ ಕೂಡ ಕೊಡದೆ, ನೀನು ನನ್ನೊಡನೆ ಬಾ.

ಮುರಲೆ:—ಯಾಕೆ ಮತ್ತು ಎಲ್ಲಿಗೆ?

ಭೈರವಿ:—ನಿನ್ನ ಕಂಕಣವನ್ನು ಅಪಹೃತ ಮಾಡಿದಂಥ ಕಳ್ಳನನ್ನು ತೋರಿಸುತ್ತೇನೆ; ನೋಡ ಬಾ.

ಮುರಲೆ:—ಕಂಕಣ ಚೋರನೇ! ಆತನೆಲ್ಲಿರುವನು?

ಭೈರವಿ:—ಆ ವ್ಯಕ್ತಿ ಒಂದು ಗುಪ್ತ ಸ್ಥಳದಲ್ಲಿರುತ್ತದೆ.

ಮುರಲೆ:—ನಾನು ರಾಜಮಹಿಷಿಯು. ಈ ಮಧ್ಯ ರಾತ್ರಿಯಲ್ಲಿ. ಅಂತಃಪುರವನ್ನು ಬಿಟ್ಟು ಹೊರಗೆ ಹೋಗುವದು ಯೋಗ್ಯವಾಗಲಾರದು. ನಾನು ನನ್ನ ದಾಸಿಯನ್ನು ಕಳಿಸಿ, ಕೊತವಾಲನನ್ನು ಕರೆತರಿಸುತ್ತೇನೆ ಆತನು ನಿನ್ನೊಡನೆ ಕೆಲವು ಜನ ಶಿಪಾಯಿಗಳನ್ನು ಕಳಿಸುವನು. ನೀನು ಆ ಶಿಪಾಯಿ ಗಳೊಡನೆ ಹೋಗಿ, ಆ ಕಳ್ಳನನ್ನು ಬಂಧಿಸಿಕೊಂಡು ಬಾ.

ಭೈರವಿ:—ಹಾಗಾಗಲಾರದು ಹಾಗೆ ಶಿಪಾಯಿ-ಸರಂಜಾಮುಗಳೊಡನೆ ಹೋದರೆ, ಆ ವ್ಯಕಿಯು ಎಂದಿಗೂ ಸಿಗಲಿಕ್ಕಿಲ್ಲ ನಾನು ಹೇಳುತ್ತಿರಲಿಕ್ಕೆ ಮತ್ತು ನಾನು ನಿನ್ನೊಡನೆ ಇರುತ್ತಿರಲಿಕ್ಕೆ ಮಹಾರಾಣಿಯೇ, ನಿನಗೆ

ಯಾರ ಅಂಜಿಕೆಯಿರುವದು? ಕಂಕಣವನ್ನು ಕದ್ದಿರುವ ವ್ಯಕ್ತಿಯು ಪುರುಷನಾಗಿರುವದಿಲ್ಲ. ಅಂದ ಬಳಿಕಂತೂ ನೀನು ಈ ಪರಿ ಅಂಜುವದಕ್ಕೆ ಏನು ಕಾರಣ?

ಮುರಲೆ:—ಆ ವ್ಯಕ್ತಿ ಗಂಡಸಲ್ಲವೇ! ಆ ಹೆಂಗಸು ನನ್ನ ಅಂತಃಪುರವನ್ನು ಹೇಗೆ ಪ್ರವೇಶಿಸಿದಳು? ಹಾಗು ಆಕೆ ಈ ಕಳವನ್ನು ಇಷ್ಟು ಗೌಪ್ಯವಾಗಿ ಹೇಗೆ ಮಾಡಿದಳು?

ಭೈರವಿ:—ಆ ಸಂಗತಿ ನನಗೂ ಗೊತ್ತಿರುವದಿಲ್ಲ. ನಾನು ಮಹಾರಾಜರ ಹಿತ ಕಾಂಕ್ಷಿಣಿಯು; ಈ ಮಗಧ ರಾಜ್ಯದ ಹಿತ ಕಾಂಕ್ಷಿಣಿಯು. ಮಹಾರಾಜನಿಗುಂಟಾಗಿರುವ ಈ ಅರಿಷ್ಟ ಯಾತರಿಂದ ನಿವಾರಣವಾಗುವದೋ, ಈ ರಾಜ್ಯಕ್ಕುಂಟಾಗಿರುವ ಅರಿಷ್ಟವು ಹೇಗೆ ನಿವಾರಣವಾದೀತೋ ಹಾಗು ನಿನಗುಂಟಾಗಿರುವ ಈ ಕ್ಲೇಶ-ದುಃಖಗಳ ಪರಿಸಮಾಪ್ತಿಯು ಏತರಿಂದಾದೀತೋ ಆ ಉಪಾಯವನ್ನು ಮಾಡಬಂದಿರುತ್ತೇನೆ. ನಂದ ಮಹಾರಾಜರು ಈಗ ಅತ್ಯಂತ ಹೃದಯ ದುರ್ಬಲರಾಗಿರುವದರಿಂದ, ಮ್ಲೇಂಛ ರಾಜರು ನಮ್ಮ ಈ ಮಗಧ ರಾಜ್ಯವನ್ನು ನುಗ್ಗಿ-ನುರಿಪಡಿ ಮಾಡಿ, ಹಸ್ತಗತ ಮಾಡಿಕೊಳ್ಳುವ ಸಲುವಾಗಿ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕುಳಿತಿರುವರು. ಇನ್ನು ತುಸ ದಿವಸಗಳ ವರೆಗೆ ಮಹಾರಾಜನು ಇದೇ ಸ್ಥಿತಿಯಲ್ಲುಳಿದರೆ, ಮ್ಲೇಂಛ ಸೈನ್ಯಗಳು ನಮ್ಮ ಪಾಟಲಿಪುತ್ರವನ್ನು ನುಗ್ಗದಿರಲಾರವು. ಆದುದರಿಂದ ಮುರಲಾ ರಾಣಿಯೇ, ಈ ಅನಿಷ್ಟದ ಪ್ರಸಂಗದಿಂದ ಪಾರಾಗುವದಿದ್ದರೆ, ನೀನು ಕ್ಷಣ ಕೂಡ ತಡಮಾಡದೆ ನನ್ನೊಡನೆ ಹೊರಡು. ನನ್ನ ಸಂಗಡ ಬರುವ ಸಾಹಸವು ನಿನಗಾಗದಿದ್ದರೆ. ನೀನು ನಿನ್ನ ಭವಿತವ್ಯಕ್ಕೆ ಬಲಿಯಾಗಿ, ಕಣ್ಣೀರಿನ ಪ್ರವಾಹವನ್ನು ಹರಿಸುತ್ತ ನಿನ್ನ ಶೇಷಾಯುಷ್ಯವನ್ನು ಅಖಂಡವಾಗಿ ಕಳೆ.

ಈ ಭೈರವಿಯೊಡನೆ ಈಗ ಹೋಗುವದರಿಂದ ತನ್ನ ಪತಿಯ ಹಾಗು ತನ್ನ ರಾಜ್ಯದ ಮೇಲಿನ ಅರಿಷ್ಟವು ನಿವಾರವಾಗುತ್ತದೆಂದ ಮೇಲೆ ತಾನು ಈಗಲೇ ಈಕೆಯೊಡನೆ ಹೊರಡಬೇಕೆಂದು ಬಗೆದು, ಮುರಲಾ ರಾಣಿಯು ಆ ಭೈರವಿಯ ಜೊತೆಗೆ ತನ್ನ ಕೋಣೆಯ ಬಾಗಿಲದ ವರೆಗೆ ಕೂಡ ಬಂದಳು; ಆದರೆ ಆಕೆಯ ಮನಸ್ಸಿನಲ್ಲಿ ಮತ್ತೆ ಏನೋ ಸಂಶಯ ಬರಲು, ಅವಳು ಭೈರವಿಯನ್ನುದ್ದೇಶಿಸಿ:—

ಭೈರವೀ, ಇಂಥ ಈ ಗಭೀರ ರಾತ್ರಿಯಲ್ಲಿ ನನ್ನನ್ನು ಕಾವಲುಗಾರರು ಹೊರಗೆ ಹೋಗಗೊಟ್ಟಾರೇ?

ಭೈರವಿ:—ಹಾಗಾದರೆ ನೀನೆಂಥ ಮಹಾರಾಣಿಯವ್ವಾ! ನಿನ್ನಂಥ ಮಗಧೇಶ್ವರನ ಪಟ್ಟದರಸಿಯ ಅಪ್ಪಣೆಯನ್ನು ಆ ಕ್ಷುಲ್ಲಕ ಬಾಗಿಲು ಕಾಯುವವರು ಪಾಲಿಸುವದಿಲ್ಲವೇ? ರಾಣೀ, ಆ ವಿಷಯವಾಗಿ ನೀನು ಆಲೋಚಿಸಬೇಡ; ಆ ಬಗ್ಗೆ ನಾನು ಈ ಮೊದಲೇ ವ್ಯವಸ್ಥೆಯನ್ನು ಮಾಡಿರುತ್ತೇನೆ. ಹೂಂ, ಹೊರಡು ಬೇಗ.

ಆಗ ಮುರಲೆಯು ಮತ್ತೆ ಕೆಲವು ಹೆಜ್ಜೆಗಳ ವರೆಗೆ ಆ ಭೈರವಿಯನ್ನನುಸರಿಸಿ ಬಂದರೂ ಅವಳ ದುರ್ದೈವ ಅವಳನ್ನು ಮುಂದೆ ಹೋಗಗೊಡದ್ದರಿಂದ, ಅವಳು:—ಭೈರವೀ, ನನ್ನಂಥ ರಾಜ ಮಹಿಷಿಯು ಈ ಮಧ್ಯರಾತ್ರಿಯಲ್ಲಿ ಅಂತಃಪುರದಿಂದ ಹೊರ ಹೊರಡುವದು ಸರಿಯಲ್ಲ; ಆದ್ದರಿಂದ ಈಗ ನಾನು ನಿನ್ನೊಡನೆ ಬರಲಾರೆನು, ಎಂದಂದು ಹಿಂದಿರುಗಿದಳು.

ಭೈರವಿಗೆ ಇವಳ ಮಾತು ಕೇಳಿಸಿತೋ ಇಲ್ಲವೋ ಯಾರಿಗೆ ಗೊತ್ತು? ಅವಳು ಅಷ್ಟರಲ್ಲಿ ಬಹು ದೂರ ಹೋಗಿಬಿಟ್ಟಿದ್ದಳು!



ಮಹಾ ರಾಜಾಧಿರಾಜ ಮಗಧೇಶ್ವರನಾದ ಧನನಂದನು ಉತ್ತರ ಹಿಂದುಸ್ತಾನದೊಳಗಿನ ಏಕ ಛತ್ರೆ ಸಮ್ರಾಟನು. ಹೀಗಿದ್ದರೂ ಅಂಥವನಿಗೂ ಕೂಡ ಹಗೆಗಳಿಗೆ ಕೊರತೆಯಿರಲಿಲ್ಲ. ಮುರಲಾ ರಾಣಿಗೆ ರಜತಕುಮಾರಿ ಶತ್ರುವಾಗಿದ್ದಂತೆ, ಧನನಂದನಿಗೆ ಆತನ ಮಲ ತಮ್ಮನಾದ ಚಂದ್ರಗುಪ್ತನು ವೈರಿಯಾಗಿ ತೋರುತ್ತಿದ್ದನು. ಧನನಂದನ ತಂದೆಯಾದ ಮಹಾಪದ್ಮನಂದನಿಗೆ ಹಲವು ಮಂದಿ ರಾಣಿಯರಿದ್ದರು. ಅವರಲ್ಲಿ ಮುರಾ, ಎಂಬ ಹೆಸರಿನ ರಾಣಿ ಆತನ ಪ್ರೀತಿಪಾತ್ರಳಾಗಿದ್ದಳು. ಮುರೆಯು ಹೀನ ಕುಲೋತ್ಪನ್ನಳೆಂದು ಆ ಕಾಲಕ್ಕೆ ಪ್ರವಾದವಿದ್ದಿತು. ಆದರೂ ಆಕೆಯ ರೂಪ-ಲಾವಣ್ಯಗಳಿಗೆ ಮೋಹಿತನಾದ ಧನನಂದನ ತಂದೆಯು ಅವಳನ್ನು ಮದುವೆಯಾಗಿದ್ದನು. ಆ ಮುರೆಯ ಗರ್ಭದೊಳಗೆ ಜನಿಸಿದ ಪುತ್ರ ರತ್ನವೇ ಮಗಧ ಸಾಮ್ರಾಟ್ ಚಂದ್ರಗುಪ್ತನೆಂದು ಭರತ ಖಂಡದ ಇತಿಹಾಸದಲ್ಲಿ ವರ್ಣಿಸಲ್ಪಟ್ಟಿರುತ್ತಾನೆ. ಇರಲಿ.

ಮಹಾ ಪದ್ಮನ ತರುವಾಯ ಆತನ ಹಿರಿಯ ಮಗನಾದ ಧನನಂದನು ಪಟ್ಟವನ್ನೇರಿದನು. ತಂದೆಯ ಕಾಲದಿಂದ ಕಾರಭಾರವನ್ನು ನಡೆಸುತ್ತ ಬಂದಿದ್ದ ರಾಕ್ಷಸ ಮಂತ್ರಿಯು ಧನನಂದನ ಕಾಲಕ್ಕೂ ಮಗಧದ ಪ್ರಧಾನ ಸಚಿವನಾಗಿ, ಆ ರಾಜ್ಯದ ದರ್ಪ, ಐಶ್ವರ್ಯ, ವಿಸ್ತಾರಗಳನ್ನು ಚೆನ್ನಾಗಿ ಹೆಚ್ಚಿಸಿದನು. ಆತನ ಈ ಕಾರ್ಯಕುಶಲತೆಗಳ ಬಗ್ಗೆ ಧನನಂದನು

ಸಂತೋಷಪಟ್ಟು, ತನ್ನ ಅಮಾತ್ಯನ 'ರಾಕ್ಷಸ' ಎಂಬ ಕರ್ಣಕಠೋರವಾಗಿದ್ದ ಹೆಸರಿಗೆ ಬದಲು 'ಧೀರ ಬುದ್ಧಿ' ಎಂಬ ಹೆಸರನ್ನಿಟ್ಟು, ಆತನಿಗೆ ಅನೇಕ ಪ್ರಕಾರದ ಸನ್ಮಾನಗಳನ್ನು ಮಾಡಿ ಗೌರವಿಸಿದನು. ಬರ ಬರುತ್ತ ಮಗಧ ದೇಶದ ಪ್ರಜೆಗಳು ಮಗಧೇಶ್ವರನಿಗಿಂತ ಧೀರಬುದ್ಧಿಗೇ ಹೆಚ್ಚಾಗಿ ಅಂಜಿ-ಬಾಗಿ ನಡೆಯಲುಪಕ್ರಮಿಸಿದರು.

ಮಹಾಪದ್ಮ ನಂದನಿಗೆ ರಾಕ್ಷಸನಿಗಿಂತ ಮೊದಲು ಶಕಟಾರನೆಂಬೊಬ್ಬ ಪ್ರಾಮಾಣಿಕ ಮುಖ್ಯಾಮಾತ್ಯನಿದ್ದನು; ಆದರೆ ಧನ ನಂದರಾಜನ ಪ್ರಥಮ ಅಮಲಿನಲ್ಲಿ ಮಹಾ ತಂತ್ರಗಾರನಾದ ಅಮಾತ್ಯರಾಕ್ಷಸನು ಶಕಟಾರನಲ್ಲಿ ರಾಜಕ್ಷೋಭವುಂಟಾಗುವಂತೆ ಮಾಡಿದ್ದರಿಂದ, ಶಕಟಾರನು ಕೆಲವು ದಿನಗಳಲ್ಲಿಯೇ ತನ್ನ ಕೆಲಸಕ್ಕೆ ರಾಜೀನಾಮೆ ಕೊಡುವ ಪ್ರಸಂಗವೊದಗಿತು. ಶಕಟಾರನು ಕೆಲಸದಿಂದ ನಿವೃತ್ತನಾದ ಬಳಿಕ, ರಾಜದರ್ಬಾರದೊಳಗೆ ತನಗೆ ಪ್ರತಿಸ್ಪರ್ಧಿಗಳಾರೂ ಉಳಿಯದಾಗಲು, ಅಮಾತ್ಯ ರಾಕ್ಷಸನು ಸ್ವೇಚ್ಛೆಯಿಂದ ವರ್ತಿಸ ತೊಡಗಿದನು. ಆದರೂ ಆತನು ರಾಜನಿಗೆ ಹಾಗು ರಾಜ್ಯಕ್ಕೆ ಅಹಿತವಾಗುವ ಸಂದರ್ಭಗಳಲ್ಲಿ ಸ್ವೇಚ್ಛಾಚಾರಿಯಾಗುತ್ತಿರಲಿಲ್ಲ ಕೇವಲ ತನ್ನ ಹಗೆಯಾದ ಶಕಟಾರನ ಪಾರುಪತ್ಯ ಮಾಡುವ ವಿಷಯದಲ್ಲಿ ಮಾತ್ರ ಆತನು ಮನಸೋಕ್ತ ಸ್ವೇಚ್ಛೆಯಿಂದ ನಡೆಯುತ್ತಿದ್ದನು.

ಇಂದಿಲ್ಲ ನಾಳೆ ಚಂದ್ರಗುಪ್ತನಿಂದಲೂ ಆತನ ಜನನಿಯಿಂದಲೂ ನಿನಗೆ ತೊಂದರೆಯುಂಟಾದೀತಾದ್ದರಿಂದ, ನೀನು ಈಗಿನಿಂದಲೇ ಅವರ ಬಗ್ಗೆ ಸಾವಧನಾಗಿರಬೇಕೆಂದು ಹೇಳಿದ ರಾಕ್ಷಸ ಮಂತ್ರಿಯ ಆಲೋಚನೆಯ ಮೇರೆಗೆ, ಧನ ನಂದನು ತನ್ನ ತಂದೆ ತೀರಿದ ಕೆಲವು ದಿವಸಗಳಲ್ಲೇ ಮುರಾರಾಣಿಯನ್ನೂ ಚಂದ್ರಗುಪ್ತನನ್ನೂ ಪೀಡಿಸತೊಡಗಿದನು. ಕ್ರಮೇಣ ಆತನಿಂದ ಚಂದ್ರಗುಪ್ತನಿಗೆ ಅವಮಾನ-ಅವಹೇಲನೆಗಳು ಹೆಚ್ಚಾಗಲಾರಂಭಿಸಿದವು.

ಒಂದು ದಿನ ಸುಪ್ರಭಾತದಲ್ಲಿ ಧನನಂದನ ಮಹಾಲಿನ ಸುತ್ತುಮುತ್ತಲಿನ ಪ್ರಾಕಾರದಲ್ಲಿ ಪಟ್ಟಣದ ಮುಖ್ಯ ಮುಖ್ಯ ಪ್ರಜೆಗಳು ಕಲೆತಿದ್ದರು. ಆ ಕಾಲಕ್ಕೆ ಪ್ರತಿ ನಿತ್ಯ ಪ್ರಭಾತ ಕಾಲದಲ್ಲಿ ರಾಜದರ್ಶನ ತಕ್ಕೊಳ್ಳುವುದು ಶುಭಕರವೆಂದು ಮಗಧ ದೇಶದ ಪ್ರಜೆಗಳಲ್ಲಿ ಪ್ರಘಾತವಿದ್ದಿತು ತದನುಸಾರ ಆ ಜನರು ಅಲ್ಲಿ ನೆರೆದು, ಮಹಾರಾಜನು ಹೊರಗೆ ಬರುವ ದಾರಿ ನೋಡಹತ್ತಿದ್ದರು. ಅಷ್ಟರಲ್ಲಿ ಪೂರ್ವ ದಿಕ್ಕಿನಲ್ಲಿ ಹೊಂಬಣ್ಣದ ಸೂರ್ಯನು ಉದಯನಾಗಲು; ಈ ಮೊದಲೇ ಮಹಾಲಿನ ಕಿಟಕಿಯಲ್ಲಿ ಮುಖವನ್ನು

ಹಾಕಿ ಸೂರ್ಯನ ಆಗಮನವನ್ನು ನಿರೀಕ್ಷಿಸುತ್ತ ನಿಂತಿದ್ದ ಮಹಾರಾಜನು ಮೇಲುಪ್ಪರಿಗೆಯ ಮೇಲಿನ ಎಲ್ಲ ಬಾಗಿಲುಗಳನ್ನು ಒಮ್ಮೆಲೆ ತೆರೆಯಿಸಿ, ಸೂರ್ಯನನ್ನು ಸ್ತುತಿಸಿ, ನಮಸ್ಕರಿಸಿ, ಇನ್ನು ತನ್ನ ಪ್ರಜೆಗಳಿಗೆ ದರುಶನ ಕೊಡತಕ್ಕವನು; ಅಷ್ಟರಲ್ಲಿ ಪಟಾಂಗಣದೊಳಗೆ ಕುದುರೆಯನ್ನು ಹತ್ತಿದ್ದ ಒಂದು ತೇಜಃಪುಂಜ ವ್ಯಕ್ತಿಯು ಬರಲು, ಎಲ್ಲ ಪ್ರಜೆಗಳೂ ಆ ವ್ಯಕ್ತಿಗೇ ಮೊದಲು ವಂದಿಸಿ, "ಚಂದ್ರಗುಪ್ತ ಮಹಾರಾಜಕೀ ಜಯ! ಮುರಾಪುತ್ರಕೀ ಜಯ!" ಎಂಬ ನಾಮಘೋಷದಿಂದ ಆ ವ್ಯಕ್ತಿಯನ್ನು ಸ್ವಾಗತವ ಮಾಡಿ, ತದನಂತರ ಮಹಾರಾಜಾ ಧನನಂದನನ್ನು ನಮಿಸುತ್ತ:—"ನಂದ ಮಹಾ ರಾಜಕೀ ಜಯ! ಮಗಧೇಶ್ವರಕೀ ಜಯ!" ಎಂದು ಗರ್ಜಿಸಿದರು.

ಈ ಮೇರೆಗೆ ಇಂಥ ಸುಪ್ರಭಾತ ಕಾಲದಲ್ಲಿ ಚಂದ್ರಗುಪ್ತನು ನಂದ ರಾಜನ ಪ್ರಾಂಗಣಕ್ಕೆ ಎಂದೂ ಬಂದಿರಲಿಲ್ಲ. ದಿನಾಲು ಆತನು ನಸಕಿನಲ್ಲಿ ಎದ್ದು, ಪ್ರಾತರ್ವಿಧಿಗಳನ್ನು ತೀರಿಸಿ, ತನ್ನ ಕುದುರೆಯನ್ನು ಹತ್ತಿಕೊಂಡು ಸೂರ್ಯೋದಯವಾಗುವಷ್ಟರಲ್ಲಿ ನಗರದ ಹೊರಗಿನ ಬೈಲು ಪ್ರದೇಶಗಳಲ್ಲಿ ವಿಹರಿಸುವದಕ್ಕಾಗಿ ಹೋಗುತ್ತಿದ್ದನು; ಆದರೆ ಕರ್ಮ-ಧರ್ಮ ಸಂಯೋ ಗದಿಂದ ಇಂದು ಚಂದ್ರಗುಪ್ತನಿಗೆ ಎದ್ದೇಳಲಿಕ್ಕೆ ತುಸ ತಡವಾಗಿತ್ತು ಅದ ರಿಂದಲೇ ಆತನು ತನ್ನ ಕುದುರೆಯನ್ನುಏರಿ ಹೋಗುವಷ್ಟರೊಳಗೆ ಪ್ರಜೆಗಳು ಗುಂಪು-ಗುಂಪಾಗಿ ನಂದರಾಜನ ಪ್ರಾಙ್ಗಣದ ಕಡೆಗೆ ಸಾಗುತ್ತಿರುವದು ಆತನ ದೃಷ್ಟಿಗೆ ಬಿದ್ದಿತು. ಇಷ್ಟು ಮುಂದಿ ಪ್ರಜೆಗಳು ಇಲ್ಲಿಗೆ ಅದೇಕೆ ತೆರಳು ತ್ತಿರಬಹುದೆಂಬುದನ್ನು ತಿಳಿಯುವದಕ್ಕಾಗಿ ಆತನೂ ಇಲ್ಲಿಗೆ ಬಂದಿದ್ದನು. ಆಕಸ್ಮಿಕವಾಗಿ ಬಂದ ಈ ಚಂದ್ರಗುಪ್ತನನ್ನೇ ಮೊದಲು ಗೌರವಿಸುವದು ತಕ್ಕ ದ್ದೆಂದು ತಿಳಿದು, ಕೂಡಿದ ಜನರೆಲ್ಲರೂ ಆತನನ್ನೇ ಅಭಿವಂದಿಸಿದರು.

ಈ ಪ್ರಕಾರ ಆ ಪ್ರಜೆಗಳಿಂದ ಸಹಜವಾಗಿ ಮಾಡಲ್ಪಟ್ಟ ಆ ಜಯ ಘೋಷವೇ ಚಂದ್ರಗುಪ್ತನನ್ನು ಘೋರ ಸಂಕಟಕ್ಕೆ ಗುರಿ ಮಾಡಿತು! ತನ್ನ ಪ್ರಜೆಗಳು ತನ್ನನ್ನುಳಿದು ತನ್ನ ಈ ಮಲ ತಮ್ಮನನ್ನೇ ಹೆಚ್ಚು ಉತ್ಸುಕತೆ ಯಿಂದ ಗೌರವಿಸಿದರೆಂದ ಬಳಿಕ, ಇವರು ಈತನಲ್ಲಿಯೇ ವಿಶೇಷ ಅನುರಾಗ ವುಳ್ಳವರಾಗಿರುತ್ತಾರೆ. ನನ್ನ ಎದುರಿಗೆ ಈ ಹೀನ ಕುಲೋತ್ಪನ್ನನ ಗೌರವ ವಾಗುವದೆಂದರೆ, ಬೇಕಂತ ನನ್ನ ಅಪಮಾನವಾಗಗೊಟ್ಟಂತೆಯೇ ಸರಿ. ಆದುದರಿಂದ ನಾನು ಇನ್ನು ಈ ಚಂದ್ರಗುಪ್ತನನ್ನು ಹೀಗೆ ಕಂಡ ಕಂಡಲ್ಲಿ ಬರ-ಹೋಗಗೊಡಕೂಡದು. ಈತನನ್ನು ಈಗಲೇ ರಾಜಕೈದಿಗಳನ್ನಿಡ ತಕ್ಕಂಥ 'ನಲಾಂದಾ' ದುರ್ಗದಲ್ಲಿರಿಸಬೇಕು, ಎಂದು ಕುತ್ಸಿತ ಹೃದಯದ

ಧನನಂದನು ಆಲೋಚಿಸಿ, ಮುಖ್ಯ ಮಂತ್ರಿಯಾದ ರಾಕ್ಷಸನನ್ನು ಕರೆಕಳಿಸಿ. ದನು; ಹಾಗು ಆತನಿಗೆ ಇಂದು ನಡೆದ ವಿಷಯವನ್ನೆಲ್ಲ ತಿಳಿಸಿ, ಚಂದ್ರ ಗುಪ್ತನನ್ನೂ ಆತನ ತಾಯಿಯನ್ನೂ ಪ್ರಜೆಗಳಿಗೆ ತಿಳಿಯದಂತೆ ನಲಾಂದಾ ದುರ್ಗಕ್ಕೆ ಅಟ್ಟಿ ಬಿಡುವಂತೆ ಹೇಳಿದನು.

ಮಂತ್ರಣಾಗಾರದಲ್ಲಿ ಕುಳಿತು, ಧನ ನಂದ ಹಾಗು ರಾಕ್ಷಸ ಮಂತ್ರಿ ಇವರಬ್ಬರೂ ಚಂದ್ರಗುಪ್ತನ ವಿಷಯವಾಗಿ ಮೇಲೆ ವಿವರಿಸಿದ ಸಂಭಾಷಣ ವನ್ನು ನಡೆಸಿರಲು, ತನ್ನ ತೇಜದಿಂದ ಆ ರತ್ನ ಖಚಿತ ಮಂತ್ರಣಾಗಾರವನ್ನೇ ಬೆಳಗುತ್ತಿರುವ ಒಂದು ದೀರ್ಘಕಾಯದ ವ್ಯಕ್ತಿಯು ತಟ್ಟನೆ ಅಲ್ಲಿಗೆ ಬಂದು ನಿಂತಿತು. ಅದು ಬಾಗಿಲಲ್ಲಿ ಕಾಲಿಡುವುದಕ್ಕೂ "ಚಂದ್ರಗುಪ್ತನನ್ನು ಹೀಗೆ ಸ್ವತಂತ್ರತೆಯಿಂದ ತಿರುಗಗೊಡುವದು ಸರಿಯಲ್ಲ" ಎಂದು ರಾಜನ ಬಾಯಿಂದ ವಾಕ್ಯ ಹೊರಡಲಿಕ್ಕೂ ಗಂಟೇ ಬಿದ್ದಿತು ಆ ವಾಕ್ಯವು ಆ ವ್ಯಕ್ತಿ ಯ-ಚಂದ್ರಗುಪ್ತನ-ಕರ್ಣರಂಧ್ರವನ್ನು ಪ್ರವೇಶಿಸದೆ ಇರಲಿಲ್ಲ. ಚಂದ್ರ ಗುಪ್ತನು ಅಲ್ಲಿಗೆ ಹೀಗೆ ಅಕಸ್ಮಿಕವಾಗಿ ಬಂದುದರಿಂದ, ಅವರೀರ್ವರೂ ಬೆಪ್ಪರಂತೆ ಸುಮ್ಮನೆ ಕುಳಿತುಬಿಟ್ಟರು!

ಆಗ ಚಂದ್ರಗುಪ್ತನು ಧನನಂದನನ್ನು ಕುರಿತು:— ಅಣ್ಣಾ, ನಾನು ಮಾಡಿದ ಅಪರಾಧವೇನು? ರಾಜಕೈದಿಯನ್ನಾಗಿ ಮಾಡಿ, ಆ ನಲಾಂದಾ ದುರ್ಗದಲ್ಲಿ ಕೊಳೆಯ ಹಚ್ಚುವದಕ್ಕಿಂತ, ನನ್ನನ್ನು ಈಗಲೇ ಈ ಮಗಧದೇಶ ದಿಂದ ಹೊರ ಹೊರಡಿಸಿ ಬಿಡು. ನಾನು ಜೀವಿಸಿರುವ ವರೆಗೂ ಈ ನಿನ್ನ ರಾಜ್ಯದಲ್ಲಿ ತಿರುಗಿ ಕಾಲು ಕೂಡ ಇಡಲಿಕ್ಕಿಲ್ಲ; ಹಾಗು ಮಹಾ ಪದ್ಮನಂದನ ತರುವಾಯ ಹಿರಿಯ ಮಗನಾದ ನಿನಗೆ ಹಕ್ಕಿನಿಂದ ಪ್ರಾಪ್ತವಾಗಿರುವ ನಿನ್ನ ಈ ಸಿಂಹಾಸನದ ವಿಷಯವಾಗಿ ಎಂದೂ ಅಹಿತವನ್ನು ಬಗೆಯಲಿಕ್ಕಿಲ್ಲ. ಧನ ನಂದನೇ, ನೀನು ನನಗೆ ಬೇಕಾದ ಕಠಿಣ ಶಿಕ್ಷೆಯನ್ನು ಕೊಟ್ಟರೂ ಚಿಂತೆ ಯಿಲ್ಲ; ಆದರೆ ನನ್ನ ಜನಕ ತಾಯಿಯೂ, ನಿನ್ನ ಮಲ ತಾಯಿಯೂ, ನಮ್ಮಿಗಳ ತಂದೆಯಾದ ಮಹಾ ಪದ್ಮನಂದನ ನಚ್ಚಿನ ಮಡದಿಯೂ ಆದ ಮುರಾ ರಾಣಿಗೆ ಮಾತ್ರ ಒಂದಿಷ್ಟೂ ಅಪಮಾನ— ಅವಹೇಲನೆಗಳು ಆಗ ಕೂಡದು. ಒಂದು ವೇಳೆ ನಿನ್ನಿಂದ ಆಕೆಯು ಒಂದು ಕೂದಲಿಗೆ ಕೂಡ ಧಕ್ಕೆ ಹತ್ತಿತೆಂಬದು ನನಗೆ ತಿಳಿದು ಬಂದರೆ, ನಾನು ನಿನ್ನ ಮತ್ತು ನಿನ್ನ ಈ ವಿಶಾಲವಾದ ಮಗಧ ರಾಜ್ಯದ ಸರ್ವ ನಾಶ ಮಾಡದೆ ಬಿಡೆನು, ಎಂದವನೆ ಆ ಪಾಟಲಿಪುತ್ರ ರಾಜಧಾನಿ ಬಿಟ್ಟು ಎತ್ತೋ ಹೊರಟು ಹೋದನು.

—●○×○●—

# ಚಂದ್ರಗುಪ್ತನನ್ನು ರಾಕ್ಷಸನಿಗೊಪ್ಪಿಸೋಣ.

................

ಚಂದ್ರಗುಪ್ತನು ಮಗಧೇಶ್ವರನ ಗುಪ್ತ ಮಂತ್ರಣಾಗಾರದಿಂದ ಹೊರಟು ಹೋಗಿ ಎಷ್ಟೋ ಹೊತ್ತು ಆದರೂ, ಅಲ್ಲಿಂದ ಹೊರಡುವಾಗ ಆತನು ಬಹು ತ್ವೇಷದಿಂದ ಆಡಿದ ನುಡಿಗಳು ಮಾತ್ರ ಆ ರತ್ನಖಚಿತವಾದ ಆಲೋಚನಾ ಮಂದಿರದ ಪ್ರತಿಯೊಂದು ಗೋಡೆಗೂ ತಾಕಿ-ತಾಕಿ, ಪ್ರತಿಧ್ವನಿಗೆಯ್ಯುತ್ತಿರುವುದು ಇನ್ನೂ ಸಂಪೂರ್ಣ ಕಟ್ಟಾಗಿದ್ದಿಲ್ಲ. ಆ ಪ್ರತಿಧ್ವನಿಯ ನುಡಿಗಳು ಮತ್ತೆ ಮತ್ತೆ ಕರ್ಣಗಳನ್ನು ಪ್ರವೇಶಿಸುವದರಿಂದ ಹೌಹಾರಿ ಹೋಗಿದ್ದ ನಂದ ಮಹಾರಾಜನಾಗಲಿ, ಧೀರಬುದ್ಧಿಯಾಗಲಿ ಕೆಲವು ಹೊತ್ತಿನ ವರೆಗೆ ಪಿಟ್ಟೆಂದು ಕೂಡ ಉಸುರಲಿಲ್ಲ! ಆ ಪ್ರತಿಧ್ವನಿಯು ಅಡಗುತ್ತ ಬರಲು, ನಂದನು ಧೀರಬುದ್ಧಿಯನ್ನು ಕುರಿತು:—ಅಮಾತ್ಯವರ್ಯ, ನನ್ನ ಸಂಶಯಕ್ಕಿನ್ನು ಯಾವ ಅಪವಾದವೂ ಉಳಿಯಲಿಲ್ಲ. ಇದುವರೆಗೆ ಈತನು-ಆ ನೀಚವಂಶ ಕುಲೋದ್ಭೂತ ಮುರಾ ರಾಣಿಯ ಮಗನು-ಚಿಕ್ಕವನಿದ್ದನು. ನಾನು ಇದು ವರೆಗೂ ಈತನ ತೇಜ-ದರ್ಪಗಳಿಗೆ ಅಂಜುತ್ತಿದ್ದಿಲ್ಲ. ಬಾಲ್ಯದಿಂದಲೂ ಇವ ನಲ್ಲಿಯ ಆ ಗುಣಗಳು ನನ್ನನ್ನು ಒತ್ತಿ-ಒತ್ತಿ ಹಣ್ಣು ಮಾಡುತಲಿದ್ದವು; ಆದರೆ ನಾನು ಮೂರ್ಖ, ತಿಳಿಗೇಡಿ. ಅಂತೇ ಇಂಥ ಪ್ರಬಲ ವೈರಿಯನ್ನು ಸಾಮಾನ್ಯನೆಂದು ತಿಳಿದು, ಇದುವರೆಗೂ ಉಪೇಕ್ಷಿಸಿದ್ದೆ. ನಾನು ವಿಷಹಾಕಿ ಸಿಯಾಗಲಿ, ಗುಪ್ತ ಕಟುಕರಿಂದಾಗಲಿ ಈತನ ರುಂಡವನ್ನು ದಿಂಡದಿಂದ ಏಕೆ ವಿಂಗಡಿಸಲಿಲ್ಲೆಂಬ ಬಗ್ಗೆ ನನಗೆ ಈಗ ಪಶ್ಚಾತ್ತಾಪವಾಗುತಲಿದೆ. ಇರಲಿ.

ಮಂತ್ರಿವರ್ಯನೇ, ನೀನು ಇನ್ನಾದರೂ ನನ್ನ ಅಪ್ಪಣೆಯಂತೆ ನಡೆದು ಇವನನ್ನು ಬೆನ್ನಟ್ಟುವ ಸಲುವಾಗಿ ಒಂದು ನೂರು ಮಂದಿ ಮಾಗಧೀ ಸೈನಿಕರನ್ನು ಗುಪ್ತವಾಗಿ ನಿಯೋಜಿಸು. ಸೇನಾಪತಿಯಾದ ವೀರ ಮಂದ್ರನನ್ನೇ ಈ ಸೂಕ್ಷ್ಮ ಕೆಲಸಕ್ಕೆ ಕಳಿಸಿಕೊಡು; ಆತನು ಕೌಶಲ್ಯದಿಂದ ಈ ಕಾರ್ಯ ವನ್ನು ನೆರವೇರಿಸಬಹುದು. ಚಂದ್ರಗುಪ್ತನು ಇನ್ನೂ ನಮ್ಮ ರಾಜಧಾನಿ ಯ ಸೀಮಾಂತರವನ್ನು ಕೂಡ ದಾಟಿರಲಿಕ್ಕಿಲ್ಲ. ನಾನು ಈ ಭೂಮಂಡಲ ದೊಳಗಿಂದ ಚಂದ್ರಗುಪ್ತನು ನಾಮ ಶೇಷವಾಗಬೇಕೆಂದು ಬಯಸುತ್ತೇನೆ! ಆತನ ಹೆಸರಿನ ನೆನಪು ಕೂಡ ನನ್ನ ಹೃದಯದಲ್ಲುದ್ಭವಿಸಬಾರದೆಂದು ನಾನು ಇಚ್ಛಿಸುತ್ತೇನೆ! ಯಾವನು ಆ ನೀಚ ಚಂದ್ರಗುಪ್ತನ ರುಂಡವನ್ನು ತಂದು ನನಗೆ ತೋರಿಸುವನೋ, ಆತನಿಗೆ ನಾನು ಒಂದು ಲಕ್ಷ ಸ್ವರ್ಣ

ಮುದ್ರಿಗಳನ್ನು ಪಾರಿತೋಷಕವೆಂದು ಕೊಡಲಿಕ್ಕೆ ಸನ್ನದ್ಧನಾಗಿರುತ್ತೇನೆ. ಮಂತ್ರಿಯೇ ನಿನಗೆ ಇನ್ನೊಂದು ಸಂಗತಿಯನ್ನು ತಿಳಿಸುತ್ತೇನೆ, ಕೇಳಿಕೊ. ಆ ನೀಚ ಕುಲೋದ್ಭೂತಳಾದ ಮುರಾ ರಾಣಿಯನ್ನು ಈಗಲೇ ಆಕೆಯ ಆ ಅಂತಃಪುರದೊಳಗಿಂದ ಹೊರ ಹೊರಡಿಸು; ಮತ್ತು ನಲಾಂದಾ ಕೋಟೆಯೊಳಗಿನ ಜನ ಶೂನ್ಯವೂ ಅಂಧಕಾರಮಯವೂ ಆದ ಕೊಠಡಿಯಲ್ಲಿರಿಸು. ಆಕೆಯ ಆ ಅಸತ್ಕುಲ ಕಲೇವರವು ಪ್ರಾಣ ಹೋಗುವ ವರೆಗೂ ಅಲ್ಲಿಯೇ ಬಿದ್ದಿರಬೇಕು. ತಿಳಿಯಿತೇ, ಹೋಗು ಈಗಿಂದೀಗಲೇ ಮೇಲೆ ಹೇಳಿದ ಎರಡೂ ಕೆಲಸಗಳನ್ನು ಒಳ್ಳೇ ದಕ್ಷತೆಯಿಂದ ನೆರವೇರಿಸಿ, ಬಳಿಕ ನನ್ನ ಬಳಿಗೆ ಬಂದು ಸುದ್ದೀ ಹೇಳು, ಎಂದಂದವನೇ ಮಗಧೇಶ್ವರನು ಶೀಘ್ರಗತಿಯಿಂದ ಆ ಮಂತ್ರಣಾಗಾರವನ್ನು ತ್ಯಜಿಸಿದನು.

ಈ ಪ್ರಕಾರದ ಕಠೋರ ರಾಜಾದೇಶವನ್ನು ಹೊಂದಿದ ಸಚಿವ ಶ್ರೇಷ್ಠ ಧೀರಬುದ್ಧಿಯು ಚಿಂತಾಕಾತರನಾಗಿ, ಮಂತ್ರಣಾಗಾರದಿಂದ ನಡೆದನು, ಹಾಗು ನಂದ ಭೂಪತಿಯ ಆದೇಶದಂತೆ ವೀರ ಮಂದ್ರನ ಅಧ್ಯಕ್ಷತೆಯಲ್ಲಿ ಒಂದು ನೂರು ಮಂದಿ ಸಾಹಸಿಗರಾದ ಚತುರ ಸೈನಿಕರನ್ನು ಚಂದ್ರಗುಪ್ತನ್ನನುಸರಿಸಿ ಹೋಗ ಹೇಳಿ, ಆತನ ಛಿನ್ನ ಮುಂಡವನ್ನು ತರುವದಕ್ಕಾಗಿ ಕಳಿಸಿದನಲ್ಲದೆ, ಪಾಪ! ಅನಾಥಳಾದ ಮುರಾ ರಾಣಿಯನ್ನು ಆ ಮಟಮಟ ಮಧ್ಯಾಹ್ನ ಸಮಯದಲ್ಲಿ ಪಾಟಲಿಪುತ್ರದೊಳಗಿನ ಅವಳ ಅಂತ:ಪುರದಿಂದ ನಲಾಂದಾ ದುರ್ಗದ ಅಂಧಕಾರಪೂರ್ಣ ಕೊಠಡಿಗೆ ಕಳಿಸಿ, ಕೇವಲ ರಾಕ್ಷಸರಿಗೇ ತಕ್ಕವಾದ ತನ್ನ ಈ ನೀಚ ಕೃತಿಗಳಿಂದ, ತನ್ನ 'ರಾಕ್ಷಸ' ಎಂಬ ಅಂಕಿತ ನಾಮವನ್ನು ಸಾರ್ಥಕವಾಗಿ ಮಾಡಿಕೊಂಡನು.

ತನ್ನ ನುಡಿಗಳಿಂದ ಮಗಧೇಶ್ವರನು ಸಚಿವಶ್ರೇಷ್ಠನೊಡನೆ ಗೂಢವಾದ ಚಿಂತೆಯಲ್ಲಿ ಮಗ್ನನಾಗಿದ್ದ ಸಮಯವನ್ನು ಸಾಧಿಸಿ, ಚಂದ್ರಗುಪ್ತನು ಆ ಮಂತ್ರಣಾಗಾರದಿಂದ ಹೊರಬಿದ್ದನು; ಹಾಗು ಬೇರೆ ಎಲ್ಲಿಗೂ ತೆರಳದೆ, ತನ್ನ ವಚನ ಪರಿಪಾಲಿಸುವದಕ್ಕಾಗಿ ನೆಟ್ಟಗೆ ಅರಣ್ಯದ ಮಾರ್ಗವನ್ನು ಹಿಡಿದನು ಆತನನ್ನು ಕೊಲ್ಲುವ ಆದೇಶವು ಇನ್ನೂ ಪುರ ರಕ್ಷಕರಿಗೆ ತಲುಪದ್ದರಿಂದ, ಆ ನಡು ಹಗಲಲ್ಲಿ ಒಬ್ಬೊಂಟಿಗನಾಗಿ ನಡೆದಿದ್ದ ಆತನಿಗೆ ಪಟ್ಟಣದೊಳಗಿನ ಯಾವ ಉಕ್ಕಡದವರೂ ಅಡ್ಡಿಯನ್ನುಂಟುಮಾಡಲಿಲ್ಲ. ಎಲ್ಲ ಪುರ ರಕ್ಷಕರೂ ಯುವರಾಜನಾದ ಚಂದ್ರಗುಪ್ತನಿಗೆ ಜೋಗ್ಗಿ — ಜೋಗ್ಗಿ ನಮಸ್ಕಾರ ಮಾಡಿ, ಆತನನ್ನು ಅಭಿವಂದಿಸಿದರು. ಚಂದ್ರಗುಪ್ತನು ಶೀಘ್ರಗತಿಯಿಂದ ಪಾಟಲಿಪುತ್ರ ನಗರದ ಸೀಮೆಯನ್ನು ದಾಟಿ, ಜಾಹ್ನವೀ ತಟಪ್ರ

ಕದ ಎರಡೂ ಪಾರ್ಶ್ವಗಳಲ್ಲಿದ್ದ ಶಾಲ ವನಕ್ಕೆ ಹೋದನು. ಆ ವನದೊಳಗೆ ಆಕಾಶವನ್ನು ಹತ್ತಲಿಕ್ಕೆ ನಿಚ್ಚಣಿಕೆಗಳಂತೆ ಇದ್ದ ಬಹಳ ಎತ್ತರವಾದ ವೃಕ್ಷಗಳು ಬೆಳೆದಿದ್ದವು. ವಿರಹ ತಾಪದಿಂದ ಬಳಲಿದ್ದ ನವ ದಂಪತಿಗಳು ಎಷ್ಟೋ ದಿನಗಳ ತರುವಾಯ ಪರಸ್ಪರರಿಗೆ ಭೆಟ್ಟಿಯಾಗಲು, ಅವರು ಒಬ್ಬರನ್ನೊಬ್ಬರು ಬಿಗಿದಪ್ಪಿಕೊಳ್ಳುವಂತೆ, ಆ ಶಾಲ ವನದೊಳಗಿನ ಆ ವಿಶಾಲ ವೃಕ್ಷಗಳ ಕೊಂಬೆಗಳು ಒಂದನ್ನೊಂದು ಅವಚಿಕೊಂಡಿದ್ದವು. ಅದ ರಿಂದ ಬೆಳಗು-ಸಾಯಂಕಾಲಗಳಲ್ಲಂತೂ ಇರಲಿ, ನಡು ಹಗಲಲ್ಲಿ ಕೂಡ ಆ ಶಾಲ ವನದೊಳಗೆ ಸೂರ್ಯ ರಶ್ಮಿಯು ಪ್ರವೇಶವಾಗುತ್ತಿರಲಿಲ್ಲ! ಅಂದಬಳಿಕ ರಾತ್ರಿಯು ವೇಳೆಯಲ್ಲಿ ಅಲ್ಲಿ ಎಷ್ಟು ದಟ್ಟ ಹಾಗು ಭೀಕರವಾದ ಕತ್ತಲೆಯು ಬೀಳುತ್ತಿರಬಹುದೆಂಬದನ್ನು ಆದಾರು ಹೇಳಬೇಕು?

ಪಾಟಲಿಪುತ್ರದಿಂದ ಹೊರಟ ಚಂದ್ರಗುಪ್ತನು ಆ ವಿಸ್ತಾರವಾದ ಶಾಲ ವನದ ಮಧ್ಯ ಪ್ರದೇಶಕ್ಕೆ ಬರುವಷ್ಟರೊಳಗೆ ಸಾಯಂಕಾಲವಾಯಿತು. ಒಂದೇಸವನ ದಾರೀ ನಡೆದು ಬಂದುದರಿಂದ ಹಾಗು ಎಂದೂ ಕಾಲಿನಿಂದ ನಡೆದು ಅಭ್ಯಾಸವಿರದ್ದರಿಂದ, ಆ ರಾಜಸಿಂಡಸಿಗೆ ಅಂದು ಬಹು ದಣಿವಾಯಿ ತೆಂದು ಬೇರೆ ಹೇಳಬೇಕೇ? ಸಾಯಂಕಾಲವು ಆಗಹತ್ತಲು, ಆ ವನದಲ್ಲಿ ಅಂಧಕಾರದ ಸಾಮ್ರಾಜ್ಯವು ಪ್ರಸ್ಥಾಪಿತವಾಗಲಾರಂಭಿಸಿತು. ಆಗ ತಾನು ಈ ಅಂಧಕಾರದಲ್ಲಿ ನಿಂತುಕೊಂಡು ವನ್ಯ ಹಿಂಸ್ರ ಮೃಗಗಳಿಗೆ ಆಹುತಿಯಾ ಗುವದಕ್ಕಿಂತ, ಸಮೀಪದಲ್ಲಿಯೇ ತನ್ನ ಪ್ರವಾಹನಾದದಿಂದ ಝೇಂಕರಿಸುತ್ತಿ ರುವ ಜಾಹ್ನವೀ ತಟಾಕಕ್ಕೆ ಹೋಗಿ, ಸಾಕಷ್ಟು ನೀರು ಕುಡಿದು, ಅಲ್ಲಿಯೇ ಯಾವುದೊಂದು ಬಂಡೆಗಲ್ಲಿನ್ನಮೇಲೆ ಬಿದ್ದುಕೊಂಡು, ಇಂದಿನ ರಾತ್ರಿಯನ್ನು ಕಳೆಯ ಬೇಕೆಂದು ಆತನು ನಿರ್ಧರಿಸಿದನು; ಹಾಗು ಜಾಹ್ನವಿಯ ತರಂಗ ಗಳ ತಾಂಡವ ನರ್ತನದ ಶಬ್ದವು ಯಾವ ದಿಕ್ಕಿನಿಂದ ಕೇಳಬರುತ್ತಿತ್ತೋ, ಅತ್ತ ಕಡೆಗೇ ನಡೆದನು.

ತಾಸರ್ಧ ತಾಸು ದಾರೀ ಕ್ರಮಿಸಿದ ನಂತರ ಅವನು ಜಾಹ್ನವೀತಟಾ ಕಕ್ಕೆ ಬಂದು ತಲುಪಿದನು ಜಾಹ್ನವಿಯು ಆ ಶಾಲ ವನಮಧ್ಯದೊಳ ಗಿಂದಲೇ ಪ್ರವಹಿಸಿದ್ದರಿಂದ, ಚಂದ್ರಗುಪ್ತನು ಈ ಮೊದಲು ಭಾವಿಸಿಕೊಂಡ ಮೇರೆಗೆ ನದೀ ತಟಾಕದಲ್ಲಿ ವಿಸ್ತಾರವಾದ ಬೈಲು ಪ್ರದೇಶವಿರಲಿಲ್ಲ. ಆದರೂ ಹೊಳೆಯ ಸುತ್ತುಮುತ್ತಲಿನ ಕೆಲ ಭಾಗವು ಹೆಚ್ಚು—ಕಡಿಮೆ ಬಿಡುವಾಗಿ ದ್ದಿತು. ಜಾಹ್ನವಿಯ ಈಚೆಯ ಪಾರ್ಶ್ವದಿಂದ ತುಸ ದೂರದಲ್ಲೇ ಒಂದು ಪರ್ವತ ಶ್ರೇಣಿಯಿದ್ದದ್ದು ಆತನಿಗೆ ಗೋಚರವಾಯಿತು. ಮರು ದಿನ ಬೆಳಗ್ಗೆ

ಹೊಳೆ ದಾಟಿ, ತಾನು ಆ ಪರ್ವತಗಳ ಕಡೆಗೇ ಸಾಗಬೇಕೆಂದು ನಿರ್ಧರಿಸಿ ಕೊಂಡು, ಆ ಚಂದ್ರಗುಪ್ತ ರಾಜಪುತ್ರನು ಅಂದಿನ ರಾತ್ರಿಯನ್ನು ಗಂಗಾ ತಟಾಕದ ಆ ರನ್ಯ ಪ್ರದೇಶದಲ್ಲೇ ಕಳೆದನು. ಆ ಅರಣ್ಯದಲ್ಲಿ ನಡೆದು ಬರುವಾಗ ಅವನ ಕಾಲುಗಳಿಗೆ ಎಷ್ಟೋ ಕಲ್ಲು-ಮುಳ್ಳುಗಳು ನೆಟ್ಟಿದ್ದುದರಿಂ ದಲೂ, ಬಿಸಿಲಲ್ಲಿ ದಾರೀ ನಡೆದುದರಿಂದಲೂ ಹೆಚ್ಚಾಗಿ ದಣಿದಿದ್ದ ಆತನು ತುಸು ನೀರು ಕುಡಿದು ಒಂದು ಬಂಡೆಗಲ್ಲ ಮೇಲೆ ಅಡ್ಡಾದುದೊಂದೇ ತಡ, ಅಲ್ಪಾವಕಾಶದಲ್ಲಿಯೇ ಅವನಿಗೊಳ್ಳೇ ಗಾಢವಾದ ನಿದ್ದೆ ಹತ್ತಿಬಿಟ್ಟಿತು!

ಆದರೆ ಆ ನಿದ್ರಾಂಗನೆಯು ಅವನನ್ನು ತನ್ನೊಡನೆ ಬಹಳ ಹೊತ್ತು ರಮಿಸಗೊಡಲಿಲ್ಲ; ಯಾಕಂದರೆ, ಇಂದು ಆತನು ಮಗಧ ದೇಶದ ಯುವ ರಾಜನಾಗಿರದೆ, ಒಬ್ಬ ಬಡ ಮತ್ತು ಅನಾಥ ದಾರಿಕಾರನಾಗಿದ್ದನು ಆದ ರಿಂದಲೇ ಆ ವೇಶ್ಯಾ ವೃತ್ತಿಯ ನಿದ್ರಾ ಸೇವಿಯು ಆ ದರಿದ್ರನಿಗೆ ತನ್ನ ಸಹ ವಾಸವನ್ನು ಮನಸದಣಿಯುವಾಗಿ ಮಾಡಗೊಡಲಿಲ್ಲ! ಮಧ್ಯರಾತ್ರಿಯ ವೇಳೆ ಯಲ್ಲಿ ಗಂಗಾ ತಟಾಕದ ಶೀತಲ ಗಾಳಿಯಿಂದ ಚಂದ್ರಗುಪ್ತನು ಎಚ್ಚತ್ತನು. ಆತನ ಬಳಿಯಲ್ಲ ಹಾಸಲಿಕ್ಕಾಗಲೀ ಹೊದೆಯಲಿಕ್ಕಾಗಲೀ ಯಾವದೂ ಇದ್ದಿ ರಲಿಲ್ಲ. ಆದರಿಂದ ಗಂಗಾತಟಾಕದ ಆ ದಾರುಣವಾದ ಚಳಿಯನ್ನು ನಿಸ್ತರಿ ಸುವದು ಅವನಿಂದ ಅಸಾಧ್ಯವಾಯಿತು; ಅಗ್ನಿಯನ್ನು ಉಂಟುಮಾಡುವ ಚಕಮುಕಿ ಮೊದಲಾದ ಯಾವ ಸಾಧನಗಳೂ ಆತನ ಬಳಿಯಲ್ಲ ಇರಲಿಲ್ಲ. ಆದರಿಂದ ಅವನು ಬಿದ್ದುಕೊಂಡಿದ್ದ ಆ ಬಂಡೆಗಲ್ಲ ಮೇಲಿನಿಂದ ಎದ್ದು, ಸಮೀಪದ ಒಂದು ವೃಕ್ಷದ ಬಳಿಗೆ ಹೋದನು; ಆದರೆ ಕರ್ಮ—ಧರ್ಮ ಸಂಯೋಗದಿಂದ ಅಲ್ಲಿದ್ದ ಒಂದು ವನ್ಯ ಹಿಂಸ್ರ ಮೃಗವು ಇವನ ಮೈಮೇಲೆ ಏರಿ ಬರಲು, ಇವನು ತನ್ನ ಬೆನ್ನ ಬತ್ತಳಿಕೆಯೊಳಗಿನ ಒಂದು ಹದನಾದ ಅಲಗನ್ನು ತನ್ನ ಬಾಣಕ್ಕೆ ಹೂಡಿ, ಆ ಮೃಗವನ್ನು ಅಗಿಂದಾಗಲೇ ಯಮ ಸದನಕ್ಕಟ್ಟಿದನು. ಅನಂತರ ಆತನು ಆ ಮರದ ಆಶ್ರಯವನ್ನು ಹೊಂದ ಬೇಕೆಂದಿದ್ದ ತನ್ನ ಆ ಬೇತನ್ನು ಬಿಟ್ಟು, ಮತ್ತೆ ಗಂಗಾತಟಾಕದ ಆ ಬಂಡೆ ಗಲ್ಲಿಗೇ ಬಂದು, ಅದರ ಮೇಲೆಯೇ ಕುಳಿತುಕೊಂಡನು. ಆಗ ಅವನ ಮನ ಸ್ಸಿನಲ್ಲಿ ನಾನಾ ಬಗೆಯ ವಿಚಾರತರಂಗಗಳು ಏಳಹತ್ತಿದವು:—

"ತಾನು ಮಹಾಪದ್ಮನಂದ ಮಹಾರಾಜನ ಪ್ರೀತಿಯ ಮಡದಿಯಾದ ಮುರಾ ರಾಣಿಯ ಗರ್ಭದಲ್ಲಿ ಜನಿಸಿದವನಿದ್ದು, ಇಂದು ತನಗೆ ಈ ಪ್ರಕಾರ ನಿರ್ಜನ ವನಾಂತರದೊಳಗೆ ಒಬ್ಬೊಂಟಿಗನಾಗಿ ಸಂಚರಿಸುವ ಪ್ರಸಂಗವು

ಬಂದಿತೇ? ಹಾಯ್-ಹಾಯ್! ವಿಧಿಯೇ!! ನಿನ್ನ ಲೀಲೆಯು ಅಗಾಧ ವ ಗಿರುವದು. ಅಯ್ಯೋ ತಾಯಿ, ಮುರಾ ರಾಣೀ, ಯಾವ ನೀನು ಗತ ಮಗಧೇಶ್ವರನ ಪ್ರೀತಿಯ ಮಡದಿಯೆಂದು ನಿನ್ನನ್ನು ಸರ್ವರೂ ಬಹು ಮಾನಿಸುತ್ತಿದ್ದರೋ, ಅಂಥ ನಿನ್ನನ್ನು ನಿನ್ನ ಈ ಪ್ರಿಯ ಕುಮಾರನು ಜೀವಿಸಿರಲಿಕ್ಕೆ ಯಾವ ಹೀನ ಗತಿಗೆ ಕಾಣಿಸುವರೋ ಯಾರಿಗೆ ಗೊತ್ತು? ಪ್ರಸ್ತುತದ ಮಗಧೇಶ್ವರನಿಗೆ ನಾನು ಇದುವರೆಗೆ ಕಾಯಾ, ವಾಚಾ ಅಥವಾ ಮನಸಾ ಹೀಗೆ ಯಾವ ಪ್ರಕಾರಗಳಿಂದಲೂ ಕೊಂಚವೂ ಅನಿಷ್ಟವನ್ನು ಬಗೆದವನಲ್ಲ. ಹೀಗಿದ್ದೂ ಆ ಪ್ರಭುವಿನ ಮನಸ್ಸಿನಲ್ಲಿ ನನ್ನ ವಿಷಯವಾಗಿ ಇಷ್ಟು ಕಠೋರ ಭಾವವು ಉಂಟಾಗಬೇಕಾದರೆ, ನನ್ನ ದುರ್ದೈವದ ಹೊರ್ತು ಮತ್ತಾವ ಸಬಲ ಕಾರಣವಿರಬೇಕು? ಮಗಧ ರಾಜ್ಯದ ಪ್ರಜೆಗಳು ಮಹಾಪದ್ಮನಂದನ ಕನಿಷ್ಠ ಪುತ್ರನೆಂದು ನನ್ನಲ್ಲಿ ವಿಶೇಷ ಪ್ರೀತಿಯುಳ್ಳವರಾಗಿರುತ್ತಾರೆ ಮತ್ತು ಅದಕ್ಕಾಗಿಯೇ ಅವರು ಇಂದು ಪ್ರಾತಃಕಾಲದಲ್ಲಿ ಮಗಧೇಶ್ವರನ ಪ್ರಾಸಾದದೆಡೆಗೆ ಆಕಸ್ಮಿಕವಾಗಿ ಹೋಗಿದ್ದ ನನ್ನನ್ನು ನೋಡಿ, ಸಂತೋಷಪಟ್ಟು, ನನ್ನ ಜಯ ಜಯಕಾರ ಮಾಡಿದರು. ಇದರಲ್ಲಿ ಪ್ರಜೆಗಳು ಮಾಡಿದ ಮಹದಪರಾಧವಾದರೂ ಯಾವದು?"

ಈ ಪ್ರಕಾರವಾಗಿ ಚಂದ್ರಗುಪ್ತನು ತನ್ನ ದೈವದುರ್ವಿಪಾಕದ ಸಂಗತಿಗಳನ್ನು ಮನದಂದು ಚಿಂತಾಕ್ರಾಂತನಾಗಲು, ಅವನಿಗೆ ಆ ರಾತ್ರಿಯಲ್ಲಿ ಮತ್ತೆ ನಿದ್ರೆಯೇ ಬರಲಿಲ್ಲ ಚುಮು, ಚುಮು ಎಂದು ನಸಕಾಗುವರೆಗೂ ಅವನು ಅದೇ ಪ್ರಕಾರದ ಚಿಂತಾ ಸಾಗರದೊಳಗೆ ಮುಳುಗಿ, ಜಾಗರಣಮಾಡುತ್ತಿದ್ದನು. ರಾತ್ರಿಯು ಸರಿದು ಅರುಣೋದಯದ ಸಮಯವಾಗಲು, ನದೀ ತಟಾಕದ ಹಕ್ಕಿ-ಪಕ್ಕಿಗಳು ಕಿಲಿ ಬಿಲಿ ಶಬ್ದಮಾಡಲಾರಂಭಿಸಿದವು. ಅವುಗಳ ಆಲಾಪದಿಂದ ಚಂದ್ರಗುಪ್ತನ ಏಕಾಗ್ರತೆಗೆ ಭಂಗವುಂಟಾಯಿತು. ಕೂಡಲೆ ಆತನು ಸುತ್ತಲೂ ದಿಟ್ಟಿಸಿ ನೋಡಿ. ಬೆಳಗಾಗಲಿಕ್ಕೆ ಇನ್ನು ವಿಶೇಷ ಅವಕಾಶವಿಲ್ಲೆಂದು ತಿಳಿದು, ತನ್ನ ಪ್ರಾತಃಕೃತ್ಯಗಳನ್ನೆಲ್ಲ ತೀರಿಸಿಕೊಂಡನು; ಹಾಗು ಸೂರ್ಯೋದಯವಾಗುವಷ್ಟರೊಳಗೆ ಹೊಳೆಯನ್ನು ದಾಟಿ, ಪೂರ್ವ ರಾತ್ರಿಯಲ್ಲಿ ನಿರ್ಧರಿಸಿಕೊಂಡಂತೆ ಎದುರಿಗೆ ಕಾಣುತ್ತಿರುವ ಉನ್ನತವಾದ ಪರ್ವತ ಶ್ರೇಣಿಯ ಕಡೆಗೆ ಸಾಗಿದನು. ಹಿಂದಿನ ದಿವಸ ಸಂಪೂರ್ಣವಾಗಿ ನಿರಾಹಾರ ಪ್ರಾಪ್ತವಾದುದರಿಂದಲೂ, ರಾತ್ರಿಯಲ್ಲಿ ಚೆನ್ನಾಗಿ ನಿದ್ದೆ ಹತ್ತದ್ದರಿಂದಲೂ ಇಂದು ಆತನಿಂದ ಆ ಉನ್ನತವಾದ ಗುಡ್ಡಗಾಡಿನ ಪ್ರದೇಶವನ್ನು ಕ್ರಮಿಸುವದು ದುಸ್ತರವಾಗಿಬಿಟ್ಟಿತು. ಹಾಗೂ—

ಹೀಗೂ ಮಾಡಿ ಆತನು ಸರಾಸರಿ ಒಂದು ಪ್ರಹರ ಹೊತ್ತು ಏರುವ ವರೆಗೂ ದಾರೀ ನಡೆದನು. ಬಳಿಕ ಆತನ ಹೆಜ್ಜೆಗಳೇ ಕಿತ್ತದಂತಾದವು! ಕಣ್ಣಿಗೆ ಬವಳಿ ಬರಲಾರಂಭಿಸಿತು!! ಆದುದರಿಂದ ಅವನು ಮುಂದೆ ಹೋಗಲಾರದೆ, ಅಲ್ಲಿಯೇ ಸಮೀಪದೊಳಗಿನ ಒಂದು ವಿಶಾಲವಾದ ವೃಕ್ಷದ ನೆಳಲಲ್ಲಿ ಬಿದ್ದು ಕೊಂಡನು; ಆದರೆ ಆ ಗಿಡದ ನೆಳಲಲ್ಲಿ ಮೊದಲು ಕೆಲವು ಕ್ಷಣಗಳ ವರೆಗೆ ಅವನಿಗೆ ವಿರಾಮವೆನಿಸಿದರೂ, ಸ್ವಲ್ಪ ವೇಳೆಯೊಳಗೇ ಅತನು ತೃಷಾಕ್ರಾಂತ ನಾದನು. ನೆಲ ಬಿಟ್ಟು ಏಳಲಾರದೆ ಅವನು ಬಿದ್ದಲ್ಲಿಬಿದ್ದುಕೊಂಡೇ ಮನೋ ದಾರ್ಢ್ಯದಿಂದ ತನ್ನ ತೃಷೆಯನ್ನು ಶಮನಮಾಡಿಕೊಳ್ಳಬೇಕೆಂದು ಪ್ರಯತ್ನಿ ಸಹತ್ತಿದನು; ಆದರೆ ಹತ್ತೆಂಟು ನಿಮಿಷಗಳಿಗಿಂತ ಹೆಚ್ಚು ವೇಳೆಯ ವರೆಗೆ ಅವನಿಂದ ಆ ಪ್ರಯತ್ನವು ಸಾಧಿಸಲಾಗಲಿಲ್ಲ. ಬಳಿಕ ಸಮೀಪದಲ್ಲಿ ಎಲ್ಲಿ ಯಾದರೂ ನೀರು ಇರುವದೇನೆಂದು ಅವನು ಆ ದಿನ್ನೆಯ ಪ್ರದೇಶದ ಮೇಲೆ ನಿಂತು ಅತ್ತಿತ್ತ ಬಹು ದೂರದ ವರೆಗೆ ದೃಷ್ಟಿ ಚೆಲ್ಲಿದನು; ಆದರೆ ಜಲಾಶ ಯದ ಸುಳುವು ಎಲ್ಲಿಯೂ ಹತ್ತಲಿಲ್ಲ. ಬಳಿಕ ಅವನು ಮತ್ತೆ ಕುಳಿತನು. ಆಗ ಅವನಿಗೆ ಪುನಃ ಬವಳಿ ಬಂತು ಕೆಲವು ಕಾಲ ಕಣ್ಣು ಮುಚ್ಚಿ ಕೊಂಡು, ನಂತರ ಅವನು ನೀರು ದೊರೆಕಿಸಲಿಕ್ಕೆ ಏನು ಮಾಡಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ ಸಮೀಪದ ಯಾವುದೊಂದು ದರಿ-ಕಂದರದೊಳ ಗಿಂದ ಹರಿಯುತಲಿದ್ದ ಹಳ್ಳದ ನೀರಿನ 'ಕಳ ಕಳ' ಎಂಬ ಸಪ್ಪಳವು ಅತನಿಗೆ ಮಂದಮಂದವಾಗಿ ಕೇಳಿಸತೊಡಗಿತು . ಕೂಡಲೆ ದಾರುಣವಾದ ತೃಷೆಯಿಂದ ಪೀಡಿತನಾದ ಆ ಚಂದ್ರಗುಪ್ತನು, ಆ ದಿಕ್ಕಿನ ಕಡೆಗೆ ಮೆಲ್ಲಮೆಲ್ಲನೆ ಸಾಗಿ ದನು ಒಂದಾದ ಬಳಿಕ ಮತ್ತೊಂದರಂತೆ ಮೂರು ಗುಡ್ಡಗಳ ದರಿಗಳನ್ನು ಇಳಿದು ನೋಡಿದರೂ, ಆತನಿಗೆ ಆ ಹರಿಯುವ ಹಳ್ಳವು ಸಿಕ್ಕಲೇ ಇಲ್ಲವು. ಆದರಿಂದ ಅವನು ಮತ್ತಿಷ್ಟು ನಿರಾಶನಾಗಿ ಕಂಗೆಟ್ಟನು! ಇಷ್ಟಾಗುವಷ್ಟ ರಲ್ಲಿ ಸೂರ್ಯದೇವನು ನೆತ್ತಿಯ ಮೇಲೆ ಬಂದಿದ್ದನು. ತಾನು ಈ ತೃಷೆ ಯಿಂದ ಮುಕ್ತನಾಗದೆ, ಇಂದು ತನ್ನ ಅವಸಾನಕಾಲವೇ ಪ್ರಾಪ್ತವಾಯಿ ತೆಂದು ತಿಳಿದು, ಆತನು ಒಂದು ಮರದಡಿಯ ಹಾಸುಗಲ್ಲಿನ ಮೇಲೆ ತನ್ನ ಕಲೇವರವನ್ನು ಚೆಲ್ಲಿಕೊಟ್ಟು, ಮರಣದ ಮಾರ್ಗವನ್ನು ನಿರೀಕ್ಷಿಸಹತ್ತಿದ್ದನು. ಆದರೆ ಆ ಕಾಲಕ್ಕೆ ಆತನ ಪ್ರಾಣವನ್ನು ಹೀರಿ, ಭವಿಷ್ಯತ್ಕಾಲದಲ್ಲಿ ಅವನಿಗೆ ಪ್ರಾಪ್ತವಾಗಬಹುದಾದ ಮಗಧಧ ಸಾರ್ವಭೌಮತ್ವವನ್ನು ಆ ನಿಷ್ಠುರನಾದ ವಿಧಾತನಿಂದ ತಪ್ಪಿಸಲಿಕ್ಕೆ ಸಾಧ್ಯವಿರಲಿಲ್ಲ ಅದರಿಂದ ಆಗ ಆ ಭಯಂಕರ ತೃಷಾಕ್ರಾಂತ ಸ್ಥಿತಿಯಲ್ಲೇ ಅವನಿಗೆ ತುಸು ಜಂಪು ಹತ್ತಿತು. ಮಲಗಿದ್ದ

ಸಿಂಹನಿಗೆ ಮಾರೆಗೆ ನಿಂತು ಗುಂಡು ಹಾಕಿದರೆ, ಅದು ಹೇಗೆ ಘರ್ಜಿಸುತ್ತ ಯೇಳುವದೋ ಹಾಗೆ. ಮುಲಗಿದ ಕೆಲ ನಿಮಿಷಗಳಲ್ಲಿಯೇ ಚಂದ್ರಗುಪ್ತನು ಯಾರದೋ ಒಂದು ಬಾಣಪ್ರಯೋಗದಿಂದ ಆಹತನಾಗಿ ಚೀತ್ಕಾರ ಮಾ-ಡುತ್ತ ಎದ್ದನು. ಆಗ ಆತನು ವಿಸ್ಮಯಚಕಿತ ನೇತ್ರಗಳಿಂದ ತನ್ನ ಶರೀರ ವನ್ನು ನೋಡಿಕೊಂಡನು; ಒಂದು ಹದನಾದ ಬಾಣವು ತನ್ನ ವಿಶಾಲ ವಾದ ಸ್ಕಂಧಪ್ರದೇಶದಲ್ಲ ಬುಡಮಟ ನೆಟ್ಟಿತ್ತು; ಹಾಗೂ ಆ ಗಾಯ ದೊಳಗಿಂದ ರಕ್ತವು ಕಾರಂಜಿಯಂತೆ ಪುಟಿಯುತ್ತಿತ್ತು! ಕೂಡಲೆ ಅವನು ತನ್ನನ್ನು ಹೀಗೆ ಗುಪ್ತವಾಗಿ ಗಾಯಗೊಳಿಸಿದವರ ಪಾರುಪತ್ಯ ಮಾಡ ಬೇಕೆಂದು ಒಳ್ಳೇ ಅವಸಾನವನ್ನು ತಂದುಕೊಂಡು, ಆ ಸ್ಥಳದಿಂದೆದ್ದು ಸುತ್ತಲೂ ಅಡ್ಡಾಡಹತ್ತಿದನು; ಎಲ್ಲಿಯೂ ಯಾರೂ ಅವನಿಗೆ ಕಾಣಿಸ ಲಿಲ್ಲ. ಹೀಗೆ ತಿರುಗಾಡುವದರಿಂದ ಎರಡು ದಿನಗಳಿಂದ ಅನಶನನಾಗಿ ಅಶಕ್ತನಾಗಿದ್ದ ಅವನಿಗೆ ಈಗಲಾದ ಗಾಯದಿಂದ ಮತ್ತಿಷ್ಟು ಅಶಕ್ತತೆ ಯುಂಟಾಗಿ ಶಕ್ತಿಪಾತವಾದಂತಾಗಲು, ಅವನು ನಡೆ-ನಡೆಯುತ್ತಿರಲಿಕ್ಕೆ ಒತ್ತಟ್ಟಿಗೆ ಕಡಕೊಂಡು ಬಿದ್ದನು!

ಚಂದ್ರಗುಪ್ತನು ಹೀಗೆ ಅವಸಾನಗೆಟ್ಟು ನೆಲಕ್ಕೆ ಬಿದ್ದುದನ್ನು ನೋಡಿ, ಎಂಟು ಜನ ಮಾಗಧೀ ಸೈನಿಕರು ಅವನ ಬಳಿಗೆ ಬಂದರು; ಹಾಗೂ ಅವರ ಲ್ಲಿಯ ಮುಖ್ಯಸ್ಥನು ಉಳಿದವರನ್ನು ಕುರಿತು:— "ಸೈನಿಕರೇ, ಮಗಧೇಶ ರನ ಆಜ್ಞೆಯನ್ನು ನಾವೀಗ ಪಾಲಿಸಿದಂತಾಗಿರುತ್ತದೆ. ಯಾವ ನಮ್ಮ ವಿಷಾಕ್ತಬಾಣದಿಂದ ಈ ಕುಮಾರ ಚಂದ್ರಗುಪ್ತನು ಗಾಯಹೊಂದಿರು ವನೋ, ಅದರಿಂದಲೇ ಈತನ ಇಹಲೋಕದ ಯಾತ್ರೆಯು ಖಂಡಿತವಾಗಿ ಪೂರೈಸಿ ಹೋಗುವದು; ಆದರೆ ಈತನು ಮರಣಹೊಂದಲಿಕ್ಕೆ ಇನ್ನೂ ಅವಕಾಶ ಹಿಡಿಯುವದು. ಆದ್ದರಿಂದ ಗೆಳೆಯರೇ, ಇನ್ನು ನಾವು ಇವ ನನ್ನು ಈ ಪರ್ವತರಾಜ್ಯದಿಂದ ನಮ್ಮ ಮಗಧರಾಜ್ಯದ ಗಡಿಯೊಳಗೆ ಒಯ್ಯೋಣ; ಅಲ್ಲಿಹೇಗೂ ನಾವು ನಮ್ಮ ಕುದುರೆಗಳನ್ನು ಕಟ್ಟಿ ಬಂದಿದ್ದೇವೆ. ಅವುಗಳಲ್ಲಿಯ ಒಂದು ಕುದುರೆಯ ಬೆನ್ನಿಗೆ ಇವನನ್ನು ಕಟ್ಟಿ, ಸಾಯಂಕಾಲ ದೊಳಗಾಗಿ ನಮ್ಮ ರಾಜಧಾನಿಗೆ ಸಾಗಿಸೋಣ, ಹಾಗು ರಾಕ್ಷಸಮಂ ತ್ರಿಗೆ ಅರ್ಧಮೃತಾವಸ್ಥೆಯಲ್ಲಿರುವ ಈ ಚಂದ್ರಗುಪ್ತನ ದೇಹವನ್ನು ಒಪ್ಪಿ ಸೋಣ, ಮುಂದಿನ ಕೆಲಸವನ್ನು ಆತನೇ ತಿಳಿದಂತೆ ಮಾಡಿಕೊಳ್ಳಲಿ ಎಂದಂದನು.

# ವಿಧಿ ಲಿಖಿತವು ಅಗಾಧವಾದುದು

ಮನುಷ್ಯನು ಅನೇಕ ಸಮಯಗಳಲ್ಲಿ ಅನೇಕ ಬಗೆಯಾಗಿ ಮನೋರಾಜ್ಯಗಳನ್ನು ಕಲ್ಪಿಸಿಕೊಳ್ಳುವನು; ಆದರೆ ಅವು ಸಫಲವಾಗುವದು ಮಾತ್ರ ಎಂದೂ ಸಾಧ್ಯವಿರುವದಿಲ್ಲ. ಜಗನ್ನಿಯಾಮಕನ ಇಚ್ಛೆಗೆ ಬಂದ ಮಾನವೀ ಮನೋರಾಜ್ಯಗಳಷ್ಟೇ ಕಾರ್ಯತಃ ಪರಿಣಮಿಸುವವಲ್ಲವೆ, ಉಳಿದವುಗಳೆಲ್ಲ ಬಿರುಗಾಳಿಗೆ ಸಿಕ್ಕ ಮೋಡಗಳಂತೆ ಕ್ಷಣಾರ್ಧದಲ್ಲಿ ಹೇಳ ಹೆಸರಿಲ್ಲದಂತೆ ಚದರಿ ಹೋಗುವವು ಈ ಮಾತು ಲೋಕದೊಳಗಿನ ಪ್ರತಿಯೊಂದು ವ್ಯಕ್ತಿಗೆ ಪ್ರತಿನಿತ್ಯದಲ್ಲಿ ಎಷ್ಟೋ ಸಾರೆ ಅನುಭವಜನ್ಯವಾಗುತ್ತಿದ್ದರೂ, ಆ ಅನುಭವವನ್ನು ಮನದಲ್ಲಿ ದೃಢವಾಗಿಟ್ಟುಕೊಂಡು, ತನ್ನ ಮನೋರಾಜ್ಯಗಳ ಸುಖದ ಕಲ್ಪನೆಗಳಿಗೆ ಮರುಳಾಗದವರು ಮಾತ್ರ ಈ ಜಗತ್ತಿನಲ್ಲಿ ವಿರಳರೆಂದೇ ಹೇಳಬೇಕಾಗುವದು.

ಚಂದ್ರಗುಪ್ತನನ್ನು ಅನುಸರಿಸಿ ಬಂದ ಗುಪ್ತ ಮಾಗಧೀ ಸೈನಿಕರ ಮುಖ್ಯಸ್ಥನು ಮಾಡಿದ ಮನೋರಾಜ್ಯದ ಗತಿಯೂ ಮೇಲೆ ಹೇಳಿದಂತೆಯೆ ಆಯಿತು, ಯಾಕಂದರೆ ಅವನ ಆದೇಶದಂತೆ ಸೈನಿಕರಲ್ಲಿ ನಾಲ್ವರು ಕೂಡಿ ಚಂದ್ರಗುಪ್ತನ ದೇಹವನ್ನು ಎತ್ತಿಕೊಂಡು ನಡೆಯುವ ಯತ್ನದಲ್ಲಿದ್ದರು. ಅಷ್ಟರಲ್ಲಿ ಎತ್ತ ಕಡೆಯಿಂದಲೋ ಸುಂಯಿ-ಸುಂಯಿ ಎಂದು ಮೂರು ನಾಲ್ಕು ಬಾಣಗಳು ವೇಗದಿಂದ ಬಂದು ಆ ನಾಲ್ವರನ್ನೂ ಧರೆಗಿಳಿಸಿದವು. ಅದರಂತೆ ಮತ್ತೂ ಒಂದು ಬಾಣವು ಬಂದು ಆ ಸೈನಿಕರ ಮುಖ್ಯಸ್ಥನ ತೊಡೆಗೆ ತಾಕಲು, ಆತನೂ ಚೀತ್ಕಾರಮಾತ್ರ ಭೂಮಿಗೆ ಬಿದ್ದನು. ಸಿಂಹಿಣಿಯಂತೆ ಕ್ರೋಧಾವಿಷ್ಟಳಾದ ಒಬ್ಬ ನವಯುವತಿಯು ಎದುರಿಗಿನ ದಿನ್ನೆಯ ಮರೆಗೆ ನಿಂತು, ತಮ್ಮ ಮೇಲೆ ಬಾಣದ ಮಳೆಗರೆಯುವದು ಗಾಯವಾಗದ ಒಬ್ಬ ಸೈನಿಕನ ದೃಷ್ಟಿಗೆ ಬೀಳಲು, ಅವನು ಉಳಿದ ತನ್ನ ಇಬ್ಬರು ಸಹಾಯಕರೊಡನೆ ಗಾಯಹೊಂದಿದ್ದ ತಮ್ಮ ಮುಖ್ಯಸ್ಥನ ದೇಹವನ್ನು ಹಾಗೂ-ಹೀಗೂ ಮಾಡಿ ಅಲ್ಲಿಂದ ಎತ್ತಿಕೊಂಡು ವೇಗದಿಂದ ಸಾಗಿದನು. ಈ ಮೊದಲು ಅವಳ ಬಾಣಗಳ ಪೆಟ್ಟಿಗೆ ಆಹುತಿಯಾಗಿದ್ದ ಉಳಿದ ನಾಲ್ವರು ಇಷ್ಟರಲ್ಲಿಯೇ ಯಮಪುರಿಯ ದಾರಿಯನ್ನು ಶೋಧಿಸ ನಡೆದರು.!

ಇಷ್ಟರಲ್ಲಿ ಇವರನ್ನು ಈ ಮೊದಲು ಬಾಣದಿಂದ ಹೊಡೆದು ಗಾಯಗೊಳಿಸಿದ್ದ ಒಬ್ಬ ಷೋಡಶವರ್ಷದ ನವತರುಣಿಯು ಗುಡ್ಡಗಾಡು ನಿವಾಸಿ

ಗಳಾದ ೮-೧೦ ಜನ ಸೈನಿಕರೊಡನೆ ಅಲ್ಲಿಗೆ ಬಂದು ಓಡಿ ಹೋಗುತ್ತಿರುವ ಆ ಮಾಗಧೀ ಸೈನಿಕರನ್ನು ಸೆರೆ ಹಿಡಿದಳು. ನಂತರ ತನ್ನ ಸೈನಿಕರಲ್ಲಿಯ ಅರ್ಧ ಜನರಿಗೆ ಆ ಸೆರೆ ಹಿಡಿದ ಜನರನ್ನು ಬಂಧಿಸಿಕೊಂಡು ತಮ್ಮ ರಾಜಧಾನಿಗೆ ಸಾಗಲಿಕ್ಕೆ ಹೇಳಿದಳು, ಹಾಗು ತಾನು ಸ್ವತಃ ಚಂದ್ರಗುಪ್ತನ ಬಳಿಗೆ ಬಂದು, ಅವನ ಹೆಗಲಲ್ಲಿ ನಟ್ಟ ಆ ಬಾಣವನ್ನು ಕಸುವಿನಿಂದ ಕಿತ್ತಿ ತೆಗೆದಳು. ಆಗಂತೂ ಆ ಗಾಯದೊಳಗಿಂದ ದೂಷಿತರಕ್ತದ ಪ್ರವಾಹವೇ ಪ್ರಾರಂಭವಾಯಿತು. ಕೂಡಲೆ ಅವಳು ಆ ನೆತ್ತರವು ಪ್ರವಹಿಸದ ಹಾಗೆ ತನ್ನ ಎಡಗೈಯನ್ನು ಗಾಯದ ಮೇಲೆ ಒತ್ತಿ ಹಿಡಿದು, ಬಲಗೈಯಿಂದ ತನ್ನ ಉಡಿಯಲ್ಲಿದ್ದ ಯಾವದೊಂದು ವನಸ್ಪತಿಯನ್ನು ಬಾಯಿಯಲ್ಲಿ ಹಾಕಿಕೊಂಡು ಚನ್ನಾಗಿ ಜಗಿದಳು. ಮತ್ತು ಆ ಚರ್ವಣವನ್ನು ಆ ಗಾಯದಲ್ಲಿ ತುಂಬಿ, ಒಂದು ಅರಿವೆಯಿಂದ ಅದನ್ನು ಕಟ್ಟಿದಳು. ಆ ವನಸ್ಪತಿಯಲ್ಲಿ ಅಂಥ ವಿಲಕ್ಷಣ ಗುಣವಿದ್ದದರಿಂದ, ಆ ಗಾಯದಿಂದ ರಕ್ತದ ಒಂದು ಹನಿ ಕೂಡ ಮತ್ತೆ ಹೊರಹೊರಡಲಿಲ್ಲ. ಬಳಿಕ ಆ ಕುಮಾರಿಯು ಬಳಿಯಲ್ಲಿ ನಿಂತಿದ್ದ ಉಳಿದ ತನ್ನ ೪-೫ ಜನ ಸೈನಿಕರಿಗೆ ಚಂದ್ರಗುಪ್ತನ ದೇಹವನ್ನು ಒಯ್ದು ಪರ್ವತರಾಜ ಪ್ರಾಸಾದದೊಳಗಿನ ತನ್ನ ಖಾಸ ಮಹಾಲಿನಲ್ಲಿ ಮಲಗಿಸಬೇಕೆಂದು ಹೇಳಿದಳು. ಕೂಡಲೆ ಅವರು ಅದನ್ನು ಎತ್ತಿಕೊಂಡು ಗುಡ್ಡವನ್ನು ಹತ್ತಲಾರಂಭಿಸಿದರು. ಅವಳೂ ಸಮೀಪದ ಕಾಲುದಾರಿಯಿಂದ ತನ್ನ ಅರಮನೆಯ ಕಡೆಗೇ ನಡೆದಳು.

ದಾರೀಕ್ರಮಿಸುತ್ತಿರುವಾಗ ಅವಳ ಮನಸ್ಸಿನಲ್ಲಿ ಅನೇಕ ಬಗೆಯ ವಿಚಾರಗಳು ಉದ್ಭವಿಸಿದವು. ಈ ಸೈನಿಕರ ವೇಷ-ಭೂಷಣಗಳಿಂದ ನೋಡಲು, ಇವರು ಮಗಧದೇಶದವರೆಂಬಂತೆ ತೋರುವದು. ಮಾಗಧೀ ಸೈನಿಕರು ನಮ್ಮ ರಾಜ್ಯದಲ್ಲಿ ಹೀಗೆ ಗುಪ್ತವಾಗಿ ಪ್ರವೇಶಿಸಿದ ಕಾರಣವೇನಿರಬಹುದು? ಉಗ್ರಪ್ರಕೃತಿಯ ನಂದಭೂಪತಿಯು ನಮ್ಮ ಈ ಸ್ವತಂತ್ರ ರಾಜ್ಯವನ್ನು ಕೈವಶ ಮಾಡಿಕೊಳ್ಳುವ ಉದ್ಯೋಗ ಬೇರೆ ನಡೆಸಿರಲಿಕ್ಕಿಲ್ಲವಷ್ಟೇ? ಅದಕ್ಕಾಗಿಯೇ ಅವನ ಈ ಗುಪ್ತಹೇರರು ಬಂದಿರಲಿಕ್ಕಿಲ್ಲೆಂದು ಅದಾರು ಹೇಳಬೇಕು? ಆ ಸೈನಿಕರಿಂದ ಗಾಯಹೊಂದಿರುವ ಈ ವಿಶಾಲದೇಹದ ವೀರಪುರುಷನು ಯಾರಾಗಿರಬಹುದು? ಇವನಂಥ ಸುಂದರ ಪುರುಷನನ್ನು ನಾನು ಈ ಮೊದಲೆಂದೂ ನೋಡಿಯೇ ಇಲ್ಲವಲ್ಲ! ಒಂದೇ ಒಂದು ಗಳಿಗೆಯ ವರೆಗೆ ನಾನು ಅವನ ರೂಪವನ್ನು ನಿರೀಕ್ಷಿಸಿರಬಹುದು. ಇಷ್ಟರಿಂದಲೇ ನನ್ನ ಹೃದಯವು ಎಷ್ಟು ಚಂಚಲವಾಯಿತಲ್ಲ! ಭಗವಾನ್

ಮಹಾಕಾಲಳೆ. ವನ ಇಚ್ಛೆಯು ಹೇಗೆ ಇರುವದೋ ಯಾರಿಗೆ ಗೊತ್ತು? ಆ ಗಾಯ ಹೊಂದಿರುವ ವ್ಯಕ್ತಿಯು ಯಾವನೇ ಆಗಲೊಲ್ಲನೇಕೆ, ಅವನ ಸೌಮ್ಯಕಾಂತಿ. ತೇಜಃಪುಂಜವಾದ ಮೈಬಣ್ಣ, ಪ್ರಮಾಣಬದ್ಧವಾದ ದೇಹ ಇವುಗಳ ಮೇಲಿಂದ ಆಲೋಚಿಸಲು, ಆತನು ಉಚ್ಚ ವಂಶದವನೇ ಎಂದು ಖಾತ್ರಿಯಾಗುತ್ತದೆ. ಈ ಗುಪ್ತಹೇರರು ಮೋಸದಿಂದ ಹೊಡೆದ ವಿಷಾಕ್ತ ಬಾಣವು ತಾಕಿ. ಈತನು ಇಷ್ಟು ಹೈರಾಣಾಗಿರುವನು- ಇಲ್ಲದಿದ್ದರೆ ಅವನು ಇಂಥ ಹತ್ತಿಪ್ಪತ್ತು ಜನ ಮಾಗಧೀ ಸೈನಿಕರನ್ನು ಸಹಜವಾಗಿ ತುಂಡರಿಸಿ ಚೆಲ್ಲಬಹುದಾಗಿತ್ತು. ನನಗೆ ಹ್ಯಾಗೂ ವಿಷಬಾಧೆಯನ್ನು ನಿವಾರಿಸುವ ಅನೇಕ ಗಿಡ-ಮೂಲಿಕೆಗಳು ಗೊತ್ತಿರುತ್ತವೆ; ಅಲ್ಲದೆ ನಮ್ಮ ರಾಜವೈದ್ಯ ನಂತೂ ಕೇವಲ ನಾರಾಯಣ ಸ್ವರೂಪಾಗಿರುವನು! ಅಂದಬಳಿಕ ನಾನು ಈಗ ಹೀಗೆ ಅವನ ಬಗ್ಗೆ ಕಾಲ್ಪನಿಕ ವಿಚಾರ ಮಾಡುತ್ತ ಕಾಲಹರಣ ಮಾಡುವದಕ್ಕಿಂತ, ಆತ ವಿಷಬಾಧೆಯನ್ನು ನಿವಾರಿಸಿ, ಅವನಬಾಯಿಂ ದಲೇ ಆತನ ಪರಿಚಯ ಮಾಡಿಕೊಳ್ಳುವೆನು'' ಎಂದು ಯೋಚಿಸಿ, ಶೀಘ್ರ ಗತಿಯಿಂದ ಅವಳು ಆ ಪರ್ವತಶ್ರೇಣಿಗಳ ಮಧ್ಯದಲ್ಲಿ ಎತ್ತರವಾದ ಪರ್ವ ತದ ತುದಿಯಲ್ಲಿರುವ ರಾಜಪ್ರಾಸಾದದ ಕಡೆಗೆ ನಡೆದಳು. ಆಕೆಯ ಸ್ವಾಭಾವಿಕವಾದ ಕಮಲಲಾಂಛಿತ ಮೈಕಾಂತಿಯು ಮಧ್ಯಾಹ್ನಕಾಲದ ಸೂರ್ಯರಶ್ಮಿಗಳ ಸಂತಾಪದಿಂದರಕ್ತವರ್ಣವನ್ನು ಧರಿಸಿತ್ತು. ಗಂಡಪ್ರದೇಶ ದಲ್ಲಿಯೂ ಕಪೋಲಗಳ ಮೇಲೂ ಬೆವರಿನ ಹನಿಗಳು ಒಳ್ಳೇ ಶೋಭಾಯ ಮಾನವಾಗಿ ಕಾಣಿಸುತ್ತಿದ್ದವು

ಆ ಯುವತಿಯು ಕ್ಷಿಪ್ರದಲ್ಲಿಯೇ ತಮ್ಮ ಅರಮನೆಯ ಬಳಿಯ ಕ್ರೀಡಾವನದ ಗುಪ್ತದ್ವಾರದ ಹತ್ತಿರಕ್ಕೆ ಬಂದಳು ಅವಳು ಇನ್ನು ಆ ಗುಪ್ತದ್ವಾರವನ್ನು ತನ್ನಲ್ಲಿದ್ದ ಬೀಗದ ಕೈಯಿಂದ ತೆರೆದು ಒಳಗೆ ಕಾಲಿಡ ತಕ್ಕವಳು; ಇಷ್ಟರಲ್ಲಿ ಒಳಗೆ ನಿಂತಿದ್ದ ಒಬ್ಬ ಯುವಕನು ಸುಹಾಸ್ಯ ಮುಖದಿಂದ ಅವಳನ್ನು ಸಂಬೋಧಿಸಿ, ಸ್ನೇಹಪರವಾಗಿನುಡಿದನೇನಂದರೇ: ''ತಂಗೀ, ಎತ್ತ ಹೋಗಿದ್ದೆ? ಇಂಥ ಈ ಪ್ರಚಂಡ ಬಿಸಿಲಲ್ಲಿ ನಿನಗೆ ಬೇಟೆ ಯಾಡುವ ಲಹರಿಯುಂಟಾಗಿತ್ತೇನು?''

ರಮಣಿಯು ಈ ಪ್ರಶ್ನೆಯಿಂದ ತುಸ ನೊಂದುಕೊಂಡವಳಾಗಿಃ— ಅಣ್ಣಾ, ನಾನು ಬೇಟೆಗೆ ಹೋಗಿದ್ದಿಲ್ಲ; ಪರರಿಗೆ ತೊಂದರೆ ಕೊಡದದಂಥ ಸೌಮ್ಯಪ್ರಾಣಿಗಳಾದ ಚಿಗರಿ ಮೊದಲಾದವುಗಳ ಬೇಟೆಗೆ ನಾನೆಂದಾದರೂ ಹೋದದ್ದನ್ನು ನೀನು ನೋಡಿರುವಿಯೇನು? ನಾನು ನಿನ್ನ ಪ್ರಜೆಗಳಹಿತ

ಚಿಂತನೆಗಾಗಿಯೂ ನಿನ್ನ ರಾಜ್ಯದ ಸುರಕ್ಷಿತೆಗಾಗಿಯೂ ಆಗಾಗ್ಗೆ ನಿನ್ನ ರಾಜ್ಯದಲ್ಲಿ ಸಂಚರಿಸುತ್ತಿರುವೆನು; ಮತ್ತು ನಿನ್ನ ಪ್ರಜೆಗಳಿಗೆ ಮಾತೃ ರೂಪದಿಂದ, ಭಗಿನೀರೂಪದಿಂದ ಹಾಗೂ ಕನ್ಯಾರೂಪದಿಂದ ಸಹಾಯಕಳಾಗಿ, ಅವರ ಕಷ್ಟ-ನಷ್ಟಗಳನ್ನು ಪರಿಹರಿಸುತ್ತಿರುತ್ತೇನೆ. ಒಂದುವೇಳೆ ಬೇಟೆಗೆ ಹೋದರೂ ಪ್ರಜೆಗಳಿಗೆ ಯಾವ ದುಷ್ಟ ಹುಲಿ, ಕರಡಿ, ಕಾಡ ಹಂದಿ ಮುಂತಾದ ಹಿಂಸ್ರಪಶುಗಳಿಂದ ತೊಂದರೆ ಸಂಭವಿಸುವದೋ. ಅಂಥ ಪ್ರಾಣಿಗಳನ್ನಷ್ಟೇ ಸಂಹರಿಸುವ ಬೇಟೆಗೆ ಹೋಗುತ್ತಿರುತ್ತೇನೆ.

ಇದನ್ನು ಕೇಳಿ ಆ ಯುವಕನು ಸ್ನೇಹಪೂರ್ಣಸ್ವರದಿಂದಃ—ತಂಗೀ, ಮಂದಾಕಿನೀ, ಇದು ನನಗೆ ಗೊತ್ತಿಲ್ಲವೇನು? ನೀನು ಸ್ವರ್ಗದೊಳಗಿನ ಯಾವಳೊಬ್ಬ ಶ್ರೇಷ್ಠದೇವತೆಯೋ ಆಗಿದ್ದು, ನನ್ನ ಹಾಗು ನನ್ನ ಪ್ರಜೆಗಳ ಪರಿಚರ್ಯಕ್ಕಾಗಿಯೇ ಈ ಪರ್ವತರಾಜವಂಶದಲ್ಲಿ ಅವತರಿಸಿರುವಿಯೆಂದು ನಾವೆಲ್ಲರೂ ಭಾವಿಸಿರುತ್ತೇವೆ ತಂಗೀ, ಈಗ ನೀನು ಬಹಳ ದಣಿದಿರುವಂತೆ ಕಾಣುತ್ತದೆ ಹೋಗು. ನಿನ್ನ ಮಹಾಲಿಗೆ ಹೋಗಿ ತುಸ ವಿಶ್ರಮಿಸು, ಎಂದು ಹೇಳಲು,

ಆಗ ಆ ರಮಣಿಯುಃ— ಅಣ್ಣಾ, ಮಲಯಕೇತೂ, ವಿಶ್ರಾಂತಿ ಹೊಂದುವ ಪೂರ್ವದಲ್ಲಿ ನಿನ್ನೊಡನೆ ಕೆಲವು ಸಂಗತಿಗಳ ಬಗ್ಗೆ ಚರ್ಚಿಸಬೇಕಾಗಿದೆಯಲ್ಲ?

ಮಂದಾಕಿನಿಯೂ ಮಲಯಕೇತುವೂ ಮಗಧ ರಾಜ್ಯಕ್ಕೆ ಹೊಂದಿದ್ದ ಪರ್ವತರಾಜ್ಯವೆಂಬ ಗುಡ್ಡಗಾಡು-ಆದರೆ ಕೇವಲ ಸ್ವತಂತ್ರವಾದ–ದೇಶದ ರಾಜನ ಮಕ್ಕಳು ಪರ್ವತರಾಜ್ಯದ ಅಧಿಪತಿಯಾದ ಪಾರ್ವತೇಶ್ವರನು ತೀರಿಕೊಂಡು ಒಂದೆರಡೇ ವರ್ಷಗಳಾಗಿದ್ದವು ಆದುದರಿಂದ ಅವನ ಮಗನಾದ ಮಲಯಕೇತುವೇ ಈಗಿನ ಪಾರ್ವತೇಶ್ವರನಾಗಿದ್ದನು. ಮಂದಾಕಿನಿಯು ಹೆಣ್ಣುಮಗಳಾಗಿದ್ದರೂ, ತನ್ನ ಅಣ್ಣನಿಗೆ ರಾಜಕಾರಣದಲ್ಲಿ ಚನ್ನಾಗಿ ನೆರವಾಗುತ್ತಿದ್ದಳು.

ಮಲಯಕೇತುವು ಮಂದಾಕಿನಿಯನ್ನು ಕುರಿತು:—ತಂಗೀ, ಅದಾವ ವಿಷಯುವವ್ವಾ, ಅಷ್ಟು ಚರ್ಚಿಸಬೇಕಾದದ್ದು?

''ಅಣ್ಣಾ, ನಿನ್ನ ರಾಜ್ಯದಲ್ಲಿ ಶತ್ರುಗಳ ಪ್ರವೇಶವಾಗಿರುವದು!''

''ನನಗಂತೂ ಯಾವ ಶತ್ರುವೂ ಇರುವದಿಲ್ಲವಲ್ಲ!''

''ಇರುತ್ತಾನೆ; ನೀನು ತಂದೆಯು ಕಾಲದ ಘನಘೋರ ಯುದ್ಧವನ್ನು ಇಷ್ಟರಲ್ಲಿಯೇ ಮರೆತು ಬಿಟ್ಟೆಯೇನು?''

ತಂಗೀ, ಅದು ನನ್ನ ಸ್ಮರಣಕ್ಕೆ ಬರಲೊಲ್ಲದು!

ಅಣ್ಣಾ, ಮಗಧೇಶ್ವರನ ಸಾರ್ವಭೌಮತ್ವವನ್ನು ಅಸ್ವೀಕಾರ ಮಾಡಿದುದಕ್ಕಾಗಿ ತನ್ನ ಅಪಮಾನವಾಯಿತೆಂದು ನಂದಭೂಪತಿಯು ನಮ್ಮ ಮೇಲೆ ದಂಡೆತ್ತಿ ಬಂದಿರಲಿಲ್ಲವೇ?

ಓಹೋ! ಆ ಪ್ರಸಂಗವೇ? ನಮ್ಮ ಪರ್ವತರಾಜ್ಯದ ಪ್ರಜೆಗಳಲ್ಲಿ ಯಾದರೂ ಹೆರವರ ಸಾರ್ವಭೌಮತ್ವಕ್ಕೆ ತಲೆಬಗ್ಗಿಸುವರೇ? ಗೊತ್ತಿಲ್ಲವೇ. ಆಗ ಹೇಗೆ ಆ ನಂದರಾಜನ ಪರಾಭವವಾಗಿ, ಅವನು ನಮ್ಮೊಡನೆ ಸ್ನೇಹದ ಒಡಂಬಡಿಕೆಯನ್ನು ಮಾಡಿಕೊಂಡನೆಂಬದು? ನಾವು ಎಂದಾದರೂ ಮಂದಿಯ ದಾಸ್ಯತ್ವವನ್ನು ಸ್ವೀಕರಿಸಿರುವೆವೋ?

ಅಣ್ಣಾ, ಅದೆಲ್ಲವೂ ನನಗೆ ಗೊತ್ತಿದೆ; ಆದರೆ ದುಷ್ಟಪ್ರಕೃತಿಯ ನಂದರಾಜನಿಗೆ ಆಗ ಆದ ಅಪಮಾನವು ಸಹನವಾಗದ್ದರಿಂದಲೇ ಈಗ ಅವನು ಪುನಃ ನಮ್ಮನ್ನು ಜೇರಿಗೆ ತರುವ ಹವಣಿಕೆ ಮಾಡುತ್ತಿರುವಂತೆ ಕಾಣುತ್ತದೆ.

ತಂಗೀ, ಇದನ್ನೆಲ್ಲ ನೀನು ಏತರಿಂದ ತರ್ಕಿಸಿಕೊಂಡಿರುವೆ? ಅವನ ಅಂಥ ಯಾವಕೃತಿಯು ನಿನ್ನ ದೃಷ್ಟಿಗೋಚರವಾಗಿರುವದು?

ಇಂದು ನಮ್ಮ ಈ ಶಾಂತಿಮಯ ಪರ್ವತರಾಜ್ಯದ ಗಡಿಯಲ್ಲಿ ಗುಪ್ತವಾಗಧೀ ಸೈನಿಕರು ಪ್ರವೇಶಿಸಿದ್ದರು. ಅವರು ಏಳೆಂಟೇ ಜನರಿದ್ದರು. ಅವರಲ್ಲಿ ನಾಲ್ವರು ನನ್ನ ಬಾಣದ ಏಟಿಗೆ ಗುರಿಯಾಗಿ ಆಗಲೇ ಯಮಪುರಿಯ ದಾರೀ ಹಿಡಿದರು. ಉಳಿದವರನ್ನು ನಾನು ಸೆರೆ ಹಿಡಿದು, ನಮ್ಮ ಸೆರೆಮನೆಯಲ್ಲಿ ತಂದಿರಿಸಿರುತ್ತೇನೆ

ಮಂದಾಕಿನೀ, ಒಳ್ಳೇ ಉದ್ಯೋಗ ಕೈಕೊಂಡಿರುತ್ತೀ, ಪಾರ್ವತೇಶ್ವರನ ಭಗಿನಿಗೆ ಒಪ್ಪಬಹುದಾದ ಸಂಗತಿಯನ್ನೇ ಮಾಡಿರುತ್ತೀ!

ಬಳಿಕ ಮಂದಾಕಿನಿಯು ಅಂದು ಘಟಿಸಿದ ಸಮಸ್ತ ಸಂಗತಿಗಳನ್ನೂ ಅವನಿಗೆ ವಿವರಿಸಿ ಹೇಳಿದಳಲ್ಲದೆ, ಆಹತನಾಗಿದ್ದ ಒಬ್ಬ ತೇಜಸ್ವೀ ವೀರನನ್ನು ಶುಶ್ರೂಷೆ ಮಾಡುವದಕ್ಕಾಗಿ ಇಂದು ತಾನು ತನ್ನ ಮಹಾಲಿಗೆ ತಂದಿರುವೆನೆಂದೂ ತಿಳಿಸಿದಳು.

ಅದನ್ನು ಕೇಳಿ ಮಲಯಕೇತುವು:— ತಂಗೀ, ನೀನು ಇನ್ನೂ ನಿನ್ನ ಮಹಾಲಿಗೆ ಹೋದಂತೆ ಕಾಣುವದಿಲ್ಲ. ಅವನ ಪರಿಚರ್ಯದ ವ್ಯವಸ್ಥೆಯನ್ನೇನು ಮಾಡಿರುವೆ?

ನಾನು ಈಗ ಅತ್ತ ಕಡೆಗೇ ನಡೆದಿರುತ್ತೇನೆ ನೀನೂ ಬಾ.

ಎಂದೆಂದವಳೇ, ಮಂದಾಕಿನಿಯು ತೀವ್ರ ಗತಿಯಿಂದ ತನ್ನ ಮಹಾಲಿನ ಕಡೆಗೆ ಸಾಗಿದಳು; ಮಲಯಕೇತುವೂ ಅವಳನ್ನನುಸರಿಸಿ ನಡೆದನು

ವಿಶ್ವಾಸುಕನಾದ ಪರ್ವತನೆಂಬ ಅವಳ ವೃದ್ಧಸೇವಕನು ಚಂದ್ರಗುಪ್ತನನ್ನು ಈ ಮೊದಲೇ ಆ ಮಹಾಲಿನಲ್ಲಿ ತಂದು ಮಲಗಿಸಿ, ಅವನ ಸೇವಾ-ಶುಶ್ರೂಷೆಯಲ್ಲಿ ತತ್ಪರನಾಗಿದ್ದನು ವೃದ್ಧಪರ್ವತನು ಪಾರ್ವತೀಶ್ವರನ ಕಾಲದಿಂದಲೂ ಆ ರಾಜ್ಯದ ಮುಖ್ಯ ಸೇನಾಪತಿಯು. ಮಲಯಕೇತುವನ್ನೂ ಮಂದಾಕಿನಿಯನ್ನೂ ಅವನು ಪ್ರೀತಿಯಿಂದ ಎತ್ತಿ ಆಡಿಸಿ ದೊಡ್ಡವರನ್ನಾಗಿ ಮಾಡಿದವನು. ಆದುದರಿಂದ ಆ ವೃದ್ಧಪರ್ವತನನ್ನು ಆ ಸಹೋದರರು ತಮ್ಮ ಮನೆತನದ ಹಿರಿಯನೆಂದೇ ಭಾವಿಸಿ ನಡಕೊಳ್ಳುತ್ತಿದ್ದರು. ಆತನ ಉತ್ತಮ ಶೀಲ-ಸ್ವಭಾವಗಳ ಸಲುವಾಗಿ ಎಲ್ಲರೂ ಅವನಲ್ಲಿ ಭಯ-ಭಕ್ತಿಯುಳ್ಳವರಾಗಿರುತ್ತಿದ್ದರು.

ಮಲಯಕೇತುವು ತಂಗಿಯ ಬಾಯಿಂದ ಈ ಮೊದಲು ಕೇಳಿದಂಥ ಆ ತೇಜಃಪುಂಜ ಹಾಗು ಸೌಮ್ಯ ಮೂರ್ತಿಯನ್ನು ನೋಡಿ ಮನದಲ್ಲಿ ಮರಮರನೆ ಮರುಗಿದನು. ಇವನು ಒಂದಾಗ ಆ ಮೂರ್ತಿಯ ಕಣ್ಣುಗಳು ಮುಚ್ಚಲ್ಪಟ್ಟಿದ್ದವು. ಮೈಮೇಲೆ ಸ್ಮೃತಿಯು ಇರಲಿಲ್ಲ; ಪರ್ವತನು ಅವನ ಗಾಯಕ್ಕೆ ಯೋಗ್ಯ ಗಿಡ-ಮೂಲಿಕೆಗಳ ಲೇಪವನ್ನು ಹಚ್ಚಿ ಚನ್ನಾಗಿ ಕಟ್ಟಿದನು. ಆದರೂ ಆದರಿಂದ ಚಂದ್ರಗುಪ್ತನಿಗುಂಟಾದ ವಿಷಬಾಧೆಯು ಕೊಂಚವೂ ಕಡಿಮೆಯಾಗಿದ್ದಿಲ್ಲ; ಮಲಯಕೇತುವು ಬಂದು ಅವನ ಹಾಸಿಗೆಯ ಬಳಿಯಲ್ಲಿ ಕುಳಿತನು. ಈಗ ತಾನು ಮುಂದೇನು ಮಾಡಬೇಕೆಂಬದನ್ನು ತಿಳಿಯದೆ, ಅವನು ಕಿಙ್ಕರ್ತವ್ಯಮೂಢನಾದನು! ಯಾಕಂದರೆ, ಹಾಸಿಗೆಯ ಬಳಿಯಲ್ಲಿ ಬಂದ ಕೂಡಲೆ ಮಲಯಕೇತುವಿಗೆ ಆ ವ್ಯಕ್ತಿಯ ಪರಿಚಯಹತ್ತಿತು. ಮಗಧದೇಶದ ಯುವರಾಜನಾದ ಚಂದ್ರಗುಪ್ತನನ್ನು ಅವನು ಈ ಮೊದಲು ಎಷ್ಟೋ ಸಾರೆ ನೋಡಿದ್ದನು

ಬಹಳಹೊತ್ತು ಸುಮ್ಮನೆ ಕುಳಿತು ಆಲೋಚಿಸಿದ ಬಳಿಕ, ಇವನನ್ನು ಯಾರೋ ಗುಪ್ತಶತ್ರುಗಳು ವಿಷಾಕ್ತಬಾಣದಿಂದ ಗಾಯಗೊಳಿಸಿರುವರೆಂಬದು ಮಲಯಕೇತುವಿಗೆ ಖಾತ್ರಿಯಾಯಿತು ಚಂದ್ರಗುಪ್ತನಿಗೆ ಅನೇಕ ಜನ ಶತ್ರುಗಳಿರುವರೆಂಬದು ಅವನಿಗೆ ಅರಿಯದ ವಿಷಯವಾಗಿದ್ದಿಲ್ಲ. ಆದರೂ ಇವನನ್ನು ಈಗ ಈ ನಮ್ಮ ದೇಶದ ಗಡಿಯಲ್ಲಿ ಕೊಲ್ಲುವ ಯೋಜನೆಯನ್ನು ಮಾಡಿ, ತನ್ನ ಚಿರಶತ್ರುವಿನ ಪ್ರಾಣ ಹೀರಿ, ಅದರಿಂದ ನಮ್ಮ ಮೇಲೆ ದಂಡೆತ್ತಿ ಬರುವ ಮಾರ್ಗವನ್ನು ಹುಡುಕಿ ತೆಗೆಯಬೇಕೆಂಬ ಈ

ಒಂದೇ ಬಾಣದ ಏಟಿನಿಂದ ಎರಡು ಬೇಟೆಗಳನ್ನು ಕೆಡಹುವ ಯುಕ್ತಿ-
ಯನ್ನು ರಾಕ್ಷಸ ಮಂತ್ರಿಯಿಂದ ನಂದರಾಜನು ಕೈಕೊಂಡಿರಬಹುದಾಗಿದೆ;
ಆದರೆ ನಮ್ಮ ಮಂದಾಕಿನಿಯು ಆಯತ ಪ್ರಸಂಗದಲ್ಲಿ ಅವನ ಗುಪ್ತಹೇರರ
ಈ ಹೇಯಕೃತಿಗೆ ಅಡ್ಡಬಂದು, ಇವನನ್ನು ಸದ್ಯಕ್ಕೆ ಜೀವದಿಂದ ಉಳಿ-
ದ್ದರೂ, ಮಗಧೇಶ್ವರನ ಸೈನಿಕರು ಅವಳ ಬಾಣದಿಂದ ಹತರಾಗಿ, ನಮ್ಮ
ಅವನ ನಡುವಿನ ಸ್ನೇಹ ಸಂಬಂಧದ ಕರಾರಿಗೆ ಸಹಜವಾಗಿಯೇ ವ್ಯತ್ಯಯ
ಬಂದುದರಿಂದ, ಅವನು ಬೇಗನೆ ನಮ್ಮ ಮೇಲೆ ದಂಡೆತ್ತಿ ಬರುವದು ಖಂಡಿ-
ತವು ಈ ಪ್ರಸಂಗದಲ್ಲಿ ನಾವು ಈ ವ್ಯಕ್ತಿ-ಚಂದ್ರಗುಪ್ತನಿಗೆ ಆಶ್ರಯ
ಕೊಡಬೇಕೋ—ಕೊಡಬಾರದೋ? ಎಂಬ ಬಗ್ಗೆ ಮಲಯಕೇತುವು
ಬಹಳ ಹೊತ್ತಿನ ತನಕ ತನ್ನ ಮನಸ್ಸಿನಲ್ಲಿಯೇ ಆಲೋಚಿಸಿ, ತಮ್ಮ
ಮೇಲೆ ಎಂಥ ಕಠಿಣ ಪ್ರಸಂಗ ಬಂದರೂ, ಅದೇಕೆ, ತಮ್ಮ ರಾಜ್ಯವು ಕೂಡ
ಅಪಹೃತವಾಗಿ ತಾವು ದಾರಿಯ ಭಿಕಾರಿಗಳಾದರೂ, ಅನಾಥನೂ ಅಸಹಾ-
ಯನೂ ಆದ ಚಂದ್ರಗುಪ್ತನಿಗೆ ಆಶ್ರಯ ಕೊಡುವದೇ ತಮ್ಮ ಶೀಲವೆಂದು
ಆಗ ಅವನು ನಿರ್ಧರಿಸಿಕೊಂಡನು.

ಅಷ್ಟರಲ್ಲಿ ಮಂದಾಕಿನಿಯು ತನ್ನ ಬತ್ತಳಿಕೆಯಲ್ಲಿ ಪ್ರತ್ಯೇಕವಾಗಿಟ್ಟು-
ಕೊಂಡು ತಂದಿದ್ದ ಚಂದ್ರಗುಪ್ತನ ಶರೀರದಲ್ಲಿ ವಿದ್ಧವಾದ ಆ ಬಾಣವನ್ನು
ತೆಗೆದು ಅಣ್ಣನಮುಂದೆ ಇಟ್ಟಳು. ಕೂಡಲೆ ಅದನ್ನು ಅವನು ಸೂಕ್ಷ್ಮ
ರೀತಿಯಿಂದ ಪರೀಕ್ಷಿಸಿ—ತಂಗೀ, ಮಂದಾಕಿನೀ, ಈ ಬಾಣವು ವಿಷಾಕ್ತ-
ವೆಂಬುವದರಲ್ಲಿ ಕೊಂಚವೂ ಅನುಮಾನವಿರುವದಿಲ್ಲ. ತಂಗೀ, ಮಹಾಕಾಲನ
ಮಧ್ಯಾಹ್ನ ಪೂಜೆಯು ಹೊತ್ತಾಯಿತು. ನೀನು ಹೋಗಿ ಬೇಗನೆ ಆತನ
ಪೂಜೆಯನ್ನು ತೀರಿಸಿಕೊಂಡು ಬಾ ಅದುವರೆಗೆ ನಾನು ಈ ರೋಗಿಯ
ಬಳಿಯಲ್ಲಿಯೇ ಕುಳಿತುಕೊಂಡಿರುತ್ತೇನೆ, ಎಂದನು.

ಮಧ್ಯಾಹ್ನಕಾಲವು ಮೀರುತ್ತ ಬಂದದ್ದರಿಂದ, ಮಂದಾಕಿನಿಯು
ಕೂಡಲೆ ಸ್ನಾನಕ್ಕಾಗಿ ನಡೆದಳು ಅವಳು ಹೊರಟು ಹೋದ ಬಳಿಕ
ಮಲಯಕೇತುವು ಆ ವಿಷಾಕ್ತಬಾಣವನ್ನು ತಿರು-ತಿರುವಿ ನೋಡಿದನು.
ಕಡೆಗೆ ಆ ಬಾಣವು ಮಾಗಧೀ ಸೈನಿಕರದೇ ಎಂಬದು ಅದರದೊಂದು
ತುದಿಯಲ್ಲಿದ್ದ ಮಗಧದೇಶದ ರಾಜಚಿಹ್ನದಿಂದ ಕಂಡು ಬಂದಿತು. ಬಳಿಕ
ಅವನು ಅದನ್ನು ಬಚ್ಚಿಟ್ಟನು. ಚಂದ್ರಗುಪ್ತನ ಮೈಮೇಲೆ ಸ್ಮೃತಿಯಿರದಿ-
ದ್ದರೂ, ನಡುನಡುವೆ ನರಳುವದೂ, ದೇಹದ ಕೆಲವು ಭಾಗಗಳಲ್ಲಿಯೇ
ಬೆವರು ಬರುವದೂ ಹೀಗೆ ಏಕೋಪ್ರಕಾರವಾಗಿ ನಡೆದಿತ್ತು.

ಅರ್ಧ ತಾಸಿನಲ್ಲಿ ಮಂದಾಕಿನಿಯು ತನ್ನ ಪೂಜೆ-ಪುರಸ್ಕಾರಗಳನ್ನೆಲ್ಲ ತೀರಿಸಿಕೊಂಡು ಬಂದು ಅಣ್ಣನನ್ನು ಕುರಿತು:—ಅಣ್ಣಾ, ನೀನು ಇಷ್ಟೊತ್ತಿನ ವರೆಗೆ ಈ ರೋಗಿಯನ್ನು ಒಂದೇಸವನೆ ನಿರೀಕ್ಷಿಸುತ್ತಿರುವೆ. ಇದರಿಂದ ಲಕ್ಷಣವು ಹೇಗಿದೆಯೆಂಬುದು ನಿನಗೇನಾದರೂ ತಿಳಿಯಿತೇ?

ತಂಗೀ, ಈತನ ಅವಸ್ಥೆ ಚೆನ್ನಾಗಿ ಕಾಣುವದಿಲ್ಲ. ವಿಷ ಬಾಧೆಯಿಂದ ಇವನಿಗೆ ಸಂಪೂರ್ಣ ಎಚ್ಚರದಪ್ಪಿ ಹೋಗಿದೆ. ಇನ್ನು ನೀನು ಇಲ್ಲಿಯೇ ಕೂಡ್ರು. ನಾನು ಈಗಲೆ ರಾಜವೈದ್ಯನನ್ನು ಕರೆಯಿಸುವೆನು. ಅವನು ಬಂದನೆಂದರೆ, ಯೋಗ್ಯ ಉಪಚಾರ ಮಾಡಿಯೇ ಮಾಡುತ್ತಾನೆ, ಎಂದಂದವನೇ ಮಲಯಕೇತುವು ಅಲ್ಲಿಂದ ಹೊರ ಹೊರಟನು.

ಯಾವ ಕಾರಣದಿಂದಲೋ ಯಾರಿಗೆ ಗೊತ್ತು? ಆ ಚಂದ್ರಗುಪ್ತನನ್ನು ನೋಡಿದಾಗಿನಿಂದಲೇ ಗಾಯ ಹೊಂದಿ ಆಶ್ರಯ ರಹಿತನಾದ ಹಾಗು ವಿಪನ್ನಗ್ರಸ್ತನಾದ ಆತನ ವಿಷಯಕ್ಕೆ ಮಂದಾಕಿನಿಯಲ್ಲಿ ಒಂದಿಷ್ಟು ವಿಶೇಷ ಪ್ರಕಾರದ ಅಂತಃಕರಣವು ಜಾಗ್ರತವಾಗಿತ್ತು. ಆದರಿಂದ ಅಪರಿಚಿತನಾಗಿದ್ದರೂ ಆತನ ವಿಷಯವಾಗಿ ಅವಳಲ್ಲಿ ಸ್ವಲ್ಪವೂ ಸಂಕೋಚಭಾವವು ಉಳಿದಿರಲಿಲ್ಲ. ಆ ರೋಗಿ ಬರಬರುತ್ತ ಅವಸಾನಗೆಟ್ಟನು. ಆತನು ತೀರ ಕ್ಷೀಣ ಸ್ವರದಿಂದ ಏನೇನೋ ಬಡಬಡಿಸ ಹತ್ತಿದನು. ಆತನ ಬಾಯಿಗೆ ಕಿವಿಯಾನಿಸಿ ಕೇಳಿದರೂ, ಆ ಶಬ್ದಗಳು ಮಂದಾಕಿನಿಗೆ ಸ್ಪಷ್ಟವಾಗಿ ಕೇಳಿಸಲಿಲ್ಲ!

ಇಷ್ಟರಲ್ಲಿ ಮಲಯಕೇತುವಿನಿಂದ ಕರೆಸಲ್ಪಟ್ಟ ರಾಜವೈದ್ಯನು ಅಲ್ಲಿಗೆ ಬಂದನು. ಆತನು ಆ ರೋಗಿಯ ನಾಡಿಯನ್ನು ಪರೀಕ್ಷಿಸಿ, ವಿಷಣ್ಣವದನದಿಂದ ಮಂದಾಕಿನಿಯನ್ನು ಕುರಿತು:—ತಂಗೀ, ಒಳ್ಳೇ ಜಾಲಿಮ ವಿಷ ಬಾಧೆಯಾಗಿರುವದರಿಂದ, ಇವನ ಗತಿ ಚೆನ್ನಾಗಿರುವದಿಲ್ಲ. ಸತ್ಯವಾಗಿ ಹೇಳುವದೆಂದರೆ, ಈತನ ವಿಷಯದಲ್ಲಿ ನಿರಾಶೆ ತಾಳುವದೇ ವಿಹಿತವು! ಆದರೂ ವೈದ್ಯನ ಕರ್ತವ್ಯಕ್ಕಾಗಿಯೂ, ನೀವುಗಳೆಲ್ಲರ ಸಹಾನುಭೂತಿಯ ಸಲುವಾಗಿಯೂ ನಾನು ಈತನನ್ನು ಉಪಚರಿಸ ತೊಡಗುತ್ತೇನೆ; ಆದರೆ ಮಹಾಕಾಲಭೈರವನ ನಾಮವನ್ನುಚ್ಚರಿಸುತ್ತ ನನಗೆ ಯೋಗ್ಯವೆನಿಸುವ ಔಷಧೋಪಚಾರ ಮಾಡುವದಿಷ್ಟೇ ನನ್ನ-ನಿಮ್ಮಗಳ ಪ್ರಸ್ತುತದ ಕರ್ತವ್ಯವಾಗಿದೆಯೇ ಹೊರತು, ಬೇರೆ ಉಪಾಯಗಳಿಲ್ಲ. ಈತನ ಜೀವದ ಹೊಣೆಗಾರ ಆ ಮಹಾಕಾಲಭೈರವನೇ ಸರಿ.

ವೈದ್ಯನ ಈ ನುಡಿಗಳನ್ನು ಕೇಳಿ, ಮಂದಾಕಿನಿಯ ಬಾಯಿಂದ ಶಬ್ದಗಳೇ ಹೊರಡದಾದವು. ಅವಳ ಕಮಲ ಸದೃಶಗಳಾದ ನೇತ್ರಗಳಲ್ಲಿ ನೀರು

ತುಂಬಿದವು. ಆಕೆಯ ಆ ಪ್ರಕಾರದ ಕರುಣಾಜನ್ಯ ಸ್ಥಿತಿಯನ್ನು ಕಂಡು ವೈದ್ಯನು:— ತಂಗೀ, ನೀನು ಮಾನುಷಳಲ್ಲ, ಶಾಪಭ್ರಷ್ಟ ದೇವತೆಯೆಂದೇ ನನ್ನ ಭಾವನೆಯು. ಯಾವ ಈತನ ವಿಷಯವಾಗಿ ನೀನು ಇಷ್ಟು ದಯಾಪೂರ್ಣಳಾಗಿರುವಿಯೋ, ಅಂಥ ಇವನನ್ನು ನೀನು ಇಂದೇ ನೋಡಿರುತ್ತೀ ಈತನಿಗೂ ನಿನಗೂ ಯಾವ ಪ್ರಕಾರದ ಆಪ್ತತ್ವ-ಋಣಾನುಬಂಧತ್ವಗಳ ಸಂಬಂಧವೂ ಇರುವದಿಲ್ಲ. ಹೀಗಿದ್ದು, ನೀನು ಇವನ ವಿಷಯವಾಗಿಷ್ಟು ಕಾತರಗೊಳ್ಳುತ್ತಿರುವೆಯಾದ್ದರಿಂದ, ನಮ್ಮ ಮಹಾ ಕಾಲಭೈರವನು ಇವನನ್ನು ಈ ವ್ಯಾಧಿಯಿಂದ ನಿಶ್ಚಯವಾಗಿ ಪಾರುಗಾಣಿಸಬಹುದು. ತಂಗೀ, ಈಗ ಇವನಿಗೆ ಈ ಗುಳಿಗೆಯನ್ನು ತೇಯ್ದು ಕುಡಿಸು. ನಾನು ಮನೆಗೆ ಹೋಗಿ ಇವನ ಸಲುವಾಗಿ ಒಂದು ಬಗೆಯ ಉತ್ತೇಜಕ ಪೇಯವನ್ನು ಕಳಿಸಿಕೊಡುತ್ತೇನೆ. ಆ ಪೇಯವು ಇವನ ಜೀವನ ಶಕ್ತಿಯನ್ನು ಕ್ಷೀಣಿಸಗೊಡಲಾರದು ಈ ಗುಳಿಗೆಯ ಔಷಧದಿಂದ ಈತನ ಶರೀರದಲ್ಲಿ ಭೇದಿಸಿರುವ ವಿಷವು ಬೆವರಿನ ರೂಪದಿಂದ ಹೊರಹೊರಡುವದು. ಆದುದರಿಂದ ತಂಗೀ, ಈ ಔಷಧಿಯನ್ನೂ ಆ ಪೇಯವನ್ನೂ ಅರ್ಧಗಂಟೆಗೊಂದು ಸಲದಂತೆ ಇವನಿಗೆ ಕೊಡುತ್ತಿರು; ಮತ್ತೊಂದು ವಿಷಯವಾಗಿ ನಾನು ನಿನಗೆ ಈಗಲೇ ಎಚ್ಚರಿಸಿಡುತ್ತೇನೆ. ಅದೇನಂದರೆ:— ಇಂದು ಮಧ್ಯರಾತ್ರಿಯ ನಂತರ ಇವನಿಗೆ ಒಂದು ಬಗೆಯ ಉನ್ಮಾದವಾಗುವ ಸಂಭವವಿದೆ. ಆಗ ಈತನು ಹಾಸುಗೆಯಿಂದೆದ್ದು ಹರಿದಾಡಬಹುದು ಹಾಗೆ ಏಳದ ಹಾಗೆ ಎಚ್ಚರಪಟ್ಟರೆ, ಈ ಔಷಧದ ಗುಣದಿಂದಲೂ, ನಮ್ಮ ಮಹಾಕಾಲಭೈರವನ ದಯೆಯಿಂದಲೂ ಈತನಿಗೆ ನಾಳೆ ಬೆಳಗಿನ ಝಾವದಲ್ಲಿ ದೇಹಭಾನವುಂಟಾಗುವದು. ಸರಾಸರಿ ಮೂರು ಪ್ರಹರ ರಾತ್ರಿಗೆ ಪುನಃ ನಾನು ಇಲ್ಲಿಗೆ ಬಂದೇ ಬರುತ್ತೇನೆ, ಎಂದು ಹೇಳಿ, ವೈದ್ಯನು ಮನೆಗೆ ಹೋಗಿ, ರೋಗಿಗೆ ಕೊಡತಕ್ಕ ಉತ್ತೇಜಕ ಪೇಯವನ್ನು ಸಿದ್ಧಪಡಿಸಿ ಕಳಿಸಿಕೊಟ್ಟನು.

ರಾಜವೈದ್ಯನು ಹೇಳಿದಂತೆ ಮಂದಾಕಿನಿಯು ಪರ್ವತನೊಡನೆ ಆ ರಾತ್ರಿಯನ್ನೆಲ್ಲ ಕಣ್ಣಿಗೆ ಕಣ್ಣು ಹಚ್ಚದಂತೆ ಎಚ್ಚತ್ತಿದ್ದಳು. ಮಧ್ಯರಾತ್ರಿಯ ಸಮಯಕ್ಕೆ ಚಂದ್ರಗುಪ್ತನು ಚೇತರಿಸಿ, ಚಡಪಡಿಸಿ ಏಳಲಾರಂಭಿಸಿದನು; ಆದರೆ ಹಾಗೆ ಆತನು ಎದ್ದೇಳದಂತೆ ಇವರು ಮೊದಲೇ ಯೋಜನೆ ಮಾಡಿದ್ದರಿಂದ ಅವನಿಗೆ ಏಳುವದಸಾಧ್ಯವಾಯಿತು. ಆದರೂ ಅವನು ತನ ಬಾಯಿಂದ:— "ಭ್ರಷ್ಟಾ, ನಂದಾ............‘ ತಾಯೀ, ಮಹಾರಾಣಿಯೇ ನಿನ್ನ ಈ ಮಗನು ಜೀವಂತನಿರಲಿಕ್ಕೆ ನಿನ್ನನ್ನು ಆ ನೀಚರು............?

"ವಿಧಿಯೇ, ನಿನ್ನ ಲೀಲೆಯು ಅಗಾಧವಾದದ್ದು!................" ಮುಂತಾದ ನುಡಿಗಳನ್ನು ತ್ವೇಷಯುಕ್ತದೈನ್ಯವಾಣಿಯಿಂದ ಆಗಾಗ್ಗೆ ನುಡಿಯುತ್ತಿದ್ದನು. ಆ ಘೋರರಾತ್ರಿಯ ಎರಡನೇ ಯಾಮವು ಕಳೆದು, ಮೂರನೆಯ ಯಾಮವು ಪ್ರಾರಂಭವಾದ ಬಳಿಕ, ಚಂದ್ರಗುಪ್ತನ ಆ ಸ್ಥಿತಿಯು ಬದಲಿಸಿತು ಅವನ ವಿಷಬಾಧೆಯು ಕ್ರಮೇಣ ಕಡಿಮೆಯಾಗಿ, ಅವನಿಗೆ ಗಾಢವಾದ ನಿದ್ರೆಯು ಹತ್ತಿತು. ಅಂದಿನ ಬೆಳಗಿನ ಝಾವದ ನಿದ್ರಾವಸ್ಥೆಯಲ್ಲಿ ಅವನೊಂದು ವಿಚಿತ್ರವಾದ ಕನಸನ್ನು ಕಂಡನು; ಆದರೆ ಆ ಕನಸು ಮುಗಿಯುವದರೊಳಗೆ ಅವನಿಗೆ ಎಚ್ಚರವಾಯಿತು.

— — —

# ಮನದ ಮಿಡುಕು

............

ನಾನು ಈಗ ಎಲ್ಲಿರುತ್ತೇನೆ?

"ತಾವು ಭಯರಹಿತವಾದ ಸ್ಥಳದಲ್ಲಿಯೇ ಇರುವಿರಿ."

"ತಾವು ಯಾರು ?"

"ಅದನ್ನು ತಿಳಿಯಲು ಸದ್ಯಕ್ಕೆ ನೀವು ಅರ್ಹರಾಗಿರುವದಿಲ್ಲ!"

"ಅದೇಕೆ ?"

"ನಿಮ್ಮ ಪ್ರಕೃತಿಯು ತೀರ ಅಶಕ್ತವಾಗಿರುವದರಿಂದ ಬಹಳ ಮಾತಾಡಿದರೆ ಇಲ್ಲವೆ ಆಲೋಚಿಸಿದರೆ ಅನಿಷ್ಟ ಪ್ರಸಂಗವೊದಗಬಹುದಾಗಿದೆ. ಆದುದರಿಂದಲೇ ವೈದ್ಯರು ನಿಮ್ಮನ್ನು ಹೆಚ್ಚು ಮಾತಾಡಗೊಡಬೇಡೆಂದು ನಿಷೇಧಿಸಿರುತ್ತಾರೆ."

"ವೈದ್ಯರ ಅಪ್ಪಣೆಯನ್ನು ನಾನು ಶಿರಸಾವಹಿಸಿ ಪಾಲಿಸುವೆನು. ಆದರೆ ಈಗ ನಾನು ಎಲ್ಲಿ ಇರುತ್ತೇನೆ?"

"ಪರ್ವತ ರಾಜ್ಯದ ರಾಜಪ್ರಾಸಾದದಲ್ಲಿ."

"ಮಲಯಕೇತುವಿನ ಆಶ್ರಯದಲ್ಲಿಯೇ?"

"ತಮ್ಮ ಅನುಮಾನವು ಯಥಾರ್ಥವಾಗಿರುವದು"

"ಅವನಿಗೆ ನಾನು ಎಲ್ಲಿ ಸಿಕ್ಕೆನು? ನಾನು ಇಲ್ಲಿಗೆ ಬಂದುದು ಹೇಗೆ?"

"ತಾವು ಪರ್ವತರಾಜ್ಯದ ಗಡಿಯ ಪ್ರದೇಶದಲ್ಲಿ ಮೂರ್ಛಾವಸ್ಥೆಯಲ್ಲಿ ಬಿದ್ದುಕೊಂಡಿದ್ದಿರಿ. ಅದನ್ನು ಕಂಡು ನಮ್ಮ ಅನುಚರರು ನಿಮ್ಮನ್ನು ಇಲ್ಲಿಗೆ ಕರೆತಂದರು"

ನಾನು ತಮಗೆ ತುಂಬಾ ಆಭಾರಿಯಾಗಿರುತ್ತೇನೆ, ಆದರೆ ಈ ಕೃತಜ್ಞತೆಯನ್ನು ತಿಳಿಕೊಳ್ಳುವ ಅವಕಾಶ ದೊರೆತಿರದಿದ್ದರೆ ನನಗೆ ಬಹು ಸಂತೋಷವಾಗುತ್ತಿತ್ತು. ನನ್ನಂಥ ದುರ್ದೈವಿಗೆ ಮರಣವೇ ಶ್ರೇಯಸ್ಕರ!

ಜಗತ್ತಿನ ಪ್ರಾಣಿಗಳೆಲ್ಲ ಮರಣಕ್ಕೀಡಾಗುವದು ಧ್ರುವದಂತೆ ಸತ್ಯವು. ಆ ಕಠಿಣ ಹೃದಯದ ಕಾಲನು ನಿಮ್ಮನ್ನು ಬಿಗಿಯಾಗಿ ಕಟ್ಟಿ, ಎಳೆದೊಯ್ಯಲಿಕ್ಕೆ ಬಂದಿದ್ದನು; ಆದರೆ ಮಹಾನುಭಾವರೇ, ತಮ್ಮಂಥ ಸಾಹಸಿಯಾದ ವೀರರನ್ನು ಹಿಡಿದೆಳೆದೊಯ್ಯಲು ಸಮರ್ಥನಾಗದ್ದರಿಂದಲೋ-ಏನೋ ಆತನು ಭಗ್ನಮನೋರಥನಾಗಿ ಹಿಂದಿರುಗಿ ಹೋದನು.

ಬಲು ನೀರಡಿಕೆಯಾಗಿದೆ. ದಯಾ ಪೂರ್ಣಳೇ, ನನಗೊಂದು ಪೇಲೆ ಒಳ್ಳೇ ತಣ್ಣೀರು ಕೊಡುವೆಯಾ?

ಈ ಪ್ರಕಾರದ ಸಂಭಾಷಣವು ಚಂದ್ರಗುಪ್ತ ಮತ್ತು ಮಂದಾಕಿನಿಯರಲ್ಲಿ ನಡೆದಿತ್ತು ಮಂದಾಕಿನಿಯು ತನ್ನ ಮುಖಮಂಡಲವನ್ನು ಬುರುಕೆಯಿಂದ ಮುಚ್ಚಿಕೊಂಡಿದ್ದರೂ 'ಮೋಡದಿಂದ ಆವರಿಸಲ್ಪಟ್ಟರೂ ಶರಚ್ಚಂದ್ರನ ಪ್ರಕಾಶವು ಉಜ್ಜ್ವಲವಾಗಿ ಬೀಳುತ್ತಿರುವಂತೆ' ಆ ಜಿನುಗು ಅರಿವೆಯ ಬುರುಕೆಯೊಳಗಿಂದಲೂ ಅವಳ ತೇಜಃಪುಂಜವಾದ ಮುಖವು ಒಡೆದು ಕಾಣುತಲಿತ್ತು. ಅವಳು ರಾಜಕುಮಾರ-ಚಂದ್ರಗುಪ್ತನ ತಲೆಯ ಕಡೆಗೆ ಕುಳಿತಿದ್ದಳು ಚಂದ್ರಗುಪ್ತನ ಹೆಗಲಿಗಾದ ಗಾಯದಲ್ಲ ಇನ್ನೂ ದಾರುಣವಾಗಿ ವೇದನೆಯಿತ್ತು. ಆದರಿಂದ ಆತನು ಗೋಣು ಹೊರಳಿಸಿ ಅಲ್ಲಿ ಕುಳಿತ ಆ ಸ್ತ್ರೀಯು ಕಡೆಗೆ ನೋಡಲಸಮರ್ಥನಾಗಿದ್ದನು. ಒಂದೆರಡು ಸಾರೆ ಆ ಬಗ್ಗೆ ಅವನು ಪ್ರಯತ್ನಿಸಿದ ಸಹ ಆದರೆ ಅದರಿಂದ ಇಷ್ಟ ಕಾರ್ಯ ಸಾಧಿಸದೆ ಆ ಗಾಯ ಸಿಕಲಿ, ನೋವು ಮಾತ್ರ ಹೆಚ್ಚಿತು

ಬಳಿಕ ಮಂದಾಕಿನಿಯು ಪೂರ್ವ ರಾತ್ರಿಯಲ್ಲಿ ವೈದ್ಯನು ಕಳಿಸಿಕೊಟ್ಟಿರುವ ಆ ಉತ್ತೇಜಕ ಪೇಯವನ್ನು ಅವನಿಗೆ ಕೊಟ್ಟಳು ಜ್ವರದ ತಾಪದಿಂದ ಬಳಲಿ ಬಾಯಾರಿದ್ದ ಕುಮಾರ ಚಂದ್ರಗುಪ್ತನು ಅದನ್ನ ಮನದಣಿ ಕುಡಿದನು ಅದರಿಂದ ಆತನ ಬಾಯಾರಿಕೆ ಕೂಡಲೆ ಶಮನವಾಯಿತು. ಆಗ ಅವನು ಪ್ರಸನ್ನ ಮೊಗದಿಂದ:—ನಾನು ಹೆಚ್ಚು ಪೃಚ್ಛಾಪೃಚ್ಛ ಮಾಡುವದಿಲ್ಲ; ಆದರೆ ದಯಾಪೂರಿತವಾದ ( ಯಾವ ಸ್ತ್ರೀಯು ಈ ಅಧಮನ ಸಲುವಾಗಿ ಇಷ್ಟು ಕಷ್ಟ ಪಡುತ್ತಿರುವದೆಂಬದನ್ನು ತಿಳಿಯಲಪೇಕ್ಷಿಸುತ್ತೇನೆ.

ಆತನ ಈ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂಬುದನ್ನು ಎಷ್ಟೋ ಹೊತ್ತು ಆಲೋಚಿಸಿದರೂ ನಿರ್ಧರಿಸಲಾರದ ಮಂದಾಕಿನಿಯು:—ನಾನು

ಯಾವಳೇ ಆಗಿರಲೊಲ್ಲನೇಕೆ? ಅದನ್ನು ತಿಳಿಯುವದರಿಂದ ನಿಮಗೇನೂ ಪ್ರಯೋಜನವಿಲ್ಲ. ನನ್ನನ್ನು ನಿಮ್ಮ ಆಜ್ಞಾಧಾರಕ ಸೇವಕಳೆಂದು ತಿಳಿದರಾಯಿತು, ಎಂದಂದಳು.

ಅಷ್ಟರಲ್ಲಿ ಆ ಉತ್ತೇಜಕ ಪೇಯದಿಂದ ಆತನಿಗೊಂದು ಬಗೆಯ ಮದ-ಗ್ಲಾನಿ ಬಂದಿತು. ಅವನ ಕಣ್ಣಿಗೆ ಮತ್ತೆ ಕನಸು ಕಾಣಿಸಹತ್ತಿತು. ಈಗ ಕಾಣಿಸುವ ಕನಸು ಆತನು ಈ ಮೊದಲು ಕಂಡ ಕನಸಿನ ಉತ್ತರ ಭಾಗವಾಗಿದ್ದಿತೇ ವಿನಃ ಬೇರೆಯಾಗಿರಲಿಲ್ಲ.

ಚಂದ್ರಗುಪ್ತನು ತಾನು ಒಂದು ಪ್ರಚಂಡ ಜಲ ಪ್ರವಾಹದೊಳಗೆ ತೇಲಿ ಹೋಗುತ್ತಿದ್ದನು. ದೃಷ್ಟಿ ಹರಿಯುವ ವರೆಗೂ ನೀರೇ ನೀರಾಗಿತ್ತು. ಎಲ್ಲೆಲ್ಲೂ ಗಿಡ-ಮರಗಳಾಗಲಿ, ತೆಗ್ಗು-ದಿನ್ನೆಗಳಾಗಲಿ ಇರಲಿಲ್ಲ ಅದರಿಂದ ತಾನು ಇನ್ನು ಈ ಪ್ರಚಂಡ ಪ್ರವಾಹದಿಂದ ಪಾರಾಗುವ ಆಶೆಯು ಆತನಲ್ಲಿ ಉಳಿಯಲಿಲ್ಲ; ಆದರೆ ಅವನು ತೀರ ಹತಾಶನೂ ಆಗಿರಲಿಲ್ಲ. ಒಳ್ಳೇ ಕಸುವಿನಿಂದ ಈಸುತ್ತಿದ್ದನು. ಎಷ್ಟೋ ದೂರದ ವರೆಗೆ ಈಸಿ ಹೋದ ಬಳಿಕ ಅತ್ತಣ ದಿಸೆಯಿಂದ ಒಂದು ಚಿಕ್ಕ ನಾವು ಮಂದ ಗತಿಯಿಂದ ಆ ಪ್ರವಾಹದಲ್ಲಿ ಬರುತಲಿದ್ದಿತು. ಅವನು ಆ ಅತಿ ಪುಟ್ಟ ನಾವನ್ನು ನೋಡಿ, ಆ ನಾವಿನೊಳಗೆ ಯಾರೂ ಇರಲಿಕ್ಕಿಲ್ಲೆಂದು ಮೊದಲು ಊಹಿಸಿದನು; ಆದರೆ ಅದು ಸಮೀಪಕ್ಕೆ ಬರಲು ಅವನ ಭ್ರಮವು ಅಡಗಿತು. ಯಾಕಂದರೆ ಅದರಲ್ಲಿ ಒಬ್ಬ ನವ ಯುವತಿಯು ಕುಳಿತಿದ್ದಳು ಆಗ ಚಂದ್ರಗುಪ್ತನು ಆ ನಾವಿಕಳನ್ನು ಕುರಿತು ತನ್ನನ್ನು ಬದುಕಿಸುವ ಸಲುವಾಗಿ ಒಳ್ಳೆ ದೈನ್ಯದಿಂದ ಬೇಡಿಕೊಂಡನು. ಈತನ ಕರುಣಾಜನ್ಯ ವಾಣಿಯನ್ನು ಲಾಲಿಸಿ, ಅವಳು ಇವನ ಹತ್ತರ ಶೀಘ್ರವಾಗಿ ಬಂದು, ಇವನನ್ನು ತನ್ನ ಡೋಣಿಯೊಳಗೆ ಎಳೆಕೊಂಡಳು. ಕುಮಾರನು ತುಸ ಹೊತ್ತಿನ ವರೆಗೆ ಆ ನಾವಿನಲ್ಲಿ ಕುಳಿತು, ಇದುವರೆಗೂ ಬಹು ದೂರ ಈಸಿ ಬಂದ ತನ್ನ ದಣಿವನ್ನು ಪರಿಹರಿಸಿಕೊಂಡನು. ಆತನು ಆ ಸ್ತ್ರೀಯಳ ಮುಖವನ್ನು ನಿರೀಕ್ಷಿಸಬೇಕೆಂದೂ, ಅವಳ ಪರಿಚಯ ಪಡೆಯಬೇಕೆಂದೂ ಹೆಚ್ಚಾಗಿ ಪ್ರಯತ್ನಿಸಿದನು. ಅದು ಸಾಧ್ಯವಾಗದಿರಲು, ಅವನು ಆಕೆಯನ್ನು ಆಲಿಂಗಿಸಿ, ಅವಳ ಮೋರೆಯ ಮೇಲಿನ ಆವರಣವನ್ನು ತೆಗೆಯ ಹೋದನು. ಈ ಗಡಿಬಿಡಿಯಲ್ಲಿ ಆ ಪುಟ್ಟ ನಾವಿನ ಒಮ್ಮಗ್ಗಲಿಗೇ ಎಲ್ಲ ಭಾರವೂ ಬಿದ್ದದ್ದರಿಂದ, ಅದು ಬುಡಮೇಲಾಯಿತು ಕೂಡಲೆ ಚಂದ್ರಗುಪ್ತನೂ ಆ ರಮಣಿಯೂ ನೀರಲ್ಲಿ ಬಿದ್ದು ಮುಳುಗಿಬಿಟ್ಟರು. ಕುಮಾರನು ನೀರ ಮೇಲಕ್ಕೆ ಬಂದು ನೋಡಿದಾಗ ಆ ಡೋಣಿ ಎತ್ತೋ ತೇಲಿಹೋಗಿತ್ತು.

ಆ ದಿವ್ಯರಮಣಿಯು ನೀರಲ್ಲಿ ಎಲ್ಲಿಯೂ ಕಾಣಿಸಲಿಲ್ಲ ಚಂದ್ರಗುಪ್ತನು ಪುನಃ ಆ ಪ್ರವಾಹದ ಸೆಳವಿಗೆ ಬಿದ್ದನು. ಆ ಸ್ತ್ರೀಯಳಿಗೆ ಕೃತಜ್ಞನಾಗುವ ಬದಲು, ಕೃತಘ್ನನಾದುದರ ಜಾಲಿಮವಾದ ದಾಹವು ಆವನ ಅಂತರಂಗ ವನ್ನೂ, ಪ್ರಚಂಡವಾದ ಪ್ರವಾಹದ ಸೆಳವು ಆತನ ಬಹಿರಂಗವನ್ನೂ ಏಕ ಮುಖೇನ ಸಣ್ಣಿಸತೊಡಗಿದವು. ಇಷ್ಟರಲ್ಲಿ ಭೀಕರವಾದ ಕತ್ತಲೆಯು ಆ ಪ್ರದೇಶವನ್ನು ವ್ಯಾಪಿಸಿ ಬಿಟ್ಟಿತು. ಆದರಿಂದ ಕುಮಾರನು ತೀರ ಹತಾಶ ನಾದನು. ಇಷ್ಟಾಗುವದರೊಳಗೆ ಈ ಮೊದಲು ತನ್ನಿಂದ ನದಿಯಲ್ಲಿ ಬಿದ್ದು ಮುಳಗಿದ್ದ ಆ ದಿವ್ಯ ಸ್ತ್ರೀಯು ಕೈಯಲ್ಲಿ ಉಜ್ವಲ ಪ್ರಕಾಶದ ದೀಪವನ್ನು ಹಿಡಕೊಂಡು ತನ್ನೆಡೆಗೆ ಬರುತ್ತಿರವದು ಕಾಣಿಸಿತು. ಕೂಡಲೆ ಒದರುತ್ತ ಚೀರುತ್ತ:—"ದೇವೀ, ನನ್ನಂಥ ಪಾಪಿಷ್ಠನ ಅಪರಾಧ ವನ್ನು ಕ್ಷಮಿಸು; ಹಾಗೂ ನನ್ನನ್ನು ಈ ಸಂಕಟದಿಂದ ಪಾರು ಮಾಡು" ಎಂದು ಪ್ರಾರ್ಥಿಸತೊಡಗಿದನು.

ರೋಗಿಯು ಹೀಗೆ ಒಮ್ಮೆಲೆ ಚೀರಾಡುವದನ್ನು ಕೇಳಿ, ಮಂದಾಕಿನಿ ಯು ಕುಳಿತಲ್ಲಿಂದ ಎದ್ದು, ಆತನ ಮುಖದ ಎದುರಿಗೆ ಬಂದು ಕುಳಿತು:— ಯಾಕೆ, ಏನಾಯಿತು ? ಇಷ್ಟು ಚೀರಿಕೊಳ್ಳಲು ಕಾರಣವೇನು ? ಎಂದು ಪ್ರಶ್ನೆಮಾಡಿದಳು ಕುಮಾರನು ಬಹಳ ಹೊತ್ತಿನ ವರೆಗೆ ಕಣ್ಣೇ ತೆರೆಯ ಲಿಲ್ಲ. ಬಳಿಕ ತೆರೆದು ಸುತ್ತಲೂ ನೋಡಿ. ಪುನಃ ಮುಚ್ಚಿದನು ಆಗ ಸ್ವಪ್ನಸೃಷ್ಟಿಯೊಳಗಿನ ಪ್ರತಿಯೊಂದು ಪ್ರಸಂಗವು ಆತನ ಕಣ್ಣಿಗೆ ಕಟ್ಟಿತು. ಕೆಲ ಹೊತ್ತಿನ ಮೇಲೆ ಆ ಸ್ವಪ್ನಸೃಷ್ಟಿಯು ಸ್ಮೃತಿಪಥದಿಂದ ದೂರದೂರಾ ಗುತ್ತ ನಡೆದರೂ, ಆ ಕನಸಿಗೆ ಜೀವಾಳದಂತಿದ್ದ ಆ ರಮಣಿಯ ಮೂರ್ತಿ ಯು ಮಾತ್ರ ತನ್ನ ಹಾಸಿಗೆಯ ಪಾರ್ಶ್ವದಲ್ಲಿಯೇ ಕುಳಿತಿರುವಂತೆ ಅವನಿಗೆ ಭಾಸವಾಯಿತು. ಕೂಡಲೆ ಅವನು ಕಣ್ದೆರೆದು ಕೆಲ ನಿಮಿಷಗಳ ವರೆಗೆ ಮಂದಾಕಿನಿಯ ಮುಖವನ್ನು ಎವೆಯಿಕ್ಕದೆ ನೋಡಿ ಕಣ್ಣು ಮುಚ್ಚಿ ಕೊಂಡನು ಆಗ ಅವನು ತಾನು ಈ ಮೊದಲು ನೋಡಿದ್ದ, ತನ್ನನ್ನು ಆ ಪ್ರಚಂಡ ಪ್ರವಾಹದಿಂದ ಪಾರುಗಾಣಿಸಿದ ಪರಮ ಉಪಕಾರಕರ್ತೃ ವಾದ ಆ ರಮಣಿಯ ಮುಖಕ್ಕೂ, ಈಗ ನೋಡಿದ ಈ ಮಂದಾಕಿನಿಯ ಮುಖಕ್ಕೂ ಹೋಲಿಸಿ ನೋಡಿದನು; ಅವೆರಡೂ ಭಿನ್ನವಾಗಿರದೆ ಒಂದೇ ಎಂಬುದು ಮನವರಿಕೆಯಾದ ಬಳಿಕ, ಅವನು ಕಣ್ದೆರೆದು ಸ್ವಲ್ಪ ಸ್ಫುಟವಾಗಿ ಅಂದದ್ದು:—ಸ್ವಪ್ನವೆಲ್ಲಿಯಾದರೂ ಸತ್ಯವಾಗುವದುಂಟೇ ? ದೇವೀ, ನೀನಾರು? ನನಗೆ ನಿನ್ನ ಪರಿಚಯವನ್ನು ಮಾಡಿಕೊಡು. ನಾನು ನಿನಗೆ

ಕೇಡು ಬಗೆಯ ಬಂದಿದ್ದೆನು; ಆದರೆ ದಯಾಪೂರ್ಣಳಾದ ನೀನು ನನ್ನನ್ನು ಕ್ಷಮಿಸಿ ಪುನಃ ಕಾಪಾಡಿರುವೆ!

ಚಂದ್ರಗುಪ್ತನು ಯಾವದೋ ಒಂದು ಭೀಷಣವಾದ ಕನಸನ್ನು ಕಂಡುದದರಿಂದ, ಈ ಬಗೆಯಾಗಿ ಪ್ರಲಾಪಿಸುತ್ತಿರಬಹುದಾಗಿದೆ, ಎಂದು ತಿಳಿದ ಮಂದಾಕಿನಿಯು ಅವನನ್ನುದ್ದೇಶಿಸಿ:— ಯುವರಾಜ ಚಂದ್ರಗುಪ್ತರೇ ಸ್ವಪ್ನವೆಲ್ಲಿಯಾದರೂ ಸತ್ಯವಾಗುವದುಂಟೇ? ಸುಮ್ಮನೆ ಏಕೆ ಚಡಿಪಡಿಸುತ್ತಿರುವಿರಿ ? ನೀವು ಯಾವ ಬಗೆಯಿಂದಲೂ ನನಗೆ ಕೇಡು ಬಗೆದಿರುವದಿಲ್ಲ. ಎಂದಂದಳು.

ಆದರೂ ಆತನ ಭ್ರಮವು ಲೋಪವಾಗದ್ದರಿಂದ, ಅವನು ಮತ್ತೆ ಮೊದಲಿನಂತೆ ಪ್ರಲಾಪಿಸತೊಡಗಿದನು. ಆಗ ನಿರುಪಾಯಳಾಗಿ ಕುಲಕಾಮಿನಿಯರ ನಡತೆಗೆ ವಿರುದ್ಧವಾಗದಂತೆ ಕೂಡಲೆ ಅವಳು ತನ್ನ ಪರಿಚಯ ಮಾಡಿಕೊಟ್ಟಳು.

ಇವಳು ಪರ್ವತ ರಾಜ್ಯದ ಮಲಯಕೇತು ರಾಜನ ಭಗನಿಯೆಂಬದನ್ನು ತಿಳಿದ ಬಳಿಕಂತೂ, ಅವರಿಂದ ತನಗಾದ ಸಹಾಯವನ್ನು ನೆನೆನೆನೆದು ಅವರ ಬಗ್ಗೆ ಚಂದ್ರಗುಪ್ತನು ಮನದಲ್ಲಿ ಬಹಳ ಕೃತಜ್ಞನಾದನು ಕಡೆಗೆ ಅವನು ಅವಳನ್ನು ಪ್ರಾರ್ಥಿಸಿದನೇನಂದರೆ: - ದೇವೀ ಮಂದಾಕಿನೀ, ನಿಮ್ಮ ಶುಶ್ರೂಷೆಯಿಂದ ನಾನು ಈಗ ಹುಷಾರಾಗಿರುವೆನು: ಅಂಜುವ ಕಾರಣವಿಲ್ಲ ಒಮ್ಮೆ ನಿಮ್ಮ ಅಣ್ಣನನ್ನು ಕಾಣಬೇಕೆಂದಿರುವೆನು: ಸಾಧ್ಯವಾಗಬಹುದೋ ? ಎಂದೆನ್ನಲು,

ಘಟನಾಕ್ರಮದಿಂದ ಕೇವಲ ಅದೇ ಸಮಯಕ್ಕೆ ಮಲಯಕೇತು ರಾಜನು ಆ ಕೋಣೆಯನ್ನು ಪ್ರವೇಶಿಸಿದನು; ಹಾಗೂ ಚಂದ್ರಗುಪ್ತನ ಶಯ್ಯಾಪಾರ್ಶ್ವದಲ್ಲಿ ಕುಳಿತು:—ಕುಮಾರ, ಭೇಟಿಯಾಗಬೇಕೆಂದು ಉತ್ಸುಕನಾಗಿರುವಿಯಷ್ಟೇ? ಇಗೋ ನಾನಿಲ್ಲಿ ಕುಳಿತಿರುವೆನ್ನು, ಎಂದಂದನು

ಆಗ ಚಂದ್ರಗುಪ್ತನಿಗೆ ಪರಮ ಹರ್ಷವಾಗಲು, ಆತನು ಎದ್ದು ಕುಳಿತು ಅವನೊಡನೆ ಮಾತಾಡಬೇಕೆಂದು ಹಾಸಿಗೆಯಿಂದ ಎದ್ದೇಳಲು ಹವಣಿಸಿದನು; ಆದರೆ ಮಲಯಕೇತುವು ಅವನನ್ನು ನಿಷೇಧಿಸಿ:- ಕುಮಾರ ನೀನು ಈಗ ಯಮದಂಷ್ಟ್ರದಿಂದ ಪಾರಾಗಿದ್ದರೂ ಇಷ್ಟು ಬೇಗನೆ ಹಾಸಿಗೆ ಬಿಟ್ಟೇಳುವಷ್ಟು ಶಕ್ತಿಪೂರ್ಣನಾಗಿರುದಿಲ್ಲ. ಆದುದರಿಂದ ಸ್ವಲ್ಪವೂ ಸಂಕೋಚಪಡದೆ, ನನಗೆ ಏನನ್ನು ತಿಳಿಸಬೇಕೆಂದಿರುವಿಯೋ, ಅದನ್ನೆಲ್ಲ ನೀನು ಈ ಹಾಸಿಗೆಯ ಮೇಲೆ ಪವಡಿಸಿಯೇ ತಿಳಿಸು. ನೀನು ಈಗ ಈ

ಪರ್ವತ ರಾಜ್ಯದ ಆಶ್ರಿತ ಪ್ರಜೆಯಾಗಿರುವದರಿಂದ, ಕುಲಕಂಟಕನಾದ ಧನ ನಂದನ ಇಲ್ಲವೆ ಕಪಟ ಪಟುವಾದ ಅತನ ಅಮಾತ್ಯನ ಆಟವು ಇಲ್ಲಿ ಕೊಂಚವೂ ನಿನ್ನ ಮೇಲೆ ನಡೆಯಲಿಕ್ಕಿಲ್ಲ.

ವಿಸ್ಮಯಪೂರ್ಣ ಹೃದಯದಿಂದ ಚಂದ್ರಗುಪ್ತ :— ಮಲಯಕೇತು ರಾಜನೇ, ನಿನ್ನ ನುಡಿಗಳಿಂದ ನಂದರಾಜನೇ ನನ್ನನ್ನು ಈ ವಿಪತ್ತಿಗೆ ಗುರಿ ಮಾಡಿರುವನೆಂದು ಭಾಸವಾಗುತ್ತದೆ; ಆದರೆ ನಮ್ಮಣ್ಣನಾದ ನಂದ ಚಕ್ರವರ್ತಿ ಸಾರ್ವಭೌಮನು, ನನ್ನಂತಹ ಕ್ಷುದ್ರನನ್ನು ಈ ಗತಿ ಗೊಳಿಸಿರುವದು ಸತ್ಯವಾದರೂ ಇದ್ದೀತೇ?

ಮಲಯ ಕೇತುವು ಪಿಟ್ಟೆಂದುಸುರದೆ, ಕೂಡಲೆ ಅಲ್ಲಿಂದೆದ್ದು ಆ ದಿವಾಣಖಾನೆಯ ಬೇರೆ ಭಾಗದಲ್ಲಿ ತಾನು ಈ ಮೊದಲು ಬಚ್ಚಿಟ್ಟಿದ್ದ ಆ ವಿಷಾಕ್ತ ಬಾಣದ ಅಲಗನ್ನು ತಂದು ಕುಮಾರನ ಎದುರಿಗೆ ಹಿಡಿದು:——ಚಂದ್ರಗುಪ್ತಾ, ಈ ಬಾಣವು ಯಾವ ದೇಶದ ಸೈನಿಕರದು?

ಕುಮಾರನು ಅದನ್ನು ಕೈಯಲ್ಲಿ ತಕ್ಕೊಂಡು ಹೊರಳಿಸಿ-ಹೊರಳಿಸಿ ನೋಡಿ, ಅದರ ಮೇಲಿರುವ ಗುರ್ತದಿಂದ:-- ಇದು ಮಗಧ ದೇಶದ ಸೈನಿಕರದೆಂದೇ ತೋರುತ್ತಿದೆ

ಹಾಗಾದರೆ ಈಗಲಾದರೂ ನಿಮ್ಮಣ್ಣನ ದುಷ್ಟ ಉದ್ದೇಶದ ಬಗ್ಗೆ ನಿನ್ನ ಮನವರಿಕೆಯಾಯಿತೇ?

ಮನದಟ್ಟಾಯಿತು; ಆದರೆ ಈ ಬಾಣ ನಿಮಗೆಲ್ಲಿ ದೊರೆಕಿತು?

ತಮ್ಮ ಈ ವಿಶಾಲ ಬಾಹುಪ್ರದೇಶದಲ್ಲಿ ಬುಡಮುಟ ನೆಟ್ಟಿದ್ದ ಬಾಣವೇ ಇದು!

ಈ ಬಾಣವನ್ನು ಯಾರು ಎಸೆದರೋ ಅವರನ್ನು ನೀವು ಕಣ್ಣುಟ್ಟ ಕಂಡಿರುವಿರೋ?

ನಾನು ಅವರನ್ನು ಸ್ವಂತ-ಕಣ್ಮುಟ್ಟ-ಕಂಡಿಲ್ಲವೆಂಬದು ನಿಜವಾಗಿದ್ದರೂ, ನಮ್ಮ ಸೈನಿಕರೂ ನನ್ನ ಪ್ರಿಯ ಭಗಿನಿಯೂ ಅವರನ್ನು ಕಣ್ಣಾರೆ ನೋಡಿರುತ್ತಾರೆ; ಇಷ್ಟೇ ಅಲ್ಲ, ಅವರೊಳಗಿನ ಕೆಲ ಜನರನ್ನು ಅಲ್ಲಿಂದಲ್ಲೇ ಕೊಂದು, ಉಳಿದ ೩-೪ ಜನರನ್ನು ಸೆರೆ ಹಿಡಿದು ಇಲ್ಲಿಗೆ ತಂದಿರುವರು.

o o o o o

ಚಂದ್ರಗುಪ್ತನ ಗಾಯವು ಮಾಯಹತ್ತಲು, ರಾಹುಮುಕ್ತ ಚಂದ್ರನಂತೆ ಆತನು ದಿನ ದಿನಕ್ಕೆ ತೇಜಃಪುಂಜನಾಗಿ ತೋರಹತ್ತಿದನು. ಮಂದಾ

ಕಿನಿಯ ಶುಶ್ರೂಷೆಗೂ ಮಲಯಕೇತುವಿನ ಸ್ನೇಹಮಯ ಆತಿಥ್ಯಕ್ಕೂ ದೇವರು ಒಲಿದು ಶ್ರೇಯಸ್ಸನ್ನುಂಟು ಮಾಡಿದನು ಚಂದ್ರಗುಪ್ತ ಹಾಗು ಮಂದಾಕಿನಿಯರಲ್ಲಿಯ ಮೊದಲಿನ ಪರಕೀಯ ಭಾವವು ಸಂಪೂರ್ಣವಾಗಿ ಅಳಿದು ಹೋಯಿತು; ಒಂದೇ ಕುಟುಂಬದವರಂತೆ ಅವರು ಬೇಕಾದಾಗ ಬೇಕಾದಲ್ಲಿ ಸಂಕೋಚರಹಿತರಾಗಿ ವಿಹರಿಸುತ್ತಿದ್ದರು. ಒಂದು ದಿನ ಅವರೀರ್ವರೂ ಒಂದು ಪರ್ವತದಡಿಯ ವಿಶಾಲವಾದ ತಪ್ಪಲುಪ್ರದೇಶದಲ್ಲಿ ವಿಹರಿಸುತ್ತಿರುವಾಗ ಚಂದ್ರಗುಪ್ತನು ಮಂದಾಕಿನಿಯನ್ನು ಕುರಿತು:— ಪ್ರಿಯ ಭಗಿನೀ ಸಮಾನಳಾದ ಮಂದಾಕಿನೀ, ನೀನು ತಾಯಿಗಿಂತಲೂ ಹೆಚ್ಚು ಕಾಳಜಿಯಿಂದ ಶುಶ್ರೂಷೆ ಮಾಡಿ ನನ್ನನ್ನು ಆ ವಿಪತ್ತಿನಿಂದ ಪಾರು ಗಾಣಿಸಿರುತ್ತೀ; ದೇವರು ನಿನ್ನಂಥ ಸ್ನೆಹಮಯಳ ಸಹಾಯವನ್ನು ನನಗೆ ಒದಗಿಸಿ ಕೊಡದಿದ್ದರೆ, ನಾನು ಅಂದೇ—ಆ ದಾರುಣವಾದ ಗಾಯವಾದ ದಿನವೇ—ಪರಲೋಕದ ದಾರಿಹಿಡಿಯುತ್ತಿದ್ದೆನು; ಆದರೆ ನಿನ್ನ ಹಾಗು ನಿಮ್ಮಣ್ಣನ ಸಹಾನುಭೂತಿಯ ಮೂಲಕ ನಾನು ಇನ್ನೂ ಬದುಕಿರುವೆನು ನಿಮ್ಮ ಈ ಉಪಕಾರವನ್ನು ನಾನು ಎಂದೂ ಮರೆಯುವಂತಿರುವದಿಲ್ಲ. ಮಂದಾಕಿನೀ, ನಾನು ನಿಮ್ಮಲ್ಲಿ ಇರಲಿಕ್ಕೆ ಹತ್ತಿ ಬಹು ದಿನಗಳಾದವು ಇನ್ನು ನನಗೆ ಇಲ್ಲಿಂದ ಹೊರಡಲು ಅಪ್ಪಣೆ ಕೊಡಿರಿ, ಎಂದು ಕೇಳಿದನು.

ಚಂದ್ರಗುಪ್ತನ ಈ ಮೇಲೆ ವಿವರಿಸಿದ ಕಡೆಯ ವಾಕ್ಯವನ್ನು ಕೇಳಿ, ಅರಳಿದ ಕಮಲದಂಥ ಮಂದಾಕಿನಿಯ ಉಜ್ವಲ ಮುಖಕಮಲವು ಕೇತು ಗ್ರಸ್ತವಾದ ಸೂರ್ಯಬಿಂಬದಂತೆ ಒಮ್ಮೆಲೇ ಮಲಿನವಾಗಿ ತೋರತೊಡ ಗಿತು. ಅವಳು ಒಂದು ನಿಟ್ಟುಸಿರುಗರೆದು:—ಕುಮಾರ, ಈಗ ತಾವು ಹೊರ ಡುವದೆಲ್ಲಿಗೆ?

ಚಂದ್ರಗುಪ್ತ:—ಮಂದಾಕಿನಿ, ಎಲ್ಲಿಗೆಂದರೆ ಏನು ಹೇಳಲಿ? ದಯಾ ಘನನಾದ ಭಗವಂತನ ಹದಿನಾಲ್ಕು ಲೋಕಗಳಂದ ಯುಕ್ತವಾದ ರಾಜ್ಯ ದಲ್ಲಿ ಈ ದೀನನಿಗೆ ಒಂದಿಷ್ಟು ಆಶ್ರಯಸ್ಥಾನವೂ ದೊರೆಯಲಿಕ್ಕಿಲ್ಲೇನು? ಒಂದುವೇಳೆ ಎಲ್ಲಿಯೂ ನನಗೆ ತಕ್ಕದ್ದಾದ ಆಶ್ರಯಸ್ಥಾನವು ಸಿಗದಿದ್ದರೆ, ನಾನು ಪುನಃ ನಿಮ್ಮಲ್ಲಿಗೇ ಹಿಂದಿರುಗಿ ಬರುತ್ತೇನೆ

ಈ ಮಾತನ್ನು ಕೇಳಿಯಂತೂ ಮಂದಾಕಿನಿಯು ಗಟ್ಟಿಯಾಗಿ ಅಳ ಹತ್ತಿದಳು. ಬಳಿಕ ಕೆಲಹೊತ್ತಿನ ಮೇಲೆ ಅವಳು:—ಕುಮಾರ, ನೀವು ನಮ್ಮನ್ನು ತ್ಯಜಿಸಬೇಡಿರಿ. ನೀವು ನಮ್ಮ ಸ್ನೇಹವನ್ನು ವಿಚ್ಛಿನ್ನ ಮಾಡಿ ಹೋಗಲು, ನಿಮಗೆ ಅಂಥ ಯಾವ ದುರ್ಘಟಪ್ರಸಂಗವು ಪ್ರಾಪ್ತವಾಗಿದೆ?

ನೀವು ಮಗಧರಾಜ್ಯದ ರಾಜಪ್ರಾಸಾದಕ್ಕೆ ಇನ್ನು ಎಂದೆಂದೂ ಹೋಗಲಾರಿರೆಂದು ನಮ್ಮ ತರ್ಕವಿದೆ. ಪ್ರವಾಸದ ಕಷ್ಟಗಳ ಪರಿಜ್ಞಾನವು ನಿಮಗೆ ಚೆನ್ನಾಗಿ ಆಗಿರುವದಿಲ್ಲ. ಆದುದರಿಂದ ಕುಮಾರ, ನೀವು ನಿಮ್ಮ ಆ ಬೇತನ್ನು ರಹಿತ ಮಾಡಿ, ಇಲ್ಲಿಯೇ ಸ್ವಸ್ಥವಾಗಿರ್ರಿ. ನಿಮಗೆ ಆಶ್ರಯಕೊಟ್ಟದ್ದಕ್ಕಾಗಿಯೂ, ಮಾಗಧೀಸೈನಿಕರಲ್ಲಿ ಕೆಲವರನ್ನು ಯಮಸದನಕ್ಕಟ್ಟಿ, ಉಳಿದವರನ್ನು ಸೆರೆಯಿರಿಸಿರುವದಕ್ಕಾಗಿಯೂ ನಂದ ಮಹಾರಾಜನು ಇಂದಿಲ್ಲ ನಾಳೆ-ಶೀಘ್ರವಾಗಿಯೇ ನಮ್ಮ ರಾಷ್ಟ್ರದ ಮೇಲೆ ದಂಡೆತ್ತಿ ಬರತಕ್ಕವನಿದ್ದಾನೆ ಆತನ ಕೋಟ್ಯವಧಿ ಸುಶಿಕ್ಷಿತ ಮತ್ತು ಸಶಸ್ತ್ರ ಸೈನ್ಯದ ಮುಂದೆ ನಮ್ಮ ಹಳೇ ಪದ್ಧತಿಯ ಸಹಸ್ರಾರು ಜವ ಶಸ್ತ್ರಧಾರಿಗಳಿಂದ ಆಗುವದೇನು? ಆದರೆ ಕುಮಾರ, ಚಂದ್ರಗುಪ್ತ, ನಾವು ಆ ಒಣಹೆಮ್ಮೆಯ ಸಾರ್ವಭೌಮನಿಗೆ ಎಂದೂ ಶರಣುಹೋಗಲಿಕ್ಕಿಲ್ಲ. ನಮ್ಮ ಪರ್ವತರಾಜ್ಯದಲ್ಲಿ ಒಬ್ಬ ಮನುಷ್ಯನಾದರೂ-ಗಂಡಸೇ ಆಗಲಿ, ಹೆಂಗಸೇ ಆಗಲಿ-ಜೀವದಿಂದಿರುವ ವರೆಗೆ ನಾವು ಆತನೊಡನೆ ಒಂದೇಸವನೆ ಕಾದತಕ್ಕವರು. ಅಂಥ ಪ್ರಸಂಗದಲ್ಲಿ ನಿಮ್ಮಂಥ ವೀರರೂ, ಸಾಹಸಿಗಳೂ, ಮಾಗಧೀಸೈನಿಕರ ಯುದ್ಧಕಲಾ ಕೌಶಲ್ಯದ ಇಂಗಿತವನ್ನು ಬಲ್ಲವರೂ ಆದ ಯೋದ್ಧರು ನಮ್ಮ ಸಹಾಯಕ್ಕಿದ್ದರೆ, ನಂದನ ಸೈನ್ಯವು ನಮ್ಮ ರಾಜ್ಯದ ಗಡಿಯನ್ನು ಸೇರುವಷ್ಟರಲ್ಲಿಯೇ ಅನೇಕ ಬಗೆಯ ಯುಕ್ತಿ-ಪ್ರಯುಕ್ತಿಗಳಿಂದ ನಾವು ಅದನ್ನು ಹಣ್ಣಿಗೆ ತರದೆ ಬಿಡಲಿಕ್ಕಿಲ್ಲ. ನಂದರಾಜನ ಮನಸ್ಸಿನಲ್ಲಿ ನಮ್ಮ ಈ ಪುಟ್ಟ ಸರ್ವ ತಂತ್ರ ಸ್ವತಂತ್ರ ರಾಜ್ಯವನ್ನು ನುಂಗಿ ನೀರು ಕುಡಿಯಲೇಬೇಕೆಂದು ಬಹಳ ದಿವಸಗಳಿಂದ ಇರುತ್ತದೆ. ಹಿಂದಕ್ಕೊಮ್ಮೆ ಆತನು ನಮ್ಮ ಮೇಲೆ ದಾಳಿ ಮಾಡಲುಪಕ್ರಮಿಸಿದ್ದನು; ಆದರೆ ವಿಸ್ತಾರವಾದ ಆತನ ರಾಜ್ಯದ ದೂರ ಪ್ರದೇಶದಲ್ಲಿ ದಂಗೆ-ದಬ್ಬಾಳಿಕೆಗಳೆದ್ದದರಿಂದಲೂ ನಮ್ಮ ಶೂರ ಸೈನಿಕರು ಅವನ ಸೈನ್ಯಕ್ಕೆ ಹಣ್ಣುಗಾಯಿ-ನೀರಗಾಯಿಗಳನ್ನು ತಿನ್ನಹಚ್ಚಿದ್ದರಿಂದಲೂ ಆಗ ಅವನು ನಮ್ಮ ಮೇಲೆ ಮುಂದರಿದು ಬರದೆ, ನಮ್ಮ ಸ್ವಾಧೀನತೆಯನ್ನೇ ಒಪ್ಪಿ, ನಮ್ಮೊಡನೆ ಒಡಂಬಡಿಕೆ ಮಾಡಿಕೊಂಡನು. ಈಗ ಆತನು ನಿಮ್ಮನ್ನು ನಮ್ಮ ದೇಶದ ಗಡಿಯಲ್ಲಿ ಬೇಕಂತ ಸಾಯಗೊಳಿಸಿ, ತನ್ನ ಒಂದೇಗುರಿಯಿಂದ ಎರಡು ಬೇಟೆಗಳನ್ನು ಕೆಡವಲು ಪ್ರಯತ್ನಿಸಿರುವನು. ಆತನ ರಾಜ್ಯಕ್ಕೆ ಇಂದಿಲ್ಲ ನಾಳೆ ಅಧಿಕಾರವನ್ನು ತೋರಿಸುವ ನಿಮ್ಮನ್ನು ಇಲ್ಲದಂತೆ ಮಾಡುವದು ಅವನ ಮೊದಲನೆಯ ಪ್ರಯತ್ನವು. ಮಗಧ ರಾಜ್ಯದ ಯುವರಾಜನು ಪರ್ವತರಾಜ್ಯದ ಪ್ರಜೆ

ಗಳಿಂದ ಸಂಹರಿಸಲ್ಪಟ್ಟೆನೆಂಬ ಸೇವ ಮಾಡಿ, ನನ್ನೊಡನೆ ಕಾಲು ಕೆದರಿ ನ್ಯಾಯ ತೆಗೆಯುವದು ಅವನ ಎರಡನೆಯ ಹವಣಿಕೆಯಾಗಿರುವದು. ಈ ಎಲ್ಲ ಕಾರಣಗಳ ಮೂಲಕ ಕುಮಾರ, ನೀವು ಈಗ ಇಲ್ಲಿಂದ ಹೊರಡಬಾರ ದೆಂದು ನಾನು ನಿಮ್ಮನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ, ಎಂದಳು.

ಮಲಯಕೇತುವಾದರೂ ಚಂದ್ರಗುಪ್ತನಿಗೆ ಇದೇ ಪ್ರಕಾರದ ಸಲಹೆ ಯನ್ನು ಕೊಟ್ಟು, ಅವನು ತನ್ನ ರಾಜ್ಯದಲ್ಲಿಯೇ ಇರುವಂತೆ ಮಾಡಿದನು. ಇತ್ತೀಚೆಗೆ ಚಂದ್ರಗುಪ್ತನು ಪರ್ವತ ರಾಜ್ಯದ ಎಲ್ಲ ಆಯಕಟ್ಟಿನ ಸ್ಥಳ ಗಳನ್ನು ನೋಡಿ ಬರುವದರಲ್ಲಿಯೂ, ದಂಡಿನವರ ಶಿಕ್ಷಣದ ವ್ಯವಸ್ಥೆ ಮಾಡುವದರಲ್ಲಿಯೂ ನಿಮಗ್ನನಾಗಿರುತ್ತಿದ್ದನು. ಅವರ ಊಹೆಯಂತೆ ಸ್ವಲ್ಪ ದಿನಗಳಲ್ಲಿಯೇ ಮಗಧೇಶ್ವರನು ಪರ್ವತರಾಜನ ಮೇಲೆ ದಂಡೆತ್ತಿ ಬರುವದು ನಿಶ್ಚಿತವಾಯಿತು! ಈ ಸುದ್ದಿಯನ್ನು ಕೇಳಿ ಮಲಯಕೇತು-ಮಂದಾಕಿನಿಯರಿಗೆ ಒಂದು ಬಗೆಯ ಸ್ಫೂರ್ತಿಯೇ ಉಂಟಾಯಿತು; ಆದರೆ ಚಂದ್ರಗುಪ್ತನಿಗೆ ಮಾತ್ರ ಆ ವಾರ್ತಾಶ್ರವಣದಿಂದ ಅಂತರಂಗದಲ್ಲಿ ಬಲು ಕಷ್ಟವಾಯಿತು. ಪಾಪ! ಈ ಒಡ ಸರ್ವ ತಂತ್ರ ಸ್ವತಂತ್ರ ಪರ್ವತ ರಾಜ್ಯಕ್ಕುಂಟಾಗುತ್ತಿರುವ ನಾಶಕ್ಕೆ ನಾನೇ ಕಾರಣನಾದೆನಲ್ಲವೇ? ಎಂದು ಅವನು ತನ್ನ ಮನದಲ್ಲಿ ಒಂದೇಸವನೆ ಮಿಡುಕುತ್ತಿದ್ದನು. ಪ್ರಚಂಡ ಮಾಗಧೀ ಸೈನ್ಯಕ್ಕೆ ಎದುರಾಗಿ ಯುದ್ಧ ಮಾಡುವದರಿಂದ ಈ ಪಾರ್ವತ್ಯರ ಸೈನ್ಯಕ್ಕೆ ಎಂದೂ ಜಯ ದೊರೆಕದೆಂದೂ, ಒಂದಿಲ್ಲೊಂದು ಯುಕ್ತಿಯಿಂದ ಆ ಮದಗ್ರಸ್ತ ನಂದನ ಸೈನ್ಯವನ್ನು ಇಕ್ಕಟ್ಟಿನಲ್ಲಿ ಕೆಡಹಿ, ಜಯ ಸಂಪಾದಿಸ ಬೇಕೆಂದೂ ನಿಶ್ಚಯಿಸಿ, ಅವನು ಆ ಪ್ರಕಾರದ ಉದ್ಯೋಗದಲ್ಲಿ ತೊಡಗಿ, ತನ್ನ ಮನಸ್ಸಿಗೆ ತುಸ ಶಾಂತಿಯನ್ನು ತಂದುಕೊಂಡನು.

## ಶಕಟಾರನ ಪರಿತ್ಯಕ್ತ ಪತ್ನಿ—ಲಲಿತೆ

....................

ಕುಮಾರ ಚಂದ್ರಗುಪ್ತನು ಪರ್ವತರಾಜ್ಯದ ಸೈನ್ಯದ ಸಿದ್ಧತೆಯಲ್ಲಿಯೇ ತೊಡಗಿರುವದರಿಂದ, ವಾಚಕರೇ, ನಾವಿನ್ನು ಬೇರೊಂದು ವಿಚಿತ್ರ ಪ್ರಸಂಗ ವನ್ನು ನೋಡ ಹೋಗಲು ಸಿದ್ಧರಾಗಿರುವೆವು. ಬನ್ನಿರಿ. ನೀವೂ ನಮ್ಮೊ ಡನೆ ಬಂದರೆ, ಆ ಪ್ರಸಂಗದ ಅವಲೋಕನದಿಂದ ನಿಮಗೆ ಈ ಕಂಕಣ ಚೋರದ ಗಭೀರತೆಯು ಚೆನ್ನಾಗಿ ವ್ಯಕ್ತವಾಗದೆ ಇರದು.

ಮಧ್ಯರಾತ್ರಿಯು ಸಂದಿಹೋಗಿದೆ. ಅರಣ್ಯಮಧ್ಯದೊಳಗಿನ ಗಂಗಾ ತೀರದ ಒಂದು ಮುರುಕ ಜನಶೂನ್ಯ ಶಿವಾಲಯದಲ್ಲಿ ಎರಡು ವ್ಯಕ್ತಿಗಳು

ಚಂದ್ರಪಾಲ, ಆ ರಾಜರೋಷಕ್ಕೆ ನೀನೆಂದೂ ಗುರಿಯಾಗಬೇಕಾದ ವಿಲ್ಲ- ನೀನು ಯಾವ ವಚನವನ್ನು ಕೊಟ್ಟಿರುವೆಯೋ, ಅದನ್ನಷ್ಟು ಪಾಲಿಸು. ನೀನು ನನಗೆ ಅದಕ್ಕಿಂತ ರವಷ್ಟು ಕೂಡ ಹೆಚ್ಚು ಸಹಾಯ ಮಾಡಬೇಕಾದುದಿಲ್ಲ. ಉಳಿದ ಕೆಲಸಗಳನ್ನೆಲ್ಲ ನನ್ನವು ನಾನೇ ಮಾಡಿಕೊಳ್ಳುತ್ತೇನೆ.

ನೀನು ಅಷ್ಟು ಶಕ್ತಳಾಗಿರುವಿಯಾ?

ಚಂದ್ರಪಾಲಾ, ಹೆಂಗಸರ ಶಕ್ತಿಯ ಅನುಭವವು ನಿನಗೆ ಗೊತ್ತಿದ್ದಂತೆ ಕಂಡು ಬರುವದಿಲ್ಲ. ಸ್ತ್ರೀಯರಿಗೆ ಶಕ್ತಿದೇವತೆಯೆಂಬ ಹೆಸರು ಬರಲಿಕ್ಕೆ ಕಾರಣವೇನೆಂಬದನ್ನು ಆಲೋಚಿಸು.

ಎಲ್ಲ ಹೆಂಗಸರೂ ಶಕ್ತಿವಂತರಾಗಿರುತ್ತಾರೇನು?

ಈಗ ನಾನು ಅದನ್ನು ವಿವರಿಸಲಿಚ್ಛಿಸುದದಿಲ್ಲ. ನನ್ನಲ್ಲಿಯ ಶಕ್ತಿಯನ್ನು ನಾನು ನನ್ನ ಕರ್ಮಕ್ಷೇತ್ರದಲ್ಲಿ ನಿನಗೆ ತೋರಿಸದೆ ಇರೆನು.

ತಂಗೀ, ಲಲಿತಾ, ನಿನಗೆ ಇನ್ನೊಂದು ಸಂಗತಿಯನ್ನು ತಿಳಿಸುವೆನು ನಾನು ಕೈಕೊಂಡಿರುವ ರಾಜಚಾಕರಿಯು ಬಹು ಸುಖಸಂಪತ್ತಿನದು. ನಿನ್ನ ಅಂಜಿಕೆಯಂತೆ ನಾನು ನಿನ್ನ ಆ ಭಯಾನಕ ಕೆಲಸದಲ್ಲಿ ತೊಡಗಿದರೆ, ತುಸ ದಿನಗಳಲ್ಲಿ ನಾನೀ ಕೆಲಸಕ್ಕೆ ಶರಣು ಹೊಡೆಯಬೇಕಾದೀತು. ಹಾಗೂ ಕಡೆಗೆ ಅತೋಭ್ರಷ್ಟ-ತತೋಭ್ರಷ್ಟನಾಗಿ ದೇಶ-ದೇಶ ತಿರುಗಬೇಕಾದೀತು!

ಒಂದುವೇಳೆ ನಿನಗೆ ಆ ಚಾಕರಿ ಬಿಡುವ ಪ್ರಸಂಗ ಬಂದರೂ ನೀನು ಕಂಡಕಂಡಲ್ಲಿ ಅಂಡಲೆಯುವ ಕಾರಣವೇನು?

ನನ್ನ ಸಂಸಾರವು ದೊಡ್ಡದು. ಅದರ ಪಾಲನ-ಪೋಷಣಕ್ಕಾಗಿ ನಾನು ಏನೊಂದು ಉದ್ಯೋಗವನ್ನು ಮಾಡಲೇಬೇಕಲ್ಲವೇ? ನನ್ನಹೊರತು ನಮ್ಮವರ ಉದರನಿರ್ವಾಹವನ್ನು ಸಾಗಿಸುವವರು ಯಾರೂ ಇಲ್ಲ.

ಈಗಿದ್ದ ನೌಕರಿಯನ್ನು ಸಾಯುವ ವರೆಗೆ ಮಾಡಿ, ನೀನು ಎಷ್ಟು ಹಣ ಸಂಪಾದಿಸಬಹುದೋ, ಅದರ ೨೦ ರಷ್ಟು ಹೆಚ್ಚು ಧನವನ್ನು ನಾನು ಈಗಲೆ ನಿನ್ನ ಸ್ವಾಧೀನಪಡಿಸಲು ಸಿದ್ಧಳಿರುತ್ತೇನೆ.

ನೀನು ಕೊಡತಕ್ಕ ಹಣವಾದರೂ ಎಷ್ಟು? ಎಂಬದನ್ನು ಒಮ್ಮೆ ನನಗೆ ಸ್ಪಷ್ಟವಾಗಿ ತಿಳಿಸುವೆಯಾ?

ಇಪ್ಪತ್ತುಸಾವಿರ ಬಂಗಾರದ ನಾಣ್ಯಗಳು

ಇಷ್ಟು ಧನವನ್ನು ನೀನೇ ಕೊಡುವಿಯಾ? ಇದು ತೀರ ಅಸಂಭವ!

ನಿಶ್ಚಯವಾಗಿ ಕೊಡುವೆನು ನನ್ನ ಮಾತಿನಲ್ಲಿ ಯತ್ಕಿಂಚಿತ್ತೂ

ವ್ಯತ್ಯಯವಾಗಲಾರದು.

ಅದಕ್ಕೆ ಪ್ರಮಾಣವೇನು?

ಇಗೋ, ಇದನ್ನು ನೋಡು, ಎಂದು ಲಲಿತೆಯು ಒಂದು ತಾಮ್ರಪಟವನ್ನು ಅವನ ಕೈಗಿತ್ತಳು. ಕೂಡಲೆ ಚಂದ್ರಪಾಲನು ಅದನ್ನು ತಕ್ಕೊಂಡು ಆ ಮಂದಿರದೊಳಗಣ ದೀಪದ ಬಳಿಗೆ ಹೋದನು; ಹಾಗೂ ಆ ದೀಪವನ್ನು ತುಸು ಚಾಚಿ, ಆ ಪಟವನ್ನು ಓದಿ ವಿಸ್ಮಯಗೊಂಡು:— ತಂಗೀ, ನೀನು ಈ ಪತ್ರವನ್ನು ಎಲ್ಲಿ ದೊರೆಕಿಸಿದೆ?

ಲಲಿತೆ:—ಇದನ್ನು ನಾನು ಎಲ್ಲಿಂದಲೇ ದೊರೆಕಿಸಿರಲೊಲ್ಲೆನೇಕೆ; ಆದರ ಗೊಡವೆ ನಿನಗೇಕೆ? ನಿನಗೆ ಸಿಗಬಹುದಾದ ದ್ರವ್ಯವನ್ನು ಸಂಪಾದಿಸಿ ನೀನು ಸಂತುಷ್ಟನಾಗು. ಇದರ ಹೊರತು ಮತ್ತೇನಾದರೂ ನಿನ್ನ ಇಚ್ಛೆಯಿದ್ದರೆ ತಿಳಿಸು. ಅದನ್ನೂ ಪೂರೈಸುವೆನು.

ಚಂದ್ರಪಾಲ:—ತಂಗೀ, ಈ ತಾಮ್ರ ಪಟವನ್ನು ಓದಿ ನೋಡಲು, ಆ ಸ್ಥಳದಲ್ಲಿ ಅರ್ಧ ಲಕ್ಷ ಸ್ವರ್ಣಮುದ್ರೆಗಳಿರುವಂತೆ ಗೊತ್ತಾಗುತ್ತದೆ.

ನಿನ್ನ ಅನುಮಾನವು ಸುಳ್ಳಲ್ಲ

ಆದರೆ ತಂಗೀ, ಆ ಹೂಳಿಟ್ಟ ಗುಪ್ತಧನವು ರಾಜ ಸ್ವತ್ತಿನದು.

ರಾಜನ ಸ್ವತ್ತಿನದಾದರೆ ನಿನಗಾಗುವ ಪ್ರಯೋಜನವೇನು?

ನಿನ್ನ ಕಾರ್ಯವ ಕೈಕೊಂಡು ತೊಳಲುವದಕ್ಕಿಂತ, ಈ ಸ್ವರ್ಣಮುದ್ರೆಯ ಸಂಗತಿಯನ್ನು ನಂದರಾಜನಿಗೆ ತಿಳಿಸಿದರೆ, ಅವನಿಂದ ನನಗೆಷ್ಟೋ ಮುದ್ರೆಗಳು ಪಾರಿತೋಷಕವೆಂದು ಕೊಡಲ್ಪಡುವವು; ಅಲ್ಲದೆ ನನ್ನ ಈ ಚಾಕರಿಯೂ ನಿರ್ಬಾಧವಾಗಿ ನಡೆಯುವದು.

ಕೂಡಲೆ ಲಲಿತೆಯು ಗದ್ದರಿಸಿ:—ಅಣ್ಣಾ ಚಂದ್ರಪಾಲಾ, ನಿನಗೆ ಭ್ರಾಂತಿಯಾದಂತೆ ಕಾಣುತ್ತದೆ; ನೀನು ಕಪಟ ಹೃದಯದವನೆಂದೆನಿಸುತ್ತದೆ. ವಚನಭ್ರಷ್ಟಾ, ನಿನಗೆ ನಂದನ ಸ್ವಭಾವದ ಪರಿಚಯವು ಚೆನ್ನಾಗಿ ಇದ್ದಂತೆ ಕಾಣುವದಿಲ್ಲ. ಅರಸನ ಸ್ವತ್ತಿನ ದ್ರವ್ಯದಲ್ಲಿ ನೀನು ಪಾರಿತೋಷಕದ ಆಶೆಪಟ್ಟದ್ದು ಅವನಿಗೆ ತಿಳಿದರೆ, ಅವನು ನಿನ್ನನ್ನು ಶೂಲಕ್ಕೇರಿಸದೆ ಬಿಡಲಾರನು.

ಅದೇಕೆ?

ಲಲಿತೆ:—ಚಂದ್ರಪಾಲಾ, ಕೊಟ್ಟ ವಚನದಂತೆ ನೀನು ನನಗೆ ಬೇಗನೆ ಸಹಾಯ ಮಾಡದಿದ್ದರೆ, ನಾನು ರಾಜನಿಗೆ ಏನಾದರೊಂದು ಹೇಳಿ ನಿನ್ನ ನಾಶಕ್ಕೆ ಕಾರಣಳಾಗದೆ ಬಿಡೆನು. ಇದೋ, ಈಗ ಈ ಸ್ವರ್ಣಮುದ್ರೆ

ಗಳ ಸಂಗತಿಯನ್ನೇ ತೆಗೆದುಕೋ, ನೀನು ರಾಜನಿಗೆ ಅರ್ಧ ಲಕ್ಷ ಸ್ವರ್ಣ ಮುದ್ರೆಗಳು ಇಂಥ-ಇಂಥಲ್ಲಿ ಇರುವವೆಂದು ಹೇಳಿದರೆ, ನಾನು ಅಲ್ಲಿ ಒಂದು ಕೋಟಿ ಮುದ್ರೆಗಳಿದ್ದವೆಂದೂ, ಚಂದ್ರಪಾಲನು ಮಿಕ್ಕ ಎಲ್ಲ ದ್ರವ್ಯವನ್ನು ಅಪಹರಿಸಿಕೊಂಡು ಅರ್ಧ ಲಕ್ಷ ಮುದ್ರೆಗಳು ಮಾತ್ರ ಇರುವವೆಂದು ಸುಳ್ಳು ಹೇಳುವನೆಂದೂ ತಿಳಿಸುವೆನು. ಇದರಿಂದ ಮದಾಂಧನೂ, ಕ್ಷುಬ್ಧಚಿತ್ತನೂ ಆದ ನಂದನು ಯಾವದನ್ನೂ ವಿಚಾರಿಸದೆ, ನಿನ್ನನ್ನು ಗತಿಗಾಣಿಸದೆ ಬಿಡಲಾರನು.

ತಂಗೀ, ನಿನ್ನ ಮನಸ್ಸಿನ ಒಲವನ್ನು ತಿಳಕೊಳ್ಳುವ ಸಲುವಾಗಿ ನಾನು ನಿನಗೆ ಇದು ವರೆಗೆ ಇಲ್ಲದ್ದೊಂದು ಹೇಳಿದೆನು: ಆದರೆ ತಂಗೀ ಲಲಿತಾ, ನೀನು ಅದನ್ನೆಲ್ಲ ಸತ್ಯವೆಂದು ತಿಳಿಯಬೇಡ. ನಾನು ನಿನ್ನಿಷ್ಟ ಕಾರ್ಯವು ಶೀಘ್ರವಾಗಿ ಜರಗುವಂತೆ ಸಹಾಯ ಮಾಡುವೆನು; ಆದರೆ ಈಗ ನನ್ನ ಮನದಲ್ಲಿ ಒಂದು ಕುತೂಹಲವುಂಟಾಗಿದೆ

ಅದಾವ ಕುತೂಹಲವಪ್ಪಾ?

ನಾನು ಆ ನೆಲಮನೆಯೊಳಗಿನ ದ್ರವ್ಯವನ್ನು ಒಮ್ಮೆ ಕಣ್ಮುಟ್ಟ ನೋಡಬೇಕೆಂದು.

ಅದನ್ನು ತೋರಿಸಲಿಕ್ಕೆ ನಾನು ಸಿದ್ಧಳಿರುತ್ತೇನೆ; ಆದರೆ ಅಣ್ಣಾ, ಧನಲೋಭದಿಂದ ನೀನು ಆ ಗುಹೆಯಲ್ಲಿ ನನ್ನ ಜೀವಕ್ಕೆ ಧಕ್ಕೆ ತರಬಂದರೆ ಮಾತ್ರ ಎಚ್ಚರಿಕೆ! ನಿಂತಲ್ಲಿಯೇ ನಿನ್ನ ಪ್ರಾಣಗಳು ಹಾರುವವು. ಬಲು ಎಚ್ಚರಿಕೆ!

ಈ ಶಿವಲಿಂಗದ ಸಾಕ್ಷಿಯಾಗಿ ನಾನು ಯಾವ ದುರಾಲೋಚನೆಗೂ ಒಳಗಾಗುವದಿಲ್ಲ, ಒಂದು ವೇಳೆ ಹಾಗೇನಾದರೂ ದುಷ್ಟಕಾರ್ಯವು ನನ್ನಿಂದ ಘಟಿಸಿದುದೇ ಆದರೆ ಈ ಕೈಲಾಸನಾಥನು ನನ್ನ ತಲೆಯ ಮೇಲೆ ವಜ್ರವನ್ನು ಕೆಡಹಿ, ನನ್ನ ಸರ್ವನಾಶವನ್ನೂ ಮಾಡಲಿ!

ನಡೆ ಹಾಗಾದರೆ, ಈಗ ನಾನು ನಿನಗೆ ಆ ಗುಪ್ತಸ್ಥಳವನ್ನು ತೋರಿಸುವೆನು. ಎಂದು ಹೇಳಿ, ಆ ಅಂಧಕಾರಮಯ ಮಧ್ಯರಾತ್ರಿಯಲ್ಲಿ ಲಲಿತೆಯು ತನ್ನಲ್ಲಿದ್ದ ಒಂದು ವಸ್ತ್ರದಿಂದ ಚಂದ್ರಪಾಲನ ಕಣ್ಣುಗಳನ್ನು ಕಟ್ಟಿ:—ಅಣ್ಣಾ, ನಾನು ಒಯ್ದಲ್ಲಿಗೆ ಸುಮ್ಮನೆ ನಡೆ. ನಡುವೆ ಎಲ್ಲಿಯೂ ಏನನ್ನೂ ಮಾಡಬೇಡ. ಗಂತವ್ಯ ಸ್ಥಳವು ಪ್ರಾಪ್ತವಾದ ಕೂಡಲೆ, ನಾನು ನಿನ್ನ ಕಣ್ಣುಗಳನ್ನು ಬಿಚ್ಚಿ, ನಿನಗೆ ಆ ನಿಧಿಯನ್ನು ತೋರಿಸುವೆನು; ಹಾಗು ಅಲ್ಲಿಂದ ಬರುವಾಗಲೂ ನಾನು ನಿನ್ನ ಕಣ್ಣುಗಳನ್ನು ಕಟ್ಟಿಯೇ

ತೀರಬೇಕಾಗುವದು, ಎಂದು ಹೇಳಿ, ಅವನ ಕೈಯನ್ನು ಹಿಡಕೊಂಡು, ಆ ಶಿವಾಲಯದಿಂದ ಹೊರಬಿದ್ದಳು. ಅವಳು ಆ ಅರಣ್ಯದಲ್ಲಿ ನೆಟ್ಟಗೆ ಹೋಗದೆ ಎಡಕ್ಕೆ-ಬಲಕ್ಕೆ, ಹಿಂದಕ್ಕೆ-ಮುಂದಕ್ಕೆ ಹೀಗೆ ಅನೇಕ ಪ್ರಕಾರವಾಗಿದ್ದ ಸೊಟ್ಟ-ಡೊಂಕಾದ ಮಾರ್ಗವನ್ನು ಕಾಲು ಗಂಟೆಯ ವರೆಗೆ ಕ್ರಮಿಸಿರಬಹುದು. ಇಷ್ಟು ಹೊತ್ತಿನಲ್ಲಿ ಅವರು ಸಾಧಾರಣವಾಗಿ ಒಂದು ಮೈಲು ದೂರ ಹೋಗಿರಬಹುದಾಗಿತ್ತು; ಆದರೆ ನಿಜವಾಗಿಯೂ ಅಷ್ಟು ದೂರ ಹೋಗಿರಲಿಲ್ಲ. ಬಹಳವಾದರೆ ದೇವಾಲಯದಿಂದ ಎರಡು ಫರ್ಲಾಂಗದ ಆಚೆಗೆ ಹೋಗಿರಬಹುದು ಚಂದ್ರಪಾಲನನ್ನು ಅಲ್ಲಿಯ ಒಂದು ಹಾಳು ಮನೆಯ ತಲೆಬಾಗಿಲ ಹತ್ತರ ನಿಲ್ಲಿಸಿ, ಲಲಿತೆಯು:—ಅಣ್ಣಾ, ನೀನು ಇಲ್ಲಿ ತುಸ ತಡೆ. ನಾನು ಈಗ ಇಲ್ಲಿಯ ಬಾಗಿಲ ತೆರೆಯುವೆನು, ಎಂದು ಹೇಳಿ, ಎತ್ತ ಕಡೆಯಿಂದಲೋ ಒಳಗೆ ಹೋಗಿ, ಅವಳು ಆ ತಲೆಬಾಗಿಲವನ್ನು ಒಳಗಿನಿಂದ ತೆರೆದಳು. ಅವರೀರ್ವರೂ ಒಳಗೆ ಹೋದ ಕೂಡಲೆ ಅವಳು ಆ ಬಾಗಿಲವನ್ನು ಪುನಃ ಭದ್ರವಾಗಿ ಇಕ್ಕಿಕೊಂಡು, ಚಂದ್ರಪಾಲನ ಕಣ್ಣುಗಳನ್ನು ಬಿಚ್ಚಿದಳು.

ಅಲ್ಲಿ ಒಂದು ಜೀರ್ಣವಾದ ಮೇಲಂತಸ್ತಿನ ಮನೆಯಿದ್ದಿತು. ಲಲಿತೆಯು ತನ್ನ ಬಳಿಯಲ್ಲಿದ್ದ ಚಕಮುಕಿಯಿಂದ ಬೆಂಕಿಯನ್ನು ಹೊತ್ತಿಸಿ, ಆ ಮನೆಯ ಒಂದು ಗೂಡಿನಲ್ಲಿ ಎಣ್ಣೆ-ಬತ್ತಿಗಳಿಂದ ಸಜ್ಜಾಗಿದ್ದ ದೀಪವನ್ನು ಹಚ್ಚಿದಳು. ನಂತರ ಅವಳು ತನ್ನ ಎಡಗೈಯಲ್ಲಿ ದೀಪವನ್ನು ಹಿಡಿದುಕೊಂಡು ಚಂದ್ರಪಾಲನಿಗೆ:—ಅಣ್ಣಾ, ಇನ್ನು ನೀನು ನನ್ನೊಡನೆ ಬಡಬಡನೆ ಬಾ. ನಿನಗೆ ಆ ನಿಧಿಯನ್ನು ತೋರಿಸುವೆನು, ಎಂದಂದಳು,

ಕೂಡಲೆ ಚಂದ್ರಪಾಲನು ಎದುರುತ್ತರ ಕೊಡದೆ, ಅವಳ ಹಿಂದಿಂದೆ ಸಾಗಿದನು. ಎರಡು ಮೂರು ಕೋಣೆಗಳನ್ನು ದಾಟಿದ ಬಳಿಕ ಲಲಿತೆಯು ತನ್ನಲ್ಲಿಯದೊಂದು ಬೀಗದ ಕೈಯಿಂದ ಅಲ್ಲಿಯ ಒಂದು ಬಾಗಿಲದ ಕೀಲಿಯನ್ನು ತೆಗೆದಳು. ಎಷ್ಟೋ ದಿನಗಳಿಂದ ಕತ್ತಲು ಕವಿದಿದ್ದ ಆ ಸ್ಥಳವು ದೀಪದ ಬೆಳಕಿನಿಂದ ಪ್ರಕಾಶಮಾನವಾಯಿತು. ಆ ಹಾಳು ಮನೆಯೊಳಗಿನ ಆ ಕೋಣೆಯು ಸಾಮಾನ್ಯವಾಗಿದ್ದಿಲ್ಲ. ಅದು ರಾಜಪ್ರಾಸಾದದೊಳಗಿನ ಒಂದು ಭವ್ಯ ದಿವಾಣಖಾನೆಯಂತೆ, ಸುಂದರವಾದ ವಸ್ತುಗಳಿಂದ ಮಂಡಿಸಲ್ಪಟ್ಟಿತ್ತು. ಅಲ್ಲಿ ಎಷ್ಟೋ ಆಸನಗಳು ಈಗೀಗ ಮಂಡಿಸಿದಂತೆ ಭಾಸವಾಗುತ್ತಿತ್ತು.

ಆ ದಿವಾಣಖಾನೆಯನ್ನು ನೋಡಿ ಚಂದ್ರಪಾಲನು ವಿಸ್ಮಯಾಶ್ಚರ್ಯ

ಗೊಂಡು:—ತಂಗೀ, ಈ ಮನೆಯು ಯಾರದು? ಇಲ್ಲಿ ವಾಸಿಸುವವರು ಬಲು ಶೌಕೀನವರಾಗಿ ಕಾಣುತ್ತಾರೆ! ಇಲ್ಲಿಯಂಥ ವಸ್ತುಗಳೂ ಬಹುಮೂಲ್ಯ ಒಡವೆಗಳೂ ರಾಜರ ಮನೆಯಲ್ಲಿ ಕೂಡ ದೊರೆಯಲಾರವೆಂದು ನನ್ನ ಅಭಿಪ್ರಾಯವಿರುತ್ತದೆ.

ಅಣ್ಣಾ, ಅದನ್ನೆಲ್ಲ ತಿಳಿಸಲು ಬಹಳ ವೇಳೆ ಬೇಕಾದೀತು. ಅಷ್ಟು ಕಾಲ ವ್ಯಯವು ಈಗ ಅನಿಷ್ಟವು. ಆದುದರಿಂದ ಈಗ ನೀನು ಇಲ್ಲಿಗೆ ಬಂದಿರುವ ಮುಖ್ಯ ಕೆಲಸವನ್ನಷ್ಟು ಮಾಡಿಕೊಂಡು ಹೋಗು, ಎಂದು ಅಂದು, ಆ ದಿವಾಣಖಾನೆಯ ಗೋಡೆಯ ಮೂಲೆಯಲ್ಲಿಯ ಒಂದು ಅತಿ ಸೂಕ್ಷ್ಮ ಕೀಲವನ್ನು ತನ್ನ ಹೆಬ್ಬೆರಳಿನಿಂದ ಒತ್ತಿದಳು. ಕೂಡಲೆ ಘೋರವಾದ ಶಬ್ದವಾಗಿ ಅಲ್ಲಿಯೊಂದು ಬಾಗಿಲವು ಕಾಣಿಸಿಕೊಂಡಿತು ಲಲಿತೆಯು ದೀಪವನ್ನು ಆ ಬಾಗಿಲೊಳಗೆ ಹಿಡಿದು:—ಅಣ್ಣಾ, ಈ ನೆಲಮನೆಯಲ್ಲಿಯೇ ನಾನು ನಿನಗೆ ಕೊಡಬೇಕೆಂದಿರುವ ದ್ರವ್ಯವಿರುತ್ತದೆ ಖಾತ್ರಿ ಮಾಡಿಕೊಳ್ಳುವದಕ್ಕಾಗಿ ಒಳಗೆ ಇಳಿದು ನೋಡಿಕೊಂಡು ಬಾ, ಎಂದಂದಳು

ಚಂದ್ರಪಾಲನು ಆ ಬಾಗಿಲದೊಳಗೆ ಇಣಿಕಿ ನೋಡಿದನು. ಆ ಕಾರ್ಗತ್ತಲೆಯಲ್ಲಿ ಮೊದಮೊದಲು ಏನೂ ಕಾಣಿಸಲಿಲ್ಲ. ನೆಲಮನೆಯೊಳಗೆ ಎಷ್ಟೋ ದಿನಗಳಿಂದ ಇಡಗಿದ್ದ ಕಳಕು ವಾಸನೆಯ ಮೂಲಕ ಅವನಿಂದ ಬಹಳ ಹೊತ್ತು ಅತ್ತ ನೋಡುವದೂ ಆಗಲಿಲ್ಲ. ದುರ್ವಾಸನೆಯು ಕಡಿಮೆಯಾದ ಬಳಿಕ ಅವನು ಮತ್ತೆ ನೋಡಿದನು. ಆಗ ಆ ತೆಗ್ಗಿನ ಮನೆಯಲ್ಲಿ ಸಾಲು ಸಾಲಾಗಿ ಇಟ್ಟಿದ್ದ ಎಷ್ಟೋ ಕೊಡಗಳ ಕಾಣಿಸಿದವು. ಆ ಕೊಡಗಳಲ್ಲೇನಿರುವದೆಂಬದನ್ನು ಕಣ್ಣಾರೆ ನೋಡಿ ಬರುವ ಸಲುವಾಗಿ ಅವನು ಆ ನೆಲಮನೆಯಲ್ಲಿ ಇಳಿಯಲುದ್ಯುಕ್ತನಾದನು. ಆಗ ಲಲಿತೆಯು:—ಅಣ್ಣಾ ಸಾವಧಾನದಿಂದ ಇಳಿ; ಇಲ್ಲದಿದ್ದರೆ ಗಡಚಾದ ಏಣಿಯಿಂದ ಇಳಿಯುವಾಗ ಕೈ-ಕಾಲು ಮುರಕೊಂಡು ಮೂಲೆಗುಂಪಾದೀ! ಎಂದು ಎಚ್ಚರಗೊಡಲು, ಚಂದ್ರಪಾಲನು ಒಂದು ಕೈಯಲ್ಲಿ ದೀಪವನ್ನೂ ಮತ್ತೊಂದು ಕೈಯಿಂದ ಆ ಏಣಿಯ ತೋಳನ್ನೂ ಹಿಡಿದುಕೊಂಡು, ಸಾವಧಾನತೆಯಿಂದ ಇಳಿಯಹತ್ತಿದನು. ಎಷ್ಟೊ ಹಲ್ಲುಗಳನ್ನು ಇಳಿದ ಬಳಿಕ ಅವನು ಆ ನೆಲಮನೆಯ ತಳಕ್ಕೆ ತಲಪಿದನು. ಆ ನೆಲಮನೆಯು ಐದಂಕಣ ಜಾಬತಿನದಾಗಿತ್ತು. ಅದರಲ್ಲಿ ತುಂಬಿದ ತಾಮ್ರದ ಕೊಡಗಳು ಪೂರ್ವ-ಪಶ್ಚಿಮ ಎರಡು ಸಾಲುಗಳಾಗಿಡಲ್ಪಟ್ಟಿದ್ದವು ಅವುಗಳ ಮುಚ್ಚಳಗಳಾದರೂ ತಾಮ್ರದವೇ ಇದ್ದವು. ಆ ಮುಚ್ಚಳಿಕೆಗಳು ಅರಗಿನಿಂದ ಭದ್ರವಾಗಿ ಕೂರಿಸಲ್ಪ

ಟ್ಟಿದ್ದವು. ಚಂದ್ರಪಾಲನು ಅವುಗಳಲ್ಲೊಂದು ಅರಗಿನಿಂದ ಕೂಡಿಸಿದ ಮುಚ್ಚಳಿಕೆಯ ಹತ್ತಿರಕ್ಕೆ ತನ್ನ ಕೈಯೊಳಗಿನ ದೀಪದ ಕುಡಿಯನ್ನು ಹಿಡಿಯಲು, ಆ ಅರಗು ಕರಗಿ ಮುಚ್ಚಳವು ಬೇರೆಯಾಯಿತು. ನಂತರ ಅವನು ಆ ಮುಚ್ಚಳವನ್ನು ತೆರೆದು ಒಳಗೆ ನೋಡುತ್ತಾನೆ, ಆ ಕೊಡದ ತುಂಬೆಲ್ಲ ಸುವರ್ಣನಾಣ್ಯಗಳೇ ತುಂಬಿವೆ! ಅವು ಎಷ್ಟು ಇವೆಯೆಂಬುದು ಅವನಿಗೆ ತಿಳಿಯಲು ಸಾಧ್ಯವಿರಲಿಲ್ಲ; ಆದರೆ ಅಷ್ಟರಲ್ಲಿ ಅವನಿಗೆ ಆ ಕೊಡದ ಬಾಯಿ ಹತ್ತಿರವೇ ಕಟ್ಟಿದ್ದ ಒಂದು ತಾಮ್ರದ ಪಟವು ಕಾಣಿಸಿತು. ಆ ಪಟದಲ್ಲಿ ಹೀಗೆ ಬರೆದಿತ್ತು: ಈ ಕೊಡದಲ್ಲಿ ಇಂಥ ಕಾಲದಲ್ಲಿ ಐದು ಸಾವಿರ ಸುವರ್ಣ ಮುದ್ರೆಗಳು ತುಂಬಿರಿಸಲ್ಪಟ್ಟಿವೆ ನಂತರ ಚಂದ್ರಪಾಲನು ಮತ್ತೊಂದು ಕೊಡದ ಅರಗನ್ನು ಬಿಡಿಸಿದನು. ಅದರಲ್ಲೂ ಅಂಥ ಸುವರ್ಣ ಮುದ್ರೆಗಳೇ ಇದ್ದು, ಅದರ ಕೊರಳಿಗೂ ಮೊದಲಿನಂಥ ಐದು ಸಾವಿರ ಸುವರ್ಣ ಮುದ್ರೆಯಿರುವ ತಾಮ್ರದ ಪಟವಿದ್ದಿತು. ಆ ಬಳಿಕ ಚಂದ್ರಪಾಲನು ಅಲ್ಲಿರುವ ಕೊಡಗಳನ್ನು ಎಣಿಸಿದನು. ಅವು ಹತ್ತು ಆಗಿದ್ದವು ಈ ಎಲ್ಲ ಕೊಡಗಳಲ್ಲಿ ಸೇರಿ, ಲಲಿತೆಯು ಈ ಮೊದಲು ತಿಳಿಸಿದಂತೆ ಅರ್ಧಲಕ್ಷ ಬಂಗಾರದ ನಾಣ್ಯಗಳಿರುವವೆಂಬದು ಅವನ ಮನವರಿಕೆಯಾಯಿತು. ನಂತರ ಅವನು ಆ ನಿಚ್ಚಣಿಕೆಯನ್ನು ಏರಿ ಮೇಲಕ್ಕೆ ಬಂದನು. ಲಲಿತೆಯು ಒಳಗಿನ ಬಾಗಿಲುಗಳನ್ನು ಭದ್ರಪಡಿಸಿಕೊಂಡು ತಲೆಬಾಗಿಲ ಬಳಿಗೆ ಬಂದಳು. ಅಲ್ಲಿ ಚಂದ್ರಪಾಲನ ಕಣ್ಣುಗಳನ್ನು ಮೊದಲಿನಂತೆ ಕಟ್ಟಿ, ಅವನನ್ನು ಆ ಬಾಗಿಲದಿಂದ ಹೊರಹೊರಡಿಸಿದಳು; ಹಾಗು ತಾನು ಒಳಗಿನಿಂದ ಆ ಬಾಗಿಲವನ್ನಿಕ್ಕಿ ದೀಪವನ್ನು ಆರಿಸಿ, ಅದನ್ನು ಇಡತಕ್ಕಲ್ಲಿಟ್ಟು, ಯಾವದೋ ಒಂದು ಗುಪ್ತದ್ವಾರದಿಂದ ಹೊರಗೆ ಬಂದು ಕೈ ಹಿಡಿದು ಅವನನ್ನು ಆ ಹಾಳು ದೇಗುಲಕ್ಕೆ ಕರೆತಂದು, ಆತನ ಕಣ್ಣು ಬಿಚ್ಚಿಬಿಟ್ಟಳು.

ದೇವಾಲಯಕ್ಕೆ ಬಂದ ನಂತರ ಚಂದ್ರಪಾಲನು ಲಲಿತೆಯನ್ನುದ್ದೇಶಿಸಿ:—ತಂಗೀ, ನಿನಗಿಷ್ಟು ಐಶ್ವರ್ಯವಿರುವದರಿಂದ, ನೀನು ರಾಜರಾಣಿಯಾಗಿ ಶೋಭಿಸುತ್ತಿರುವೆ!

ನಿರಾಶಾಪೂರ್ಣದನಿಯಿಂದ ಲಲಿತೆಯು:—ಅಣ್ಣಾ, ಆ ತರದ ಇಚ್ಛೆಯು ನನಗಿರುವದಿಲ್ಲ ಈ ಕುಬೇರನಂಥ ಅತುಲನೀಯ ಭಾಂಡಾರವು ನನ್ನದೇ ಎಂಬುದು ಸತ್ಯವು; ಆದರೆ ನಾನು ಈ ಐಶ್ವರ್ಯವನ್ನು ಯಾವ

ಸೊಬಗಿನಿಂದ ಭೋಗಿಸಲಿ? ನನ್ನ ಜೀವನ ಸರ್ವಸ್ವವಾದ ನನ್ನ ಪತಿಯು ನಲಾಂದಾ ಕಾರಾಗೃಹದಲ್ಲಿ ಅನಾಹಾರವಾಗಿ ಸಾಯುಹತ್ತಿರುತ್ತಾನಲ್ಲ!

ತಂಗೀ, ನಿನ್ನ-ನನ್ನ ಪ್ರಯತ್ನದಿಂದ ನಿನ್ನ ಗಂಡನಾದ ಶಕಟಾರನು ಬಂಧವಿಮುಕ್ತನಾಗದಿದ್ದರೆ ಇಲ್ಲವೆ ಅಷ್ಟರಲ್ಲಿ ಪರಲೋಕವನ್ನೈದಿದರೆ, ನೀನು ಈ ಧನಭಾಂಡಾರದ ವ್ಯವಸ್ಥೆಯನ್ನೇನು ಮಾಡಬೇಕೆಂದಿರುವೆ?

ಆ ಮೇಲೆ ನನಗೀ ಧನದ ಅವಶ್ಯಕತೆಯೇ ಇರುವದಿಲ್ಲ ಅದು ಇದ್ದಲ್ಲಿಯೇ ದೃಢವಾಗಿರುವದು.

ಒಂದು ವೇಳೆ ನಿನಗೆ ನಿನ್ನ ಪತಿಯು ಲಭಿಸಿದರೆ?

ಹಾಗಾದರೆ ನಾನು ಆವನೊಡನೆ ರಾಜ-ರಾಣಿಯಂತೆ ಈ ಐಶ್ವರ್ಯವನ್ನು ಭೋಗಿಸುವೆನು; ಹಾಗೂ ಯಾವನು ನನ್ನ ಆ ಪ್ರಾಣವಲ್ಲಭನ ಉದ್ಧಾರಕ್ಕಾಗಿ ಸಹಾಯ ಮಾಡುವನೋ, ಅವನನ್ನು ಧನಿಕನನ್ನಾಗಿ ಮಾಡುವೆನು

ಲಲಿತೆಯು ಚಂದ್ರಪಾಲನ ದೂರಸಂಬಂಧದ ಭಗಿನಿಯು.

ನಂದನ ತಂದೆಯು ಕಾಲಕ್ಕೆ ಮಗಧ ದೇಶದ ಶ್ರೇಷ್ಠ ಅಮಾತ್ಯನಾಗಿದ್ದ ಶಕಟಾರನು ನಂದನು ಪಟ್ಟಕ್ಕೆ ಬಂದ ಮೇಲೂ ಮುಖ್ಯಾಮಾತ್ಯನೇ ಆಗಿದ್ದನು; ಆದರೆ ಕುಟಿಪಟುವೂ ರಾಕ್ಷಸ ಸದೃಶನೂ ಆದ ಆ ಅಮಾತ್ಯ ಧೀರಬುದ್ಧಿಯು ಅಥವಾ ರಾಕ್ಷಸ ಮಂತ್ರಿಯು ತನ್ನ ಛಾಪನ್ನು ನಂದನ ಮೇಲೆ ಕೂರಿಸಿದನು; ಹಾಗೂ ಮುಖ್ಯಾಮಾತ್ಯನಾದ ಶಕಟಾರನಲ್ಲಿ ಮತ್ಸರವುಳ್ಳವನಾದನು. ಕಾಲವಶಾತ್ ನಂದಮಹಾರಾಜನ ಬುದ್ಧಿಯೂ ಮಸಣಿಸಿದ್ದರಿಂದ, ಅವನಿಗೂ ಬರಬರುತ್ತ ಶಕಟಾರನ ನಿಸ್ಪೃಹ, ನಿರಲಸ, ಪ್ರಾಮಾಣಿಕತನದ ಸ್ವಭಾವವು ರುಚಿಸದಾಯಿತು. ಅದರಿಂದ ಒಮ್ಮೆ ರಾಕ್ಷಸನು ಶಕಟಾರನ ಮೇಲೆ ಒಂದು ಪೇಚನ್ನು ತಂದು, ಆತನಿಗೆ ಪತ್ನಿ ಪುತ್ರರೊಡನೆ ಆಜನ್ಮ ಕಾರಾಗೃಹದ ಶಿಕ್ಷೆಯನ್ನು ವಿಧಿಸಿ ಅವರನ್ನು ನಲಾಂದಾ ದುರ್ಗದಲ್ಲಿ ಅನಾಹಾರಿಯಾಗಿರಿಸಿದನು ಲಲಿತೆಯು ಈ ಶಕಟಾರ ಮಂತ್ರಿಯ ಪರಿತ್ಯಕ್ತ ಪ್ರಥಮ ಭಾರ್ಯೆಯಾಗಿದ್ದಳು.

# ಸೌಭಾಗ್ಯಸೂಚಕ ಆಶೀರ್ವಾದ

................

ಲಲಿತೆಯು ಆ ಮೇಲೆ ಅಲ್ಲಿಯ ಆ ಶಿವಲಿಂಗದ ಪೀಠವನ್ನು ಮುಟ್ಟಿ, ಚಂದ್ರಪಾಲನನ್ನು ಕುರಿತು:—ಅಣ್ಣಾ, ಈ ಶಿವಲಿಂಗನ ಆಣೆಯಾಗಿ ನಾನು ನಿನಗೆ ಹೇಳುವದೇನಂದರೆ, ನೀನು ನನ್ನ ಪತಿಯನ್ನು- ಶಕಟಾರನನ್ನು- ಉದ್ಧಾರಗೊಳಿಸಿದರೆ, ನಾನು ನಿನಗೆ ಇಪ್ಪತ್ತು ಸಾವಿರ ಸ್ವರ್ಣಮುದ್ರೆಗಳನ್ನು ಕೊಡುತ್ತೇನೆ

ಬಳಿಕ ಚಂದ್ರಪಾಲನೂ ಆ ಶಿವಲಿಂಗವನ್ನು ಮುಟ್ಟಿ:—ತಂಗೀ, ಲಲಿತಾ, ನನ್ನ ಜೀವ ಹೋದರೂ ಅಡ್ಡಿಯಿಲ್ಲ ನಾನು ನಿನ್ನ ಗಂಡನನ್ನು ಕಾರಾಗಾರದಿಂದ ಬಿಡಿಸಲಿಕ್ಕೆ ಮನಃಪೂರ್ವಕವಾಗಿ ಪ್ರಯತ್ನಿಸುತ್ತೇನೆ. ಯಶಾಪಯಶಗಳು ದೈವಾಧೀನವು! ತಂಗೀ, ಅವನನ್ನು ಬಿಡಿಸಬೇಕಾದರೆ ಇನ್ನೊಂದು ಸಲಕರಣೆಯನ್ನು ನೀನು ಸಂಗ್ರಹಿಸಬೇಕಾಗಿರುವದಲ್ಲ!

ಅಣ್ಣಾ, ನಿನ್ನ ಗರ್ಭಿತಾರ್ಥವು ತಿಳಿಯಿತು. ಆ ಬಗ್ಗೆ ನಾನು ಈ ಮೊದಲೇ ಯೋಚಿಸಿಟ್ಟಿರುತ್ತೇನೆ ಶಕಟಾರನ ಬದಲಾಗಿ ಆ ಕಾರಾಗಾರದಲ್ಲಿಡಲಿಕ್ಕೆ ನಿನಗೊಂದು ಮೃತದೇಹದ ಅವಶ್ಯವಿದೆಯೆಂದಲ್ಲವೇ?

ತಂಗೀ, ಅಹುದು, ಆದರೆ ನೀನು ಅದನ್ನೆಲ್ಲಿಂದ ಸಂಗ್ರಹಿಸುವೆ? ಈ ಪಾಟಲೀಪುತ್ರದಲ್ಲಂತೂ ಶವಗಳನ್ನು ಹೂಳುವವರಿಗಿಂತ ಸುಡುವವರೇ ಹೆಚ್ಚು.

ಚಂದ್ರಪಾಲನ ಪ್ರಶ್ನೆಯನ್ನು ಕೇಳಿ ಲಲಿತೆಯು ಮನದಲ್ಲಿ ತುಸ ಖಿನ್ನಳಾದಳು ಎಷ್ಟೋ ಹೊತ್ತು ಯೋಚಿಸಿದರೂ ಅವಳಿಗೆ ಸಮರ್ಪಕವಾದ ಉತ್ತರವು ದೊರೆಯದಾಯಿತು ಕಡೆಗೆ ಅವಳು ಚಂದ್ರಪಾಲನನ್ನು ಕುರಿತು:—ಅಣ್ಣಾ, ನೀನು ಹೇಳಿದಂತೆ ಒಂದು ಶವದೇಹವನ್ನು ಸಂಗ್ರಹಿಸಿ, ಅದರಿಂದ ನನ್ನ ಕಾರ್ಯವನ್ನು ಮಾಡಿಕೊಳ್ಳುವದು ಇದುವರೆಗೆ ನನಗೆ ಸಮಂಜಸವಾಗಿ ಕಂಡು ಬಂದಿತು; ಆದರೆ ಆ ವಿಚಾರವು ಈಗ ನನಗೆ ಅಗ್ರಾಹ್ಯವಾಗಿ ಕಾಣುತ್ತದೆ. ಕಾರಣವೇನಂದರೆ, ಈ ಪಟ್ಟಣದಲ್ಲಿ ಹೆಣ ಹುಗಿಯುವವರೇ ಕಡಿಮೆ. ಎಷ್ಟು ಸಾಹಸಪಟ್ಟರೂ ನನಗೆ ಯಾವದೊಂದು ಗಲಿತ ಶವದೇಹವು ಸಿಗಬಹುದೇ ವಿನಃ, ಆಗಲೇ ಮೃತ ಪಟ್ಟವನ ಶರೀರವು ಎಂದಿಗೂ ಸಿಗಲಾರದು. ಆ ಗಲಿತ ಶವವನ್ನು ಶಕಟಾರನ ಬದಲಾಗಿ ಕಾರಾಗಾರದಲ್ಲಿಟ್ಟರೆ, ಆತನ ಕಡುವೈರಿಯಾದ ಚತುರ ಮಂತ್ರಿ

ರಾಕ್ಷಸನಿಗೆ ಆ ಬಗ್ಗೆ ಸಂಶಯಬಾರದಿದ್ದೀತೇ? ಶಕಟಾರನು ಸತ್ತಿರುವ ನೆಂಬ ಸುದ್ದಿಯು ಕಿವಿಗೆ ಬಿದ್ದ ಕೂಡಲೆ, ಆ ನೀಚನು ಕಾರಾಗೃಹಕ್ಕೆ ಸ್ವತಃ ಬರತಕ್ಕವನು. ಶಕಟಾರನ ಬದಲು ಬೇರೊಂದು ಶವದೇಹವು ಅಲ್ಲಿ ಇರಿಸಲ್ಪಟ್ಟಿದೆಯೆಂಬುದು ಆಕಸ್ಮಿಕವಾಗಿ ಆತನ ನಜರಿಗೆ ಬಿದ್ದರೆ, ಎಂಥ ಅನರ್ಥವೊದಗುವದೆಂಬದರ ಕಲ್ಪನೆಯು ನನಗೀಗ ಬರಹತ್ತಿದೆ. ಆ ಅಮಾತ್ಯವರನು ನಿನ್ನನ್ನೂ, ಶಕಟಾರನನ್ನೂ ಇದ್ದಲ್ಲಿಂದ ಹಿಡಿತರಿಸಿ ಸಂಹರಿಸಬಹುದು. ಮೊದಲೇ ಆ ಬಗ್ಗೆ ಚನ್ನಾಗಿ ವಿಚಾರಿಸಿದ್ದರೆ, ನಾನು ಈ ತರಹದ ಸಾಹಸಕ್ಕೆ ಕೈ ಹಾಕುತ್ತಿರಲಿಲ್ಲ

ಲಲಿತೆಯ ಈ ವಚನವನ್ನು ಕೇಳಿ, ಚಂದ್ರಪಾಲನೂ ಚಿಂತಾಕ್ರಾಂತನಾದನು ಒಳ್ಳೇ ಬುದ್ಧಿವಂತನಾಗಿದ್ದರೂ, ಆತನಿಗೂ ಕೂಡ ಈ ವಿಚಾರವು ಹೊಳೆದಿದ್ದಿಲ್ಲ. ಭಾವೀ ಕಾಲದಲ್ಲಿ ಲಭಿಸಬಹುದಾಗಿದ್ದ ಇಪ್ಪತ್ತು ಸಾವಿರಗಟ್ಟಲೆ ಸ್ವರ್ಣನಾಣ್ಯಗಳ ತೇಜದ ದೀಪ್ತಿಯಲ್ಲಿ, ಅಂಧಕಾರ ಪೂರ್ಣವಾದ ಇಂಥ ಕುತ್ಸಿತ ವಿಚಾರಗಳು ಎಂಥ ಬುದ್ಧಿಶಾಲಿಗೂ ಹೊಳೆಯದಿರುವದು ಆಶ್ಚರ್ಯದ ಮಾತಲ್ಲ ಇರಲಿ.

ಲಲಿತೆಯು ಪುನಃ ಮಾತಾಡತೊಡಗಿದಳು:—ಅಣ್ಣಾ, ಇದಕ್ಕೆ ಒಂದೇ ಒಂದು ಉಪಾಯವಿರುತ್ತದೆ; ಆದರೆ ಆ ಮಾರ್ಗವೂ ಕೂಡ ಮಹಾ ವಿಪಜ್ಜನಕವಾದದು. ಆ ಮಾರ್ಗವನ್ನನುಸರಿಸಲಿಕ್ಕೂ ನಿನ್ನ ಸಹಾಯವೇ ಪ್ರಾಮುಖ್ಯವಾದದ್ದು. ಬಹು ಎಚ್ಚರಿಕೆಯಿಂದಲೂ ಶೀಘ್ರವಾಗಿಯೂ ಆ ಕೆಲಸವನ್ನು ಕೈಕೊಂಡರೇ ಪ್ರಯೋಜನವು; ಇಲ್ಲದಿದ್ದರೆ ಇಬ್ಬರೂ ಮುಖಭಂಗಿತರಾಗಬೇಕಾಗುವದು. ಇದಕ್ಕೆ ನೀನು ಒಪ್ಪುವಿಯಾ?

ತಂಗೀ, ಬಿಚ್ಚಿ ನುಡಿಯುದ ಮಾತಿಗೆ ಒಪ್ಪುವ ಬಗೆ ಹೇಗೆ? ಎಂದು ಚಂದ್ರಪಾಲನು ಆತುರದಿಂದ ನುಡಿದನು.

ಲಲಿತೆ:— ಹಿಂದಕ್ಕೆ ರಾಕ್ಷಸನು ನನ್ನ ಪತಿಯನ್ನೂ ಆತನ ಪತ್ನೀ-ಪುತ್ರರನ್ನೂ ಸೆರೆ ಹಿಡಿದು, ನಲಾಂದಾ ದುರ್ಗದಲ್ಲಿ ಅನಾಹಾರದಿಂದ ಇರಿಸಿದ ಬಳಿಕ ಆ ನೀಚನು ನನ್ನನ್ನು ಹಿಡಿತರುವದಕ್ಕಾಗಿ ರಾಜಸೇವಕರನ್ನು ನನ್ನ ತವರೂರಿಗೆ ಕಳಿಸಿದ್ದನು. ಪ್ರಾಯದಲ್ಲಿ ನಾನು ಒಳ್ಳೇ ರೂಪವತಿಯಾಗಿದ್ದೆನು ನನ್ನ ಪತಿಯು ನನ್ನನ್ನು ಒಳ್ಳೇ ಪ್ರೇಮದಿಂದ ಸಲಹುತ್ತಿದ್ದನು; ಆದರೆ ರೂಪ-ಲಾವಣ್ಯಗಳಿಗೊಪ್ಪುವಂತೆ ನನ್ನ ಸ್ವಭಾವವಿರಲಿಲ್ಲ ನಾನು ಬಲು ಡೌಲಿನವಳು. ನನ್ನಲ್ಲಿಯ ಅವಗುಣವೆಂದರೆ, ಬಲು ಮಾತಾಡುವದು ಆ ಕಾಲಕ್ಕೆ ನಂದರಾಜನ ಶ್ಯಾಲಕನಾದ ಕಪಟಕನ ಸ್ತ್ರೀ ವಿಷಯಕ ಅತ್ಯಾ

ಚಾರವು ಈ ಪಾಟಲೀಪುತ್ರ ರಾಜಧಾನಿಯಲ್ಲಿ ಅಬಾಧಿತವಾಗಿ ನಡೆದಿತ್ತು. ಒಂದು ದಿನ ನನ್ನ ಗಂಡನು ನನ್ನ ಡೌಲಿನ ಸ್ವಭಾವದ ಬಗ್ಗೆ ನನಗೆ ಸಿಟ್ಟು ಮಾಡಲು, ನನ್ನ ಮಾನೀ ಸ್ವಭಾವಕ್ಕೆ ಆ ಕಠೋರೋಕ್ತಿಗಳು ರುಚಿಸದ್ದ ರಿಂದ, ನಾನು ಆ ರಾತ್ರಿಯ ಹೊತ್ತಿನಲ್ಲಿಯೇ ನನ್ನ ಗಂಡನ ಮನೆಯಿಂದ ಹೊರಟು, ತವರು ಮನೆಯ ಹಾದೀ ಹಿಡಿದೆನು ನನ್ನಂಥ ಪರಮ ಸುಂದರ ತರುಣಿಯು ಆ ಕಾರ್ಗತ್ತಲೆಯ ಸಮಯದಲ್ಲಿ ಆ ರಾಜಧಾನಿಯಿಂದ ಒಬ್ಬಳೇ ಹೊರಡುವದು ಯುಕ್ತವಾಗಿದ್ದಿಲ್ಲ. ಆದರಲ್ಲಿಯೂ ಕುಹಕ ಕಪಟಿಕನ ಅತ್ಯಾಚಾರದ ಆ ಕಾಲದಲ್ಲಂತೂ ಹೊರಡುವದು ಕೇವಲ ಗೌಣ ವಾಗಿದ್ದಿತು. ಆದರೆ ನನ್ನ ಗರ್ವಿಷ್ಠ ಸ್ವಭಾವಕ್ಕೆ ಆ ಯಾವ ಸಂಗತಿಗಳೂ ತಡೆ ಹಾಕದ್ದರಿಂದ, ನಾನು ಮನೆಯಿಂದ ಹೊರಬಿದ್ದೆನು. ಕೆಲ ದಾರೀ ಕ್ರಮಿಸಿದ ಬಳಿಕ ಆ ತಪ್ಪು ನನ್ನ ನಿದರ್ಶನಕ್ಕೆ ಬರತೊಡಗಿತು. ಆದರೂ ನನ್ನ ಹಟೀಸ್ವಭಾವದ ಮುಂದೆ ಅದರ ಆಟವು ನಡೆಯಲಿಲ್ಲ. ಕಡೆಗೆ ದಾರಿ ಯಲ್ಲಿ ಸಿಕ್ಕ ನಮ್ಮ ಒಬ್ಬ ವೃದ್ಧ ಆಶ್ರಿತನಿಗೆ ಯಾವುದೊಂದು ಅವಸರದ ಕಾರಣವನ್ನು ಹೇಳಿ, ಅವನನ್ನು ಸಂಗಡ ಕರಕೊಂಡು ಆ ರಾತ್ರಿಸಮಯ ದಲ್ಲಿಯೇ ಪಾಟಲಿಪುತ್ರಕ್ಕೆ ಸಮೀಪದಲ್ಲಿರುವ ನನ್ನ ತವರೂರಿಗೆ ಹೋಗಿ ಬಿಟ್ಟೆನು. ನಾನು ಹೀಗೆ ಹೊರಟು ಹೋದ ಸುದ್ದಿಯನ್ನು ಕೇಳಿ, ನನ್ನ ಪತಿಯು ಅಂತರಂಗದಲ್ಲಿ ಬಹು ಮಿಡುಕಿದರೂ, ನನ್ನಲ್ಲಿ ಪಶ್ಚಾತ್ತಾಪವುಂಟಾ ಗಬೇಕೆಂಬ ಸದುದ್ದೇಶದಿಂದ ಅವನು ಪುನಃ ನನ್ನನ್ನು ತಾನಾಗಿ ಕರೆಕಳು ಹಲಿಲ್ಲ. ಅಂದಿನಿಂದ ನಾನು ತವರು ಮನೆಯಲ್ಲಿಯೇ ಇರತೊಡಗಿದೆನು; ಆದರೆ ವರ್ಷಾರು ತಿಂಗಳುಗಳಲ್ಲಿ ನನ್ನ ಮಾನೀಸ್ವಭಾವವು ನಾಮಶೇಷ ವಾಯಿತು. ಇಂದಿಲ್ಲ, ಇನ್ನು ಕೆಲ ದಿನಗಳಿಗೆ ನನ್ನ ಪತಿಯು ನನ್ನನ್ನು ನಿಶ್ಚಯವಾಗಿ ಕರೆದೊಯ್ಯಬಹುದೆಂದು ನಾನು ಮೊದಮೊದಲು ತಿಳಿದಿದ್ದ ದರಿಂದ, ನನ್ನಲ್ಲಿಯ ಗರ್ವವು ಒಮ್ಮೆಲೆ ಅಡಗಲಿಲ್ಲ ಕಡೆಗೆ ನನಗೆ ನನ್ನ ಆ ತವರುಮನೆಯಲ್ಲಿ ಉಳಿಯುವದು ಅಸಹ್ಯವೆನಿಸಿತು. ಇನ್ನು ನಾನು ನನ್ನ ಗಂಡನ ಮನೆಗೆ ನಾನಾಗಿಯೇ ಬರಬೇಕೆಂದು ಯೋಚಿಸಿದ್ದೆನು. ಇಷ್ಟರಲ್ಲಿ ರಾಕ್ಷಸನು ನನ್ನ ಗಂಡನನ್ನು ಸೆರೆ ಹಿಡಿದು, ನನ್ನನ್ನು ಹಿಡಿ ತರುವ ಸಲುವಾಗಿ ತನ್ನ ಸೇವಕರನ್ನೂ ಕಳಿಸಿದನು. ಆಗ ನಾನು ಆ ರಾತ್ರಿಯಲ್ಲಿ ಮನೆಯವರ ಹಾಗೂ ಸೇವಕರ ಕಣ್ಣು ತಪ್ಪಿಸಿ, ಮನೆಯಿಂದ ಹೊರಬಿದ್ದು, ಸಮೀಪದಲ್ಲಿ ಜಾಹ್ನವಿಯಲ್ಲಿ ಹಾರಿಕೊಂಡು ಪ್ರಾಣ ನೀಗಬೇಕೆಂದು ನಿಶ್ಚಯಿಸಿ ಹೊರಹೊರಟೆನು. ನದಿಯ ಸಮೀಪಕ್ಕೆ ಬಂದ

ಆ ಮಧ್ಯರಾತ್ರಿಯ ಪ್ರಶಾಂತಸಮಯದಲ್ಲಿ ನನ್ನು ಆ ಝಂಕಾರ ವ ಯಿಾ ಜಾಹ್ನವಿಯಲ್ಲಿ ದುಮುಕ ತಕ್ಕನಳು; ಇಷ್ಟರಲ್ಲಿ ನನ್ನ ಹಿಂದಿನಿಂದ ಯಾವದೋ ಒಂದು ಭವ್ಯಮೂರ್ತಿಯು ಅಲ್ಲಿಗೆ ಬಂದು ಅವಸರದಿಂದ ನನ್ನ ಸೆರಗನ್ನು ಹಿಡಿದು:— ತಂಗೀ, ಆತ್ಮಹತ್ಯೆಯು ಸರ್ವಥಾ ಯೋಗ್ಯ ವಲ್ಲವು. ಅದರಿಂದ ಮಹಾಪಾಪವು ಸಂಘಟಿಸುವದು. ಪೂರ್ವಜನ್ಮಗಳ ಲ್ಲಿಯ ಅನೇಕ ಪಾಪಗಳಿಂದಲೇ ನಿನಗೀ ದುರ್ವಾಸನೆಯು ಉಂಟಾಗಿರು ತ್ತದೆ. ತಂಗೀ, ನೀನು ನಿನ್ನೀ ಸಂಕಲ್ಪವನ್ನು ಬಿಟ್ಟುಗೊಟ್ಟು, ಯಾವ ಸಂಕೋಚವನ್ನೂ ತಾಳದೆ ನನ್ನೊಡನೆ ಬಾ, ಎಂದು ನುಡಿಯಿತು.

ನಾನು ಉಜ್ವಲ ತಾರಾಪ್ರಕಾಶದಲ್ಲಿಯ ಆ ಮೂರ್ತಿಯನ್ನು ಹಿಂದಿ ರುಗಿ ದಿಟ್ಟಿಸಿ ನೋಡಿದೆನು. ಅದೊಂದು ಕಾಷಾಯವಸ್ತ್ರ-ಕಮಂಡಲು ಗಳನ್ನು ಧರಿಸಿದ್ದ ಸಂನ್ಯಾಸಿಯ ಭವ್ಯಮೂರ್ತಿಯಾಗಿದ್ದಿತು. ಆಗ ನಾನು ಆ ಸಂನ್ಯಾಸಿಯ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಮಹಾತ್ಮಾ ತಾವು ಯಾರು? ಈ ಮಧ್ಯರಾತ್ರಿಯಲ್ಲಿ ಇತ್ತ ಯಾವ ಕಡೆಗೆ ಬಂದಿದು? ಎಂದು ವಿಚಾರಿಸಲು, ತಂಗೀ, ಅದೆಲ್ಲವನ್ನು ಹೇಳಿಯೇ ನಿನಗೆ ಆಶ್ರಯ ಕೊಡ ವೆನು. ನೀನು ನನ್ನನ್ನನುಸರಿಸಿ ಬೇಗ-ಬೇಗ ಬಾ ರಾಕ್ಷಸಮಂ ತ್ರಿಯ ಸೇವಕರು ನಿನ್ನ ಶೋಧದಲ್ಲಿರುವರು. ಅವರ ಕಣ್ಣಿಗೆ ಬೀಳದಂತೆ ನಾವು ನಮ್ಮ ಸ್ಥಳಕ್ಕೆ ಹೋಗಬೇಕಾಗಿದೆ ಎಂದು ಹೇಳಿ, ಆ ಮೂರ್ತಿಯು ನನ್ನನ್ನು ತನ್ನ ಸಂಗಡ ಕರಕೊಂಡು ನಡೆಯಿತು.

ಆ ಭವ್ಯಸಂನ್ಯಾಸಿಯ ಹೆಸರು ಸ್ವಾಮಿ ಯೋಗಾನಂದ ಆತನು ಒಳ್ಳೇ ತೇಜಸ್ವಿಯಾದ ಪರಮಹಂಸ ಮೂರ್ತಿಯಾಗಿದ್ದು, ಮಗಧ, ಪರ್ವತ ಹಾಗು ಅವುಗಳ ಸಮಿಾಪದ ಇತರ ರಾಷ್ಟ್ರಗಳ ಪ್ರಜೆಗಳಿಗೆಲ್ಲ ಆ ಮಹಾ ತ್ಮನ ವಿಷಯವು ಚನ್ನಾಗಿ ಗೊತ್ತಿದೆ

ಸ್ವಾಮಿ ಯೋಗಾನಂದರು ನನ್ನನ್ನು ತಮ್ಮ ಆಶ್ರಮಕ್ಕೆ ಕರೆದೊ ಯ್ದರು. ಅಲ್ಲಿ ಶಿಷ್ಯಸಮೂಹದಲ್ಲಿ ಕೆಲವು ಜನ ಹೆಂಗಸರೂ, ಕೆಲ ಜನ ಗಂಡಸರೂ ಇದ್ದರು. ಹೆಂಗಸರಲ್ಲಿ ಮಾತಂಗಿ ಎಂಬ ಹೆಸರಿನ ಒಬ್ಬ ಭೈರವಿಯು ಅವರ ಶ್ರೇಷ್ಠ ಭಕ್ತಳಾಗಿದ್ದಳು. ಸ್ವಾಮಿಗಳು ನನ್ನನ್ನು ಆ ಮಾತಂಗಿ ಭೈರವಿಯ ವಶಕ್ಕೊಪ್ಪಿಸಿ:— ಭೈರವೀ, ಈ ಬಾಲಿಕೆಯು ಆತ್ಮ ಹತ್ಯಾಪ್ರವೃತ್ತಳಾಗಿದ್ದಳು; ಆದರೆ ಜಗನ್ನಿಯಂತನ ಕೃಪೆಯಿಂದ ನಾನು ಅದೇ ಕಾಲಕ್ಕೆ ಅಲ್ಲಿಗೆ ಹೋಗಲು, ಇವಳ ಪ್ರಾಣ ಉಳಿದಿರುವದು. ಅದ್ದರಿಂದ ಈಗ ನೀನು ಇವಳ ಪಾಲನ-ಪೋಷಣಗಳನ್ನು ಮಾಡಬೇಕ

ಲ್ಲದೆ, ಇವಳಿಗೆ ಪ್ರವೃತ್ತಿ-ನಿವೃತ್ತಿ ಮಾರ್ಗಗಳ ನಿಜರಹಸ್ಯವನ್ನು ಚೆನ್ನಾಗಿ ತಿಳಿಸು, ಎಂದು ಹೇಳಿದರು.

ಮಾತಂಗಿಭೈರವಿಯು ನನಗೆ ಸ್ತ್ರೀಧರ್ಮದ ರಹಸ್ಯವನ್ನೂ, ಸ್ತ್ರೀಯು ಪತಿಯೊಡನೆ ಹೇಗೆ ನಡೆಯಬೇಕೆಂಬುದನ್ನೂ, ಸಂಸಾರದಲ್ಲಿ ಬರುವ ಅನೇಕ ಕಷ್ಟಕರ ಪ್ರಸಂಗದಲ್ಲಿ ಸ್ತ್ರೀಯು ಸ್ವಪರಿವಾರದೊಡನೆ ಹೇಗೆ ನಡೆದು ಕೊಂಡು ಆ ಸಂಕಟಗಳಿಗೆ ಎದುರಾಗಬೇಕೆಂಬದನ್ನೂ, ಇನ್ನೂ ಅನೇಕ ಪ್ರವೃತ್ತಿಮಾರ್ಗಗಳನ್ನೂ ತಿಳಿ ಹೇಳಿದಳಲ್ಲದೆ, ಪರಮೇಶ್ವರ ಪ್ರಾಪ್ತಿಗಾಗಿ ಶ್ರೀ ಗುರುವಿನ ಸೋಪಾನ ಮಾರ್ಗದ ಅವಶ್ಯಕತೆಯನ್ನೂ, ಗುರುವಿನ ಲಕ್ಷಣವನ್ನೂ, ಸಾಧನ ಮಾರ್ಗವನ್ನೂ ಮನದಟ್ಟಾಗಿ ಹೇಳಿ, ಅನುಭವ ತಂದು ಕೊಟ್ಟಳು. ಮಾತಂಗಿ ಭೈರವಿಯು ನನ್ನನ್ನು ತನ್ನ ಹೊಟ್ಟೆಯ ಮಗಳಂತೆ ಒಳ್ಳೆಯ ಪ್ರೇಮದಿಂದ ನಡೆಯಿಸಿಕೊಳ್ಳುತಲಿದ್ದದರಿಂದ, ಅವಳು ನನಗೆ ಎಷ್ಟೋ ವೈದ್ಯಕೀಯ ವಿಷಯಗಳನ್ನೂ, ಸಂಜೀವಿನೀ ಮಾತ್ರೆ ಮಾಡುವದನ್ನೂ ಕಲಿಸಿರುವಳು. ಇಷ್ಟೇ ಅಲ್ಲ, ದೈವವಶಾತ್ ನಾನು ನನ್ನ ಪತಿಯನ್ನು ಹೊಂದಿದರೆ, ನನಗೆ ಮುಂದೆ ಸಂಸಾರಕ್ಕೆ ಉಪಯೋಗ ಬೀಳ ಬೇಕೆಂದು ನಾನು ನಿನಗೆ ತೋರಿಸಿದ ಆ ಗುಹೆಯೊಳಗಿನ ನಿಧಿಯನ್ನು ಕೂಡಾ ನನಗೆ ಅವಳೇ ತೋರಿಸಿ, ಅದನ್ನು ನನ್ನ ವಶಕ್ಕೆ ಕೊಟ್ಟಿರುವಳು ಅಣ್ಣಾ! ಆ ಮಾತಂಗಿ ಭೈರವಿಯ ಉಪಕಾರವನ್ನು ಎಷ್ಟೆಂತ ಹೇಳಲಿ? ಅದಿರಲಿ. ಅಣ್ಣಾ, ಅವಳು ನನಗೆ ತೋರಿಸಿರುವ ಸಂಜೀವಿನೀ ಮಾತ್ರೆಗಳಲ್ಲಿ ಒಂದನ್ನು ಈಗ ನನ್ನ ಪತಿವರನಿಗೆ ಉಪಯೋಗಿಸಿ, ಆತನನ್ನು ನಿಮ್ಮ ಕಾರಾಗೃಹ ದಿಂದ ಹೊರಹೊರಡಿಸ ಬೇಕೆಂದಿರುವೆನು. ಆ ಮಾತ್ರೆಯ ಗುಣವಿಷ್ಟೇ: ಅದು ಎಂಥ ಧಷ್ಟ-ಪುಷ್ಟ ಶರೀರದ ಮನುಷ್ಯನಿಗೆ ಕೊಟ್ಟರೂ ಆ ಮಾತ್ರೆಯು ಉದರಸ್ಥವಾದ ಒಂದು ತಾಸಿನಲ್ಲಿಯೇ ಆತನು ಸತ್ತಂತೆ ನಿಶ್ಚೇಷ್ಟಿತನಾಗು ವನು ಅವನಲ್ಲಿ ಆ ನಿಶ್ಚೇಷ್ಟಿತಾವಸ್ಥೆಯು ಮಾತ್ರೆ ಕೊಟ್ಟ ವೇಳೆಯಿಂದ ಇಪ್ಪತ್ತುನಾಲ್ಕು ತಾಸುಗಳ ವರೆಗೆ ಏಕರೀ ಪ್ರಕಾರವಾಗಿ ಉಳಿಯುವದು. ಆ ಕಾಲದಲ್ಲಿ ಅವನ ಅವಸಾನವಾಗಿದೆಯೆಂದೇ ಪ್ರತಿಯೊಬ್ಬ ವೈದ್ಯರೂ ಧನ್ವಂತರಿಗಳೂ ಹೇಳಬಹುದು. ಇಪ್ಪತ್ತುನಾಲ್ಕು ತಾಸು ಮೀರುವಷ್ಟ ರಲ್ಲಿ ಅವನಿಗೆ ಮತ್ತೊಂದು ಪ್ರಾಣೋತ್ತೇಜಕ ಮಾತ್ರೆಯನ್ನು ಕೊಟ್ಟು, ಮೂರು ದಿನಗಳವರೆಗೆ ಅವನನ್ನು ಚನ್ನಾಗಿ ಶುಶ್ರೂಷೆ ಮಾಡಿದರೆ, ಆ ಮನುಷ್ಯನ ಪ್ರಾಣವು ಹೋಗದೆ. ಆತನು ಪುನಃ ಮೊದಲಿನಂತೆಯೇ ಆಗು ವನು. ಅಣ್ಣಾ, ಈ ಪ್ರಸಂಗದಲ್ಲಿ ನನ್ನ ಪತಿಯು ಬದಲು ಕಾರಾಗೃಹದಲ್ಲಿ

ಬೇರೆ ಶವವನ್ನಿಡುವ ಯುಕ್ತಿಗಿಂತ, ಈ ಯುಕ್ತಿಯೇ ನನಗೆ ಹೆಚ್ಚು ಪ್ರಶಸ್ತವಾಗಿ ತೋರುತ್ತಿದೆ. ಈ ಯುಕ್ತಿಯು ಕೈಗೂಡಿದರೆ ನನ್ನ ಗಂಡನ ದೇಹವು ನಿಮ್ಮ ಕಾರಾಗೃಹದಿಂದ ಪಾರಾಗಿ ಆತಂಕವಿಲ್ಲದೆ ನನ್ನ ವಶಕ್ಕೆ ಬರಬೇಕು; ಹಾಗೂ ನನ್ನ ಎರಡನೇ ಮಾತ್ರೆಯ ಪ್ರಯೋಗದಿಂದ ನನ್ನ ಗಂಡನು ಬದುಕಬೇಕು; ಇಲ್ಲದಿದ್ದರೆ ನನ್ನ ದುರ್ದೈವದಿಂದ ಆತನು ಮರಣಕ್ಕೀಡಾದಾನೆಯೇ ಹೊರತು, ನಿನಗಾಗಲಿ-ನನಗಾಗಲಿ ಇದರಿಂದ ಯಾವ ಆನುಷಂಗಿಕ ಸಂಕಟವೂ ಪ್ರಾಪ್ತವಾಗಲಾರದು, ಎಂದು ಹೇಳಿದ ಲಲಿತೆಯ ನುಡಿಯನ್ನು ಕೇಳಿ, ಚಂದ್ರಪಾಲನು ಅದಕ್ಕೆ ಸಮ್ಮತಿಸಿ, ಅವಳಿಂದ ಆ ಒಂದು ಮಾತ್ರೆಯನ್ನು ಇಸಕೊಂಡನು. ಆ ಮಾತ್ರೆಯನ್ನು ನಾಳೆ ಸಾಯಂಕಾಲ ಆರು ಗಂಟೆಗೆ ಶಕಟಾರನಿಗೆ ಕೊಟ್ಟು, ಕೂಡಲೆ ಶಕಟಾರನು ತೀರಿಕೊಂಡನೆಂಬ ಸುದ್ದಿಯನ್ನು ಅಮಾತ್ಯರಾಕ್ಷಸನಿಗೆ ಮುಟ್ಟಿಸಬೇಕೆಂದು, ರಾಕ್ಷಸನು ಬಂದು ಹೋದ ಬಳಿಕ ಶಕಟಾರನ ಶವವನ್ನು ಅವನ ಉತ್ತರಾಧಿಕಾರಿಗಳಾರಾದರೂ ದೊರೆತರೆ ಅವರಿಗೆ ಕೊಡುವೆನೆಂದು ರಾಕ್ಷಸನಿಂದ ಅಪ್ಪಣೆ ಪಡೆಕೊಂಡು, ರಾತ್ರಿ ಒಂಬತ್ತು-ಹತ್ತು ಗಂಟೆಯ ಸಮಯಕ್ಕೆ ಕಾರಾಗೃಹದ ಹೊರಗೆ ತಂದು, ಅದನ್ನು ಅಲ್ಲಿ ನಿಂತಿರುವ ಲಲಿತೆಯ ಜನರಿಗೆ ಒಪ್ಪಿಸಬೇಕೆಂದು ಗೊತ್ತಾಗಲು, ಬಳಿಕ ಅವರೀರ್ವರೂ ತಮ್ಮ ತಮ್ಮ ಮಾರ್ಗಕ್ಕೆ ಹತ್ತಿದರು.

ಮರು ದಿನ ಸಂಧ್ಯಾ ಸಮಯವು. ಅಂದು ದುರ್ಯೋಗವಿದ್ದದರಿಂದ, ಆಕಾಶವು ಬೆಳಗಿನಿಂದಲೂ ಭೀಷಣ ಮೇಘಾಚ್ಛನ್ನವಾಗಿದ್ದಿತು. ಆ ದಿನ ಸೂರ್ಯದೇವನ ದರುಶನ ಕೂಡ ಯಾರಿಗೂ ಆಗಿರಲಿಲ್ಲ. ಹಗಲಿನಲ್ಲಿಯೇ ಈ ಪ್ರಕಾರ ಮೇಘದಿಂದ ಆವೃತ್ತವಾದ ಮೇದಿನಿಯಲ್ಲಿ ಆ ರಾತ್ರಿ ಬಿದ್ದ ಕಾರ್ಗತ್ತಲೆಯು ನಭೂತಪೂರ್ವವಾಗಿತ್ತು. ಮಧ್ಯಾಹ್ನದಿಂದಲೇ ಗುಡುಗು-ಮಿಂಚುಗಳ ಸಪ್ಪಳವೂ, ಬಿರುಗಾಳಿಯ ಹೊಡೆತವೂ ಏಕೋಪ್ರಕಾರವಾಗಿ ನಡೆಯಿತು. ಅಂದಿನ ಆ ಬಿರುಗಾಳಿಯಿಂದ ಅಡವಿಯಲ್ಲಿಯ ಗಿಡ-ಮರಗಳು ಭೂಮಿಯ ಆಶ್ರಯ ಹೊಂದಿ ಪಾರಾದವೆಂಬದಿಷ್ಟೇ ಅಲ್ಲ; ಆ ಪಾಟಲಿಪುತ್ರ ರಾಜಧಾನಿಯೊಳಗಿನ ಮೂರು-ನಾಲ್ಕು ಅಂತಸ್ತುಗಳ ಎಷ್ಟೋ ಅಟ್ಟಾಲಿಕೆಗಳು ಆ ಬಿರುಗಾಳಿಯ ಹೊಡೆತಕ್ಕೆ ನೆಲಸಮವಾಗದೆ ಇರಲಿಲ್ಲ. ಆದರಿಂದ ಅಂದು ಮೂರನೇ ಪ್ರಹರದಿಂದ ಯಾವ ರಾಜಬೀದಿಗಳಲ್ಲೂ ಜನರು ಸುಳಿದಾಡುತ್ತಿರಲಿಲ್ಲ. ಅಂಗಡಿ-ಬಾಜಾರಗಳು ಮುಚ್ಚಿಹೋಗಿದ್ದವು; ಅಂದಬಳಿಕ ರಾತ್ರಿಯಾದ ಮೇಲೆ ಹಾಗು ಮಳೆ

ಬೀಳಹತ್ತಿದ ಮೇಲೆ ಅಲ್ಲಿ ಸುಳಿದಾಡುವವರಾರು?

ಇಂಥ ಸಮಯದಲ್ಲಿ ಒಂದು ವ್ಯಕ್ತಿಯು ಆ ಘನವಾದ ಮಳೆಯಲ್ಲಿ ತೊಂಯಿಸಿಕೊಳ್ಳುತ್ತ ಊರ ಹೊರಗಿನ ದಾರೀ ಹಿಡಿದು ನಡೆದಿತ್ತು. ಕೆಲ ದಾರೀ ಕ್ರಮಿಸುವಷ್ಟರಲ್ಲಿ ಮಳೆಯ ವೇಗವು ಕಡಿಮೆಯಾಯಿತು ಅದ ರಿಂದ ಆ ವ್ಯಕ್ತಿಯು ಒತ್ತಟ್ಟಿಗೆ ನಿಂತು ಏನನ್ನೋ ಕಿವಿಗೊಟ್ಟು ಕೇಳ ತೊಡಗಿತು. ಯಾಕಂದರೆ, ತನ್ನನ್ನು ಯಾರೋ ಅನುಸರಣ ಮಾಡುತ್ತಿರು ವರೆಂಬ ಸಂಶಯವು ಆ ವ್ಯಕ್ತಿಗೆ ಬಂತು. ಸಪ್ಪಳವು ಕೇಳದ್ದರಿಂದ ಅದು ಪುನಃ ಒತ್ತರದಿಂದ ಸಾಗಹತ್ತಿತು.

ಮತ್ತೆ ಕೆಲ ದಾರೀ ಕ್ರಮಿಸಿದ ಬಳಿಕ ಆ ವ್ಯಕ್ತಿಗೆ ಪುನಃ ಸಂಶಯವು ಪ್ರಾಪ್ತವಾಯಿತು ಅಷ್ಟರಲ್ಲಿ ಅದು ಪಾಟಲಿಪುತ್ರ ರಾಜಧಾನಿಯ ಸ್ಮಶಾನ ಭೂಮಿಯನ್ನು ಪ್ರವೇಶಿಸಿತ್ತು. ಆ ಸ್ಮಶಾನ ಭೂಮಿಯು ಒಳ್ಳೇ ವಿಸ್ತಾ ರವೂ, ಗಿಡ-ಮರಗಳಿಂದ ಪರಿಪ್ಲುತವೂ ಆಗಿದ್ದಿತು. ಸ್ಮಶಾನದ ರೌದ್ರ ರೂಪವು ಅಲ್ಲಿ ಮೂರ್ತಿಮತ್ತಾಗಿ ನೆಲೆಗೊಂಡಿದ್ದು, ಆ ಮೇಘಾಚ್ಛನ್ನ ಕಾರ್ಗತ್ತಲೆಯಲ್ಲಿ ಆ ಪ್ರದೇಶವು ಒಳ್ಳೇ ಭೀಕರವಾಗಿ ಕಾಣಿಸುತ್ತಿದ್ದುದ ರಲ್ಲಿ ಆಶ್ಚರ್ಯವೇನು?

ಸಂಶಯ ಮನಸ್ಕವಾದ ಆ ವ್ಯಕ್ತಿಯು ಕೆಲ ದಾರೀ ಕ್ರಮಿಸುವದು, ನಡುವೆ ತುಸ ವೇಳೆ ನಿಂತು ಯಾರಾದರೂ ತನ್ನನ್ನು ಅನುಸರಿಸಿ ಬರುತ್ತಿರು ವರೇನೆಂಬ ಸಂಶಯದಿಂದ ಕಿವಿಗೊಟ್ಟು ಪದಶಬ್ದವನ್ನು, ಆಲಿಸಿ, ಸಂಶಯ ನಿವಾರಣವಾಗಲು ಪುನಃ ದಾರೀ ನಡೆಯಹತ್ತುವದು. ಹೀಗೆ ಆ ವ್ಯಕ್ತಿಯು ವಿಸ್ತಾರವಾದ ಆ ಸ್ಮಶಾನದ ಮಧ್ಯಭಾಗಕ್ಕೆ ಬರುವಷ್ಟರಲ್ಲಿ ಆ ವ್ಯಕ್ತಿಗೆ ಈ ಮೊದಲಿಗೆ ಬಂದ ಸಂಶಯವು ಸತ್ಯವಾಗಿ, ಮತ್ತೊಂದು ವಸ್ತ್ರಾವೃತ ವ್ಯಕ್ತಿಯು ಆ ಮೊದಲನೇ ವ್ಯಕ್ತಿಯ ಮುಂದೆ ದೂತ್ತೆಂದು ಬಂದು ನಿಂತು, 'ಇಂದಿನ ದುರ್ಯೋಗದ ಕಾರ್ಗತ್ತಲೆಯಲ್ಲಿ ಈ ಸ್ಮಶಾನ ಪ್ರಾಂತದೊಳಗೆ ಒಬ್ಬೊಂಟಿಗಳಾಗಿ ಅಡ್ಡಾಡುವ ಸಾಹಸಿಯು ನೀನಾರು?' ಎಂದು ಗಂಭೀರ ದನಿಯಿಂದ ಕೇಳಿತು

ಆ ಸ್ಮಶಾನದಲ್ಲಿ ಸಂಶಯಮನಸ್ಕಳಾಗಿ ನಡೆದಿದ್ದ ಆ ವ್ಯಕ್ತಿಯು ಬೇರೆ ಯಾರೂ ಆಗಿರದೆ, ನಮ್ಮ ಲಲಿತಾದೇವಿಯೇ ಆಗಿದ್ದಳು. ಮೇಲೆ ವಿವರಿಸಿದಂತೆ ಅವಳಿಗೆ ಇಂದು ರಾತ್ರಿ ಎರಡನೇ ಜಾವದಲ್ಲಿ ಆಕೆಯ ಪತಿಯ ಜೀವನ್ಮೃತ ಶರೀರವು ಲಭಿಸುವದಿದ್ದು, ಅದನ್ನು ತನ್ನ ಗುಪ್ತ ಗುಹೆಗೆ ತೆಗೆದುಕೊಂಡು ಹೋಗುವ ಸಲುವಾಗಿ ಅವಳು ಸೇವಕರನ್ನು ಕರೆತರಲಿಕ್ಕೆ

ಆಗ ನಡೆದಿದ್ದಳು. ತನ್ನ ಕೆಲಸಕ್ಕೆ ಅನುಕೂಲರಾಗುವಂಥ ಸೇವಕರಿಗೆ ಕೈ ತುಂಬ ಹಣವನ್ನು ಕೊಟ್ಟು, ಇಂದು ರಾತ್ರಿ ಸ್ಮಶಾನದೊಳಗಿನ ಇಂಥ ಭಾಗದಲ್ಲಿ, ಇಷ್ಟೊತ್ತಿಗೆ ಬಂದೇ ತೀರಬೇಕೆಂದು ಅವಳು ತಿಳಿಸಿದ್ದಳು; ಹಾಗು ಕಾರಾಗೃಹಕ್ಕೆ ಕರೆದೊಯ್ಯುವದಕ್ಕಾಗಿ ಅವಳು ಈಗ ಅವರನ್ನು ಹುಡುಕುವ ಸಂಧಾನದಲ್ಲಿದ್ದಳು. ಆಗ ಅವಳಿಗೆ ಭೇಟಿಯಾದ ಆ ವಸ್ತ್ರಾವೃತ ವ್ಯಕ್ತಿಯು ಅವಳ ನಿಯೋಜಿತ ಸೇವಕವರ್ಗದೊಳಗಿನದಾಗಿರಲಿಲ್ಲ. ಹಾಗೆ ಆ ವ್ಯಕ್ತಿಯು ಅವಳ ಸೇವಕನೇ ಆಗಿದ್ದರೆ, ಅವಳಿಗೆ ಆ ಬಗೆಯ ಪ್ರಶ್ನೆ ಮಾಡುತ್ತಿರಲಿಲ್ಲ. ಇರಲಿ

ಆ ಆಗುಂತಕ ವ್ಯಕ್ತಿಯ ಪ್ರಶ್ನೆಯನ್ನು ಕೇಳಿ, ಲಲಿತೆಯು ಮೊದಲು ಮನಸ್ಸಿನಲ್ಲಿ ಬಹಳವಾಗಿ ಅಂಜಿಕೊಂಡರೂ, ಆ ಧೈರ್ಯಶಾಲಿನಿಯು ಕ್ಷಣಾರ್ಧದಲ್ಲಿ ಕಲ್ಲೆದೆ ಮಾಡಿಕೊಂಡು, ಆ ವ್ಯಕ್ತಿಗೆ:—ನೀವು ಯಾರೇ ಇರಲೊಲ್ಲಿರೇಕೆ, ನೀವು ನನಗೆ ಯಾವ ಬಗೆಯಿಂದಲೂ ಅನಿಷ್ಟ ಬಗೆಯಲಾರಿರೆಂದು ವಚನಕೊಟ್ಟರೆ, ನಾನು ನನ್ನ ವೃತ್ತಾಂತವನ್ನೆಲ್ಲ ನಿಮಗೆ ತಿಳಿಸುವೆನು.

ಆಗ ಆ ಆಗಂತುಕ ವ್ಯಕ್ತಿಯು:—ನಾನು ಶಾಸ್ತ್ರಾಧ್ಯಯನ ನಿರತನಾದ ಬ್ರಾಹ್ಮಣನು. ಸಾಂಸಾರಿಕರ ಕೂಡ ನನ್ನ ಸಂಪರ್ಕವು ಅತ್ಯಲ್ಪವು. ಈ ಜಗತ್ತಿನಲ್ಲಿ ನನಗೆ ಶತ್ರುಗಳಾರೂ ಇರುವದಿಲ್ಲ. ಒಂದುವೇಳೆ ಯಾವನಾದರೂ ಒಬ್ಬ ಶತ್ರುವಿದ್ದರೆ, ನಾನು ಅವನನ್ನು ನೊರಜಿನಂತೆ ಕ್ಷುಲ್ಲಕವೆಂದು ಭಾವಿಸುವೆನು. ಲೋಕದೊಳಗಿನ ಸರ್ವ ಪ್ರಾಣಿಗಳಿಗೆ ಉಪಕಾರ ಮಾಡುವದೇ ನನ್ನ ಧರ್ಮವು ಆರ್ತ ಹಾಗು ವಿಪತ್‌ಗ್ರಸ್ತರಿಗೆ ನೆರವಾಗುವದೇ ನನ್ನ ಕರ್ತವ್ಯಕರ್ಮವು. ಸ್ತ್ರೀಯರೆಲ್ಲ ನನಗೆ ಮಾತೃಸ್ವರೂಪರು. ಆದುದರಿಂದ ತಂಗೀ, ನೀನು ಹೆದರಬೇಡ. ನಿರ್ಭಯದಿಂದ ನೀನು ನಿನ್ನ ಸಂಗತಿಯನ್ನು ನನಗೆ ನಿವೇದಿಸು. ನಿನಗೆ ನನ್ನಿಂದ ಏನಾದರೂ ಸಹಾಯವಾಗುವಂತಿದ್ದರೆ, ನಾನು ಕೂಡಲೆ ಅದನ್ನು ಮಾಡಲು ಬದ್ಧನಾಗುವೆನು

ಆ ಆಗಂತುಕ ಭೂದೇವನ ನುಡಿಗಳನ್ನು ಕೇಳಿ, ಈತನ ಮಾತಿನಲ್ಲಿ ಕಪಟತನವಿರುವದಿಲ್ಲೆಂಬದು ಲಲಿತೆಗೆ ಕೂಡಲೆ ಖಾತ್ರಿಯಾಗಲು ಅವಳು ಆ ಭೂಸುರನ ಪಾದಗಳಿಗೆ ಪೊಡಮಟ್ಟು:—ಬ್ರಾಹ್ಮಣವರರೇ, ತಮ್ಮ ನಾಮಧ್ಯೇಯವೇನು? ತಮ್ಮ ವಾಸ ಸ್ಥಳವೆಲ್ಲಿ? ಎಂದು ಕೇಳಲು,

ಆ ಬ್ರಾಹ್ಮಣನು:—ತಂಗೀ, ನಿನ್ನ ಪರಿಚಯವನ್ನು ನೀನು ಮೊದಲು ನನಗೆ ಮಾಡಿಕೊಡು, ಬಳಿಕ ನಾನು ನನ್ನ ಹೆಸರು ಹೇಳುವೆನು.

ನಾನೊಬ್ಬಳು ಅನಾಥ ಅಭಾಗಿನಿಯು. ನನ್ನ ವಿಷಯಕ ಮತ್ತಾವ

ಪರಿಚಯವನ್ನು ನಾನು ತಮಗೆ ಮಾಡಿ ಕೊಡಲಿ?

ನೀನು ಈ ಸಂಸಾರದಲ್ಲಿಯ ಒಂದು ವ್ಯಕ್ತಿಯಾಗಿರುವದರಿಂದ, ನಿನಗೆ ಯಾವದೊಂದು ಅಂಕಿತನಾಮವು ಇರಲೇಬೇಕು. ಅದನ್ನೂ ನಿನ್ನ ಪತಿಯ ಹೆಸರನ್ನೂ ಹೇಳು ಗಂಡನ ಹೆಸರನ್ನು ಹೇಳಲಿಕ್ಕೆ ಸಂಕೋಚ ವಾಗುತ್ತಿದ್ದರೆ, ನಿನ್ನ ತಂದೆಯ ಹೆಸರನ್ನಾದರೂ ಹೇಳು. ಈ ಪಾಟಲಿ ಪುತ್ರ ನಗರಿಯಲ್ಲಿ ನನಗರಿಯದ ಯಾವ ಗಂಡಸಾಗಲಿ, ಹೆಂಗಸಾಗಲಿ ಇರುವದಿಲ್ಲ.

ಆಗ ಲಲಿತೆಯು ಮನಸ್ಸಿನಲ್ಲಿ ಆಲೋಚಿಸಿದಳೇನಂದರೆ, ಈ ಕಟ್ಟಾ ಹಾರುವನ ಮುಂದೆ ತನ್ನ ಹುಚ್ಚು-ಹುಳುಕುಗಳನ್ನು ಹೇಳಿಕೊಳ್ಳುತ್ತ ಕಾಲಹರಣ ಮಾಡುವದಕ್ಕಿಂತ, ಈತನಿಗೆ ನಿಜಸ್ಥಿತಿಯನ್ನು ತಿಳಿಸಿ, ಈತನಿಂ ದೇನಾದರೂ ಸಹಾಯವಾದರೆ ಮಾಡಿಕೊಂಡರಾಯಿತೆಂದು ಬಗೆದು, ಆ ಬ್ರಾಹ್ಮಣನನ್ನು ಕುರಿತು:—ಮಹಾಶಯರೇ, ನನ್ನ ಹೆಸರು ಲಲಿತೆಯು. ನಾನು............ಮಂತ್ರಿಯ ಪರಿತ್ಯಕ್ತ ಭಾರ್ಯೆಯು.

ಬ್ರಾಹ್ಮಣ:—ಏನಂದಿ? ನೀನು ಲಲಿತಾದೇವಿಯೋ? ಶಕಟಾರ ಮಂತ್ರಿಯ ಭಾರ್ಯೆಯೋ? ನೀನು ನಮ್ಮ ಸ್ವಾಮಿಗಳ ಆಶ್ರಮದಲ್ಲಿ ಕೆಲ ದಿನಗಳ ವರೆಗೆ ವಾಸಿಸಿದ್ದಿಲ್ಲವೇ?

ಲಲಿತೆಯು ಯೋಗಾನಂದ ಸ್ವಾಮಿಗಳಲ್ಲಿ ವಾಸಿಸಿದ್ದೇನೋ ನಿಜವು; ಆದರೆ ಅಲ್ಲಿ ಆವಳು ಈ ಬ್ರಾಹ್ಮಣನನ್ನು ಎಂದೂ ನೋಡಿರಲಿಲ್ಲ ಆಗ ಅವಳು ವಿಸ್ಮಯಾಶ್ಚರ್ಯಾನ್ವಿತಳಾಗಿ:—ಬ್ರಾಹ್ಮಣಪುಂಗವರೇ,ತಾವಂತೂ ನನ್ನ ಸಂಬಂಧದ ಎಲ್ಲ ಸಂಗತಿಗಳನ್ನೂ ಬಲ್ಲವರಾಗಿರುತ್ತೀರಿ; ಆದರೆ ನನಗೆ ಮಾತ್ರ ತಮ್ಮ ಪರಿಚಯವು ಹತ್ತಲೊಲ್ಲದು

ಬ್ರಾಹ್ಮಣ:—ತಂಗೀ, ಶಾಂಡಿಲ್ಯ ಗೋತ್ರದಲ್ಲಿ ಜನಿಸಿದ ನಾನು, ಸ್ವಾಮೀ ಯೋಗಾನಂದರ ಪ್ರಿಯಶಿಷ್ಯನು ಜನರು ನನಗೆ ಚಾಣಕ್ಯ ನೆಂಬ ಹೆಸರಿನಿಂದ ಕರೆಯುತ್ತಿರುತ್ತಾರೆ.

ಚಾಣಕ್ಯ ಎಂಬ ಶಬ್ದವನ್ನು ಕೇಳಿದ ಕೂಡಲೆ ಲಲಿತೆಯು ಭಯ ದಿಂದ ನಡುಗಲಾರಂಭಿಸಿದಳು ಅವಳ ಬಾಯಿಂದ ಮತ್ತೆ ಶಬ್ದಗಳೇ ಹೊರಡದಾದವು ಆಗ ಅವಳು ಭಯ-ಭಕ್ತಿಗಳಿಂದ ಯುಕ್ತಳಾಗಿ ಪುನಃ ಆ ಬ್ರಾಹ್ಮಣ-ಚಾಣಕ್ಯ-ನಿಗೆ ನಮಸ್ಕಾರ ಮಾಡಿದಳು.

ಆ ಬ್ರಾಹ್ಮಣನು ಸಂತೋಷಭರಿತನಾಗಿ ಲಲಿತೆಯನ್ನು ಕುರಿತು:— ತಂಗೀ, ಲಲಿತಾದೇವಿ, ಸಮೀಪದಲ್ಲಿಯೇ ನನ್ನ ಪರ್ಣಕುಟೀರವಿರುತ್ತದೆ.

ಪ್ರತಿ ಅಮಾವಾಸ್ಯಾದಿ ಯೋಗಗಳಲ್ಲಿ ತಾಂತ್ರಿಕ ಕ್ರಿಯೆಗಳನ್ನು ಸಾಧಿಸುವ ಸಲುವಾಗಿ ನಾನು ಈ ಸ್ಮಶಾನ ಭೂಮಿಯಲ್ಲಿಯೇ ನನ್ನ ಬೀಡಾರ-ಪರ್ಣ ಕುಟೀರ ವನ್ನು ಸ್ಥಾಪಿಸಿಕೊಂಡಿರುತ್ತೇನೆ. ಈಗ ನೀನು ಆ ನನ್ನ ಬಿಡಾರಕ್ಕೆ ನಡೆ.

ಮತ್ತಾವ ಸಮಯದಲ್ಲಾದರೂ ಆ ಬ್ರಾಹ್ಮಣನು ತನ್ನ ಮನೆಗೆ ಬರಲಿಕ್ಕೆ ಲಲಿತೆಗೆ ಹೇಳಿದ್ದರೆ, ಅವಳು ಕೊಂಚವೂ ಸಂಕೋಚತಾಳದೆ, ಆಗಲೇ ಅಲ್ಲಿಗೆ ಹೋಗಿಬಿಡುತ್ತಿದ್ದಳು; ಆದರೆ ಇಂದು ಅವಳು ಹಾಗೆ ಮಾಡಲಿಲ್ಲ ತನ್ನ ಕೆಲಸಕ್ಕೋಸ್ಕರ ಅವಳು ಚಾಣಕ್ಯಪಂಡಿತನ ಆದೇಶವನ್ನು ಪರಿಪಾಲಿಸಲಿಕ್ಕೆ ಮನಸ್ಸಾ ಸಂಕೋಚ ತಾಳಿದಳು. ಈ ಬ್ರಾಹ್ಮಣನ ಮಾತು ಕೇಳಿ, ಈಗ ನಾನು ಇವನ ಕುಟೀರಕ್ಕೆ ಹೋದರೆ, ವೃಥಾ ಕಾಲಹರಣವಾದೀತೆಂದೂ, ಅದರಿಂದ ತನ್ನ ಪತಿಯ ಪ್ರಾಣರಕ್ಷಣೆ ಮಾಡುವದು ಅಸಾಧ್ಯವಾದೀತೆಂದೂ ಲಲಿತೆಗೆ ಅನಿಸಿದ್ದರಿಂದ, ಅವಳು ಅವನೊಡನೆ ಹೋಗಲಿಕ್ಕೆ ಒಪ್ಪದೆ ಸುಮ್ಮನೆ ನಿಂತುಕೊಂಡಳು.

ತನ್ನ ಪ್ರಶ್ನೆಗೆ ಉತ್ತರ ಕೊಡದ ಆ ಸ್ತ್ರೀಯ ಭಾವವನ್ನು ಚಾಣಕ್ಯನು ಅರಿತು, ಅವನ ಮನದಲ್ಲಿ ಆ ಸ್ತ್ರೀಯ ಬಗ್ಗೆ ದುರಭಿಪ್ರಾಯವುಂಟಾಗತೊಡಗಿತು ಲಲಿತೆಯು ಶಕಟಾರನ ಪತ್ನಿಯೆಂಬದು ಚಾಣಕ್ಯನಿಗೆ ಚೆನ್ನಾಗಿ ಗೊತ್ತಿತ್ತು. ಶಕಟಾರನು ಗುಣಗ್ರಾಹಿಯಾಗಿದ್ದು, ಚಾಣಕ್ಯನ ವಿಷಯವಾಗಿ ಅವನಲ್ಲಿ ವಿಶೇಷ ಆದರವಿದ್ದವರಿಂದ, ಅವನು ಮಂತ್ರಿಯಿದ್ದಾಗಿನಿಂದ ಅವರೀರ್ವರಲ್ಲಿ ಒಳ್ಳೇ ಸ್ನೇಹಸಂಬಂಧವಿದ್ದಿತು. ಅದರಿಂದ ಲಲಿತೆಯ ಸಂಬಂಧದ ಸರ್ವ ವಿಷಯವೂ ಇವನಿಗೆ ಚೆನ್ನಾಗಿ ಗೊತ್ತಾಗಿತ್ತು. ಆಗ ಅವನು ಗಂಭೀರವಾಣಿಯಿಂದ:—ತಂಗೀ, ಲಲಿತಾ, ನಿನ್ನ ಪತಿಯು ನನ್ನ ಪರಮ ಸ್ನೇಹಿತನು. ಅವನು ಮಗಧ ದೇಶದ ಮಂತ್ರಿಯಾಗಿರುತ್ತಿರುವಾಗ ನನಗೆ ಬಹಳ ಉಪಕಾರ ಮಾಡಿರುತ್ತಾನೆ. ಆ ನನ್ನ ಸ್ನೇಹಿತನ ಹಿತಕ್ಕಾಗಿಯೇ ನಾನು ಆ ಅಮಾತ್ಯರಾಕ್ಷಸನ ವಿನಾಶಕ್ಕೆಂದು ಎಷ್ಟೋ ತಂತ್ರಗಳನ್ನು ಮಾಡಿದೆನು; ಆದರೆ ಆಯುತ ಕಾಲಕ್ಕೆ ವಿಘ್ನವುಂಟಾದುದರಿಂದ, ನಾನು ಅದರಿಂದ ಪೂರ್ಣ ಮನೋರಥನಾಗಿರುವದಿಲ್ಲ. ನೀನು ನನ್ನ ಸ್ನೇಹಿತನ ಪರಿತ್ಯಕ್ತಪತ್ನಿಯು. ನಿನ್ನ ಚಾರಿತ್ರ್ಯವು ಚನ್ನಾಗಿರುವದಿಲ್ಲೆಂಬ ಸಂಗತಿಯೂ ನನ್ನ ಕರ್ಣಗೋಚರವಾಗಿರುತ್ತದೆ. ಹಾಗೆ ನೀನು ಸುಚರಿತ್ರಳೇ ಆಗಿದ್ದರೆ, ಶಕಟಾರನಂಥ ರಾಜಮಂತ್ರಿಯು ನಿನ್ನಂಥ ರೂಪವತಿ ತರುಣ ಭಾರ್ಯೆಯನ್ನು ಪರಿತ್ಯಜಿಸುವದುಂಟೇ

ಈಗ ಸತ್ಯ-ಸತ್ಯವಾಗಿ ಹೇಳು, ನೀನು ಇಲ್ಲಿಗೆ ಯಾವ ದುಷ್ಟ ಉದ್ದೇಶಕ್ಕಾಗಿ ಬಂದಿರುವೆಯೆಂಬುದನ್ನು?

ಚಾಣಕ್ಯನ ಈ ಮರ್ಮಭೇದಕ ಭಾಷಣದಿಂದ ಲಲಿತೆಯು ಸಹಸ್ರಾರು ಚೇಳು ಕಚ್ಚಿಸಿಕೊಂಡ ಉನ್ಮಾದಿನಿಯಂತೆ ತೋರಹತ್ತಿದಳು. ಆಗ ಅವಳು ಕೆರಳಿದ ಹೆಣ್ಣು ಹುಲಿಯಂತೆ ಗರ್ಜಿಸುತ್ತ ಚಾಣಕ್ಯನಿಗೆ:—ತಾವು ಮಹಾ ಪಂಡಿತರೂ ಪ್ರಾಜ್ಞರೂ ಹಾಗು ಬ್ರಹ್ಮತೇಜದಿಂದ ಯುಕ್ತರೂ ಆದ ಬ್ರಾಹ್ಮಣರಾಗಿರುತ್ತೀರಿ. ಪಂಡಿತವರ್ಯರೇ, ಬ್ರಾಹ್ಮಣರು ಶ್ರೀಮನ್ನಾರಾಯಣನಂತೆ ಸರ್ವಾಂತರ್ಯಾಮಿಗಳೆಂದು ನಾನು ಹಿರಿಯರಿಂದ ಕೇಳಿ ತಿಳಿದಿರುತ್ತೇನೆ; ಆದರೆ ನಿಮ್ಮಂಥ-ಉದಾಹರಣೆ ತಕ್ಕೊಳ್ಳುತಕ್ಕಂಥ-ಶ್ರೇಷ್ಠ ಬ್ರಾಹ್ಮಣರಲ್ಲಿ ಕೂಡ ಆ ಶಕ್ತಿಯು ಇತ್ತೀಚೆಗೆ ಲೋಪವಾಗಿದೆಯೆಂಬಂತೆ ಅನುಭವ ಬರಹತ್ತಿದೆ ಭೂದೇವನೇ, ನಾನು ಸತಿಯೋ-ಅಸತಿಯೋ ಎಂಬದರ ನಿಜಾಂಶವನ್ನು ನೀವು ನಿಮ್ಮ ತಪಸ್ಸು-ಯೋಗ-ಬಲದಿಂದ ತಿಳಿದುಕೊಳ್ಳಲಾರಿರಾ? ಒಂದುವೇಳೆ ಸಾವಿತ್ರಿಯು ಅಸತಿಯಾಗಿದ್ದರೆ, ದಮಯಂತಿಯು ಅಸತಿಯಾಗಿದ್ದರೆ ನನ್ನನ್ನೂ ಅಸತಿಯೆಂದೇ ಭಾವಿಸಿರಿ, ಆದರೆ ಸತಿಯ ತೇಜವು ಅನೇಕ ಪ್ರಸಂಗಗಳಲ್ಲಿ ಬ್ರಹ್ಮತೇಜಕ್ಕಿಂತಲೂ ಹೆಚ್ಚು ಪ್ರಕಾಶಿಸಿ, ಅಘಟಿತ ಘಟನೆಗಳನ್ನು ಮಾಡುತ್ತದೆಂಬದನ್ನು ಚೆನ್ನಾಗಿ ಲಕ್ಷ್ಯದಲ್ಲಿಡಿರಿ. ಸತೀ ಸಾವಿತ್ರಿಯು ತನ್ನ ಪ್ರಭಾವದಿಂದ ಸತ್ತು ಹೋಗಿದ್ದ ತನ್ನ ಪತಿಯನ್ನು ಬದುಕಿಸಿಕೊಂಡಳು ಎಂಥ ಬ್ರಹ್ಮನಿಷ್ಠರಿಂದಲೂ ಇಂಥ ಅಘಟಿತ ಘಟನೆಗಳು ಸಂಭವಿಸುವದು ವಿರಳವೆಂದೇ ಹೇಳಬೇಕಾಗುವದು ತಾವು ಈ ಮಗಧ ದೇಶದಲ್ಲಿ ಅತ್ಯಂತ ಶ್ರೇಷ್ಠ ಪಂಡಿತರೂ ಶಾಸ್ತ್ರಜ್ಞರೂ ಆಗಿರುತ್ತೀರಿ; ಹಾಗು ಮಹಾಜ್ಞಾನಿ ಸ್ವಾಮಿ ಯೋಗಾನಂದರ ಪರಮ ಶಿಷ್ಯರೆಂದೆನಿಸಿಕೊಳ್ಳುತ್ತಿರುವಿರಿ ತಮ್ಮಂಥವರಿಗೆ ನನ್ನ ವಿಷಯವಾಗಿ ಇಷ್ಟು ಅನಿಷ್ಟ ಭ್ರಮವಾಗಿದ್ದೀತೆಂದು ನಾನು ತಿಳಿದಿದ್ದಿಲ್ಲ. ಈ ಆಕಾಶ ಮಧ್ಯದಲ್ಲಿ ಯಾವ ಸತ್ ಚಿತ್ ಆನಂದಮಯನಾದ ಪರಮಾತ್ಮನು ನೆಲಿಸಿರುವನೋ, ಅವನೇ ನನ್ನ ಚಾರಿತ್ರ್ಯಕ್ಕೆ ಸಾಕ್ಷಿಭೂತನು. ನಾನು ತಪ್ಪಿತಪ್ಪಿಯಾಗಿ ಒಮ್ಮೆಯಾದರೂ ನನ್ನ ಪತಿಯ ವಿನಃ ಬೇರೆ ಪುರುಷನನ್ನು ಮನಸ್ಸಿನಲ್ಲಿ ಚಿಂತಿಸಿಕೊಂಡಿದ್ದರೆ ಅಥವಾ ಬೇರೆ ಬಗೆಯಿಂದ ಆಶ್ರಯಕೊಟ್ಟಿದ್ದರೆ, ಈಗಿಂದೀಗಲೆ ಈ ಆಕಾಶದಲ್ಲಿ ಸಂಚರಿಸುತ್ತಿರುವ ವಜ್ರವು ನನ್ನ ತಲೆಯ ಮೇಲೆ ಬಿದ್ದು ನನ್ನ ಅಂತವಾಗಲಿ!

ಲಲಿತೆಯಿಂದ ಇದಕ್ಕೂ ಹೆಚ್ಚು ಮಾತಾಡುವದಾಗಲಿಲ್ಲ. ಅವಳ

ರೋದನ ಮಾಡಲಾರಂಭಿಸಿದಳು. ಅವಳ ಅಸ್ಫುಟ ಅಳುವ ಧ್ವನಿಯು ಚಾಣಕ್ಯನ ಕಿವಿಗೆ ಬಿದ್ದಿತು. ಆಗ ಚಾಣಕ್ಯನು ತುಸ ಹೊತ್ತು ಅಂತರಂಗ ದಲ್ಲಿ ವಿಚಾರಿಸಿಕೊಂಡು ಲಲಿತೆಯನ್ನು ಕುರಿತು:—ತಾಯಿ, ಲಲಿತಾ ದೇವೀ, ಕೇವಲ ಭ್ರಮೆಗೀಡಾಗಿ ನಾನು ನಿನ್ನ ಅವಹೇಲನೆ ಮಾಡಿದೆನು. ಆ ನನ್ನ ತಪ್ಪನ್ನು ಕ್ಷಮಿಸು ಎಂಥ ಪಂಡಿತ-ಶಾಸ್ತ್ರಜ್ಞ-ಯೋಗಿಯಾದರೂ ನಾನೂ ಮನುಷ್ಯನಲ್ಲವೇ? ಅದರಿಂದ ನಾನು ಭ್ರಮೆಗೀಡಾದದ್ದು ಸ್ವಾಭಾ ವಿಕವಿದೆ; ಇರಲಿ. ತಂಗೀ, ನೀನಿಂಥ ಕಾರ್ಗತ್ತಲೆಯಲ್ಲಿ ಈ ಸ್ಮಶಾನ ಭೂಮಿಗೆ ಒಬ್ಬೊಂಟಿಗಳಾಗಿ ಬಂದ ಕಾರಣವೇನು? ಅದನ್ನು ನನಗೆ ಸ್ಪಷ್ಟವಾಗಿ ಹೇಳು. ನಾನು ನಿನಗೆ ಪರಕೀಯನಲ್ಲ ನಿನ್ನ ಪತಿಯ ಜೀವದ ಗೆಳೆಯನು. ನನ್ನಿಂದ ನಿನಗೆ ಯೋಗ್ಯ ಸಹಾಯವಾಗದೆ ಇರದು.

ಚಾಣಕ್ಯನ ಈ ಮಾತನ್ನು ಕೇಳಿ, ಮಾನೀ ಸ್ವಭಾವದ ಆ ಲಲಿತಾ ದೇವಿಯ ಸಿಟ್ಟು ತುಸ ಇಳಿಯಿತು ಪ್ರಕೃತಿಸ್ಥಳಾದ ಬಳಿಕ ತಾನು ತನ್ನ ಗಂಡನನ್ನು ಸೆರೆಮನೆಯಿಂದ ಮುಕ್ತಮಾಡುವದಕ್ಕಾಗಿ ಮಾಡಿರುವ ಉಪಾ ಯವನ್ನೂ, ಕಾರಾಗೃಹದ ಮುಖ್ಯಸ್ಥನಾದ ಚಂದ್ರಪಾಲನು ತನಗೆ ಸಹಾ ಯ ಮಾಡುವ ವಿಷಯವಾಗಿ ವಚನಬದ್ಧನಾದುದನ್ನೂ ಅವಳು ಚಾಣಕ್ಯ ನಿಗೆ ವಿಶದವಾಗಿ ತಿಳಿಸಿದಳಲ್ಲದೆ, ತಾನು ಈಗ ತನ್ನ ನಿಯೋಜಿತ ಸೇವಕ ರನ್ನು ಹುಡುಕುವದಕ್ಕಾಗಿ ಇಲ್ಲಿಗೆ ಬಂದಿರುತ್ತೇನೆಂಬ ಸಂಗತಿಯನ್ನೂ ಹೇಳಿದಳು.

ಆ ಸಂಗತಿಯನ್ನು ಕೇಳಿ ಚಾಣಕ್ಯಮುನಿಯು ಎಷ್ಟೋ ಹೊತ್ತಿನ ವರೆಗೆ ಸ್ತಬ್ಧನಾಗಿ ನಿಂತು ಆಲೋಚಿಸಿದನು. ಆಗ ಶಕಟಾರನನ್ನು ಮುಕ್ತ ಮಾಡುವ ಲಲಿತೆಯ ಯೋಜನೆಯು ಅವನಿಗೆ ಬಹು ಭಯಂಕರವಾಗಿ ತೋರಿತು. ಈ ಹೆಣ್ಣುಮಗಳು ಗಂಡನನ್ನು ಕಾರಾಗೃಹದಿಂದ ಹೇಗಾ ದರೂ ಬಿಡಿಸಿಕೊಂಡು ಬಂದರೂ, ಆ ಸಿರ್ವಿಣ್ಣ ಶರೀರದವನು ಇವಳು ಕೊಟ್ಟ ಆ ಮಾತ್ರೆಯಿಂದ ಪುನರ್ಜೀವಿಯಾಗುವ ಸಂಭವವಿಲ್ಲ ಆ ಮಾ- ತ್ರೆಯ ಪ್ರಯೋಗವು ಎಲ್ಲ ಶರೀರಗಳಿಗೂ, ಎಲ್ಲ ಕಾಲದಲ್ಲಿಯೂ ಸಮ ಭಾವದಿಂದ ನಡೆಯಲಾರದೆಂಬದು ಇವಳಿಗೆ ಗೊತ್ತಿಲ್ಲ. ಅಂತೇ ಇವಳು ಆ ಸಾಹಸಕ್ಕೆ ಹೋಗಿರುವಳು, ಎಂದೆಂದುಕೊಂಡು:—ತಂಗೀ, ನೀನು ಆ ಮಾತ್ರೆಗಳ ವಿಷಯವನ್ನು ಭೈರವಿ ಮಾತಂಗಿಯಿಂದ ತಿಳಿದಿರುವಿಯಷ್ಟೇ!

ಲಲಿತೆ:—ತಮ್ಮ ಅನುಮಾನವು ಸುಳ್ಳಲ್ಲ.

ಚಾಣಕ್ಯ:—ತಂಗೀ, ಆ ಮಾತ್ರೆಯ ಗುಣವನ್ನು ನೀನು ಕೇಳಿ ತಿಳಿ

ದಿರುವಿಯೋ ವಿನಃ, ಅದರ ಪ್ರಯೋಗದ ಅನುಭವವು ನಿನಗಿಲ್ಲ. ಆದರಿಂದ ನೀನು ಇಂಥ ಸಾಹಸಕ್ಕೊಳಗಾಗಿರುವೆ. ಇರಲಿ. ಇದನ್ನೆಲ್ಲ ವಿವರಿಸುತ್ತ ಕೂಡ್ರುವ ಸಮಯವಿದಲ್ಲ,. ತಂಗೀ ನಿನ್ನ ನಿಯೋಜಿತ ಸೇವಕರು ಸಿಗದಿದ್ದರೆ ಅಷ್ಟೇ ಹೋಯಿತು. ನಾನೇ ನಿನ್ನ ಪತಿಯ ದೇಹವನ್ನು ಹೊತ್ತುಕೊಂಡು ಬರುವೆನು, ನಡೆ, ಆದರೆ ನಾವು ಈಗ ಇನ್ನೊಂದು ವ್ಯವಸ್ಥೆ ಮಾಡಿಡಬೇಕು. ಇಲ್ಲದಿದ್ದರೆ ನಾಳೆ ಬೆಳಿಗ್ಗೆ ಅಮಾತ್ಯರಾಕ್ಷಸನಿಗೆ ಸಂಶಯ ಬಂದು, ಅವನು ಪುನಃ ನಿನ್ನ ಗಂಡನ ಶೋಧ ಮಾಡದೆ ಬಿಡಲಿಕ್ಕಿಲ್ಲ. ಅದೇನಂದರೆ, ಶಕಟಾರನು ಸತ್ತನೆಂಬ ಸುದ್ದಿಯು ಅಮಾತ್ಯರಾಕ್ಷಸನಿಗೆ ತಿಳಿಸಲ್ಪಡುವದು; ಹಾಗು ಅವನ ಆಜ್ಞೆಯ ಮೇರೆಗೆ ಶಕಟಾರನ ದೇಹವೂ ಆತನ ಆತ್ಮೀಯರಿಗೆ ಕೊಡಲ್ಪಡುವದು, ಆದರೆ ಆ ದೇಹವಂತೂ ದಹನ ಮಾಡಬೇಕಾದುದಿಲ್ಲ. ಅದನ್ನು ನಿನ್ನ ಗುಹೆಗೆ ಒಯ್ಯಬೇಕಾಗಿದೆ ನಾಳೆ ಬೆಳಿಗ್ಗೆ ಅಮಾತ್ಯ ರಾಕ್ಷಸನಿಗೆ ಇಲ್ಲದ್ದೊಂದು ಸಂಶಯ ಬಂದು, ಅವನು ಶಕಟಾರನ ದೇಹವನ್ನು ಎಲ್ಲಿ ದಹಿಸಿದರೆಂದು ಶೋಧ ಮಾಡಿಸಿದರೆ, ಆತನ ಕಣ್ಣಲ್ಲಿ ಮಣ್ಣು ಹಾಕುವದಕ್ಕಾಗಿ ನಾವೊಂದು ಯುಕ್ತಿ ಮಾಡಿಡಬೇಕಾಗುತ್ತದೆ. ಸಮೀಪದ ನನ್ನ ಪರ್ಣಕುಟೀರದಲ್ಲಿಯ ನಾಲ್ಕಾರು ಹೊರೆ ಒಣ ಕಟ್ಟಿಗೆಗಳನ್ನು ನಾವು ಈಗ ಈ ಸ್ಮಶಾನದಲ್ಲಿ ತಂದಿಡಬೇಕು. ಶಕಟಾರನ ದೇಹವು ನಮ್ಮ ಕೈವಶವಾದ ಕೂಡಲೆ, ನಮ್ಮಲ್ಲಿಯ ಯಾರೊಬ್ಬರು ಬಂದು, ಆ ಕಟ್ಟಿಗೆಯ ರಾಶಿಗೆ ಬೆಂಕೀ ಹಚ್ಚಿ ಹೋಗಬೇಕು. ಅಂದರೆ ನಾಳೆಗೆ ರಾಕ್ಷಸನ ಸಂಶಯಕ್ಕೆ ಆಸ್ಪದವುಳಿಯಲಾರದು

ಲಲಿತೆಯು ಚಾಣಕ್ಯನ ಮಾತಿಗೆ ಸಮ್ಮತಿಸಿದ ಬಳಿಕ ಅವರೀರ್ವರೂ ಅಲ್ಲಿಯೇ ಸಮೀಪದಲ್ಲದ್ದ ಆತನ ಪರ್ಣಕುಟೀರಕ್ಕೆ ಹೋದರು. ಆ ಕುಟೀರದಲ್ಲಿದ್ದ ಒಬ್ಬ ತರುಣ ವಿಧವೆಯು ನಿದ್ರಾವಶಳಾಗಿದ್ದಳು. ಅವಳು ಚಾಣಕ್ಯನ ಒಬ್ಬಳೇ ಒಬ್ಬಳಾದ ಮಗಳು. ಅವಳ ಹೆಸರು ಕಪಾಲಿನಿ ಎಂದು. ಚಾಣಕ್ಯನು ಅವಳ ವಿವಾಹವನ್ನು ಒಬ್ಬ ಸುಶೀಲ ಬ್ರಾಹ್ಮಣ ಪುತ್ರನೊಡನೆ ಶೈಶವಾವಸ್ಥೆಯಲ್ಲಿಯೇ ಮಾಡಿದ್ದನು; ಆದರೆ ವಿಧಿವಶಾತ್ ಲಗ್ನವಾದ ತುಸ ದಿನಗಳಲ್ಲಿಯೇ ಅವಳಿಗೆ ವೈಧವ್ಯವು ಪ್ರಾಪ್ತವಾಗಿತ್ತು. ಈಗ ಅವಳ ವಯಸ್ಸು ಇಪ್ಪತ್ತೈದರ ಒಳ-ಹೊರಗೆ ಇತ್ತು. ಚಾಣಕ್ಯನ ಪತ್ನಿಯು ತೀರಿಕೊಂಡು ನಾಲ್ಕೆಂಟು ವರ್ಷಗಳಾಗಿದ್ದವು. ಚಾಣಕ್ಯನ ಸಮೀಪದ ಆಪ್ತೇಷ್ಟರಾರೂ ಇರಲಿಲ್ಲ. ಇದ್ದ-ಬಿದ್ದ ದೂರಿನ ಆಪ್ತಕೋಟಿಯ ಜನರು ಚಾಣಕ್ಯನ ಸಿಟ್ಟಿಗೆ ಹಾಗೂ ಏಕತಂತ್ರೀಯ ಸ್ವಭಾವಕ್ಕೆ

ಸೇರುತ್ತಿರಲಿಲ್ಲ, ಆದರಿಂದ ಕಪಾಲಿನಿಯು ತಂದೆಯ ಬಳಿಯಲ್ಲಿಯೇ ಇದ್ದು, ಆತನ ಸೇವಾ-ಶುಶ್ರೂಷೆ ಮಾಡುತ್ತ ಕಾಲಹರಣ ಮಾಡುತ್ತಿದ್ದಳು. ಶಕಟಾರ ಮಂತ್ರಿಯನ್ನು ಅಮಾತ್ಯರಾಕ್ಷಸನು ಮೋಸದಿಂದ ಸೆರೆಯಿರಿಸಿದಂದಿನಿಂದ ಚಾಣಕ್ಯ ಪಂಡಿತನು ಪಾಟಲೀಪುತ್ರ ರಾಜಧಾನಿಯೊಳಗಿನ ತನ್ನ ಬಿಡಾರವನ್ನು ತ್ಯಜಿಸಿದನು; ಹಾಗೂ ಗಂಗಾತಟಾಕದ ಆ ವಿಶಾಲವಾದ ಸ್ಮಶಾನ ಭೂಮಿಯಲ್ಲಿ ಒಂದು ಗುಡಿಸಿಲವನ್ನು ಕಟ್ಟಿಕೊಂಡು, ಅಲ್ಲಿಯೇ ಮಂತ್ರ-ತಂತ್ರಗಳ ಸಾಧನೆಯನ್ನು ಮಾಡುತಲಿದ್ದನು.

ಅಲ್ಲಿಗೆ ಹೋದ ಕೂಡಲೆ ಚಾಣಕ್ಯನು ಕಪಾಲಿನಿಯನ್ನು ಎಬ್ಬಿಸಿ, ದೀಪ ಹಚ್ಚಿದನು; ಹಾಗೂ ಲಲಿತೆಗೆ ಅಲ್ಲಿಯೇ ತುಸ ಕೂಡ್ರು ಹೇಳಿ, ತಾನು ತನ್ನ ಗುಡಿಸಲದೊಳಗಿನ ಕಟ್ಟಿಗೆಯ ಹೊರೆಯನ್ನು ಹೊತ್ತೊಯ್ದು, ಸ್ಮಶಾನದ ದಾರಿಯ ಸಮೀಪದಲ್ಲಿಯೇ ಒತ್ತಟ್ಟಿಗೆ ಒಟ್ಟಿ ಬಂದನು. ಇಷ್ಟಾಗುವದರೊಳಗೆ ರಾತ್ರಿಯು ಒಂಬತ್ತು ಮೀರಿತು. ಕೂಡಲೆ ಅವನು ಲಲಿತೆಯೊಡನೆ ನಲಾಂದಾ ಕಾರಾಗೃಹದ ಕಡೆಗೆ ಸಾಗಿದನು ಅವರು ಎಷ್ಟು ಒತ್ತರದಿಂದ ಸಾಗಿದರೂ. ಆ ದುರ್ಗದ ಬಾಗಿಲ ಬಳಿಗೆ ಹೋಗುವಷ್ಟರಲ್ಲ ಹತ್ತು ಹೊಡೆದು ಹೋದವು. ಶಕಟಾರನ ವಿಷಯದ ಎಲ್ಲ ವ್ಯವಸ್ಥೆಯನ್ನು ಮಾಡಿ, ಆ ಶವವನ್ನು ಆತನ ಆಪ್ತೇಷ್ಟರಿಗೆ ಕೊಡಲಿಕ್ಕೆ ಅಮಾತ್ಯನಿಂದ ಪರವಾನಿಗೆ ಸಹ ಪಡೆದು, ಚಂದ್ರಪಾಲನು ಲಲಿತೆಯ ಹಾದೀ ನೋಡುತ್ತ ಕುಳಿತಿದ್ದನು ಹತ್ತು ಹೊಡೆದರೂ ಲಲಿತೆಯು ಬಾರದಿರಲು ಚಂದ್ರಪಾಲನಿಗೆ ಅಂತರಂಗದಲ್ಲಿ ಕಡು ವ್ಯಸನವಾಯಿತು. ಇನ್ನು ಅವನು ತಾನೇ ಆಕೆಯ ಶೋಧಕ್ಕೆ ಹೊರಡತಕ್ಕವನು; ಅಷ್ಟರಲ್ಲಿ ಅಂಡುಮೂಗಿನವನೂ, ಕರೀ ಟೊಣಪನೂ, ಅಲ್ಪ ಬಟ್ಟೆಗಳಿಂದ ಅಂಗಗಳನ್ನು ಆಚ್ಛಾದಿಸಿಕೊಂಡವನೂ ಆದ ಚಾಣಕ್ಯನು ಅಲ್ಲಿಗೆ ಹೋಗಿ, ಲಲಿತೆಯ ಕುರುಹುಗುರತನ್ನು ಚಂದ್ರಪಾಲನಿಗೆ ತೋರಿಸಿದನು. ಆಗ ಲಲಿತೆಯು ಕಾರಾಗೃಹಕ್ಕೆ ತುಸ ದೂರದಲ್ಲಿದ್ದ ಒಂದು ಅಶ್ವತ್ಥವೃಕ್ಷದ ಹೊದರಿನಲ್ಲ ಅವಿತುಕೊಂಡು ಕುಳಿತಿದ್ದಳು.

ಹಗಲಿನಲ್ಲಾಗಿದ್ದರೆ ಪಾಟಲೀಪುತ್ರದೊಳಗಿನ ಪ್ರಸಿದ್ಧ ಪಂಡಿತನಾದ ಆ ಚಾಣಕ್ಯನ ಗುರತು ಚಂದ್ರಪಾಲನಿಗೆ ಹತ್ತದೆ ಇರುತ್ತಿರಲಿಲ್ಲ; ಆದರೆ ಆಗ ಕಗ್ಗತ್ತಲೆಯ ಹೊತ್ತು. ಅದರಲ್ಲಿಯೂ ಅವಸರದ-ಗಾಬರಿಯ ಸಮಯ. ಆದರಿಂದ ಚಂದ್ರಪಾಲನು ಚಾಣಕ್ಯನ ಕಡೆಗೆ ದಿಟ್ಟಿಸಿ ಕೂಡ ನೋಡದೆ, ಶಕಟಾರನ ಶವಸದೃಶ ದೇಹವನ್ನು ಆತನ ವಶಕ್ಕೆ ಕೊಟ್ಟನು ಶಕಟಾರ

ನಿಗೆ ಎಷ್ಟೋ ದಿನಗಳಿಂದ ಅನ್ನ-ನೀರುಗಳಿಲ್ಲದ್ದರಿಂದ, ಅವನ ಶರೀರದಲ್ಲಿ ಅಸ್ಥಿ—ಮಾಂಸಗಳ ಹೊರ್ತು ಏನೂ ಉಳಿದಿರಲಿಲ್ಲ. ಅದು ಬೆಂಡಿನಂತೆ ತೀರ ಹಗುರಾಗಿತ್ತು. ಚಾಣಕ್ಯನು ಮಹಾ ಪರೋಪಕಾರಿಯಿದ್ದದರಿಂದ, ಆತನಿಗೆ ಹೆಣ ಹೊರುವ ಎಷ್ಟೋ ಪ್ರಸಂಗಗಳು ಆಗಾಗ್ಗೆ ಒದಗುತ್ತಿದ್ದವು. ಅವನು ಕೆಲಕೆಲವು ಸಮಯಗಳಲ್ಲಿ ಒಳ್ಳೆ ಭಾರಿ ಹೆಣಗಳನ್ನೂ ಕೂಡ ಇಬ್ಬರೇ ಆಗಲಿ, ಒಬ್ಬನೇ ಆಗಲಿ ಹೊತ್ತೊಯ್ಯುತ್ತಿದ್ದನು. ಅಂಥ ಒಲಿಷ್ಠನಿಗೆ ಶಕಟಾರನ ಆ ಜರ್ಜರ ಶರೀರ ಹೊರುವದೆಂದರೆ ಶ್ರಮವೆನಿಸಲಿಲ್ಲ. ಅವನು ಅದನ್ನು ಒಂದು ಒಟ್ಟೆಯಲ್ಲಿ ಸುತ್ತಿ, ತನ್ನ ಹೆಗಲ ಮೇಲಿಟ್ಟುಕೊಂಡು ನಡೆದನು. ಲಲಿತೆಯೂ ಅವನನ್ನು ಹಿಂಬಾಲಿಸಿದಳು.

ಸ್ಮಶಾನದ ಸಮೀಪಕ್ಕೆ ಬಂದ ಕೂಡಲೆ ಅಲ್ಲಿ ಒತ್ತಟ್ಟಿಗೆ ಆ ದೇಹವನ್ನು ಇಳಿಸಿ, ಲಲಿತೆಗೆ ಅದರ ಬಳಿಯಲ್ಲಿ ಕೂಡ್ರುಹೇಳಿದನು; ಹಾಗು ತಾನು ಈ ಮೊದಲು ಸ್ಮಶಾನದಲ್ಲಿ ಶೇಖರಿಸಿಟ್ಟಿದ್ದ ಕಾಷ್ಠಗಳ ರಾಶಿಗೆ ಬೆಂಕೀ ಹಚ್ಚಿ ಬಂದನು. ಆ ಉರಿಯು ಬಹು ಪ್ರಜ್ವಲವಾಗಿ ಉರಿಯಲಾರಂಭಿಸಿತು. ಇಷ್ಟಾಗುವದರೊಳಗೆ ಆ ರಾತ್ರಿಯ ಎರಡನೇ ಪ್ರಹರ ಮುಗಿದು, ಮೂರನೇ ಪ್ರಹರಕ್ಕೆ ಪ್ರಾರಂಭವಾಯಿತು. ಸ್ಮಶಾನ ಭೂಮಿಯಿಂದ ಲಲಿತೆಯು ಹೋಗತಕ್ಕ ಗುಹೆಯು ಸರಾಸರಿ ಎರಡು ಮೈಲ ದೂರದಲ್ಲಿತ್ತು. ಆದ್ದರಿಂದ ಅವರು ಕೊಂಚವೂ ವಿಲಂಬ ಮಾಡದೆ ಅತ್ತ ಕಡೆಗೆ ನಡೆದರು. ಎಷ್ಟು ಜರ್ಜರ ದೇಹವಾದರೂ ಒಂದು ಆಳನ್ನು ಮತ್ತೊಂದು ಆಳು ಹೊರುವದು ಬಹು ತಿಣ್ಣವಾದ್ದರಿಂದ, ಅರ್ಧ ದಾರಿ ನಡೆದ ಒಳಿಕ ಮಹಾ ಬಲವಂತನಾದ ಚಾಣಕ್ಯನಿಗೆ ಕೂಡ ಆ ಮೃತ ಶರೀರವನ್ನು ಒತ್ತಟ್ಟಿಗಿಳಿಸಿ, ಹೆಗಲಿಗೆ ತುಸ ವಿಶ್ರಾಂತಿ ಕೊಡುವದು ಅವಶ್ಯವೆನಿಸಿತು.

ಅಲ್ಲಿ ಸ್ವಲ್ಪ ವೇಳೆ ವಿಶ್ರಮಿಸಿದ ನಂತರ ಚಾಣಕ್ಯನು ಪುನಃ ಅದನ್ನು ಹೊತ್ತುಕೊಂಡು, ಆ ಅರಣ್ಯಮಧ್ಯಗೊಳಗಿನ ದಾರಿಯಿಂದ ಲಲಿತೆಯ ಆ ಗುಹೆಗೆ ಬರಬೇಕಾದರೆ, ರಾತ್ರಿಯ ತೃತೀಯ ಯಾಮವು ಕೂಡ ಮುಗಿದು, ಪ್ರಭಾತ ಕಾಲವು ಪ್ರಾಪ್ತವಾಯಿತು. ಆಗ ಚಾಣಕ್ಯನು ಲಲಿತೆಯನ್ನು ಕುರಿತು:—ತಂಗೀ ಲಲಿತಾ, ಇನ್ನು ತಡಮಾಡುವದು ಸರಿಯಲ್ಲ. ಬೆಳಗಾಗುವದರೊಳಗೆ ನಿನ್ನ ಗಂಡನಿಗೆ ಚೇತನೆಯುಂಟಾಗುವ ಪ್ರಯತ್ನಮಾಡಬೇಕು. ಬೇಗ ನಡೆ, ಬಾಗಿಲು ತೆರೆ, ಎಂದಂದನು.

ಲಗುಬಗನೆ ಲಲಿತೆಯು ಆ ಗುಪ್ತ ಗುಹೆಯ ಕದವನ್ನು ತೆರೆದಳು. ಕೂಡಲೆ ಚಾಣಕ್ಯನು ಆ ಶವಸದೃಶ ದೇಹವನ್ನು ಒಯ್ದು, ಆ ಗುಹೆಯೊಳಗೆ

ಒಂದು ಮೆತ್ತಗಿನ ಹಾಸುಗೆಯ ಮೇಲೆ ಮಲಗಿಸಿದನು. ಆಗ ಲಲಿತೆಯು ಮೃತಸಂಜೀವಿನೀ ಮಾತ್ರೆಯನ್ನು ಚಾಣಕ್ಯನ ಕೈಯಲ್ಲಿ ಕೊಟ್ಟಳು. ಆತನು ಅದನ್ನು ಬಹು ಎಚ್ಚರಿಕೆಯಿಂದ-ಹೇಗೆ ಕೊಡಬೇಕೋ ಹಾಗೆ-ಕೊಟ್ಟನಲ್ಲದೆ, ಅದನ್ನು ತೆಯ್ದು ಶರೀರದ ಯಾವ ಭಾಗಗಳಿಗೆ ಲೇಪಿಸತಕ್ಕದಿದ್ದಿತೋ ಅಲ್ಲಲ್ಲಿ ಲೇಪಿಸಿ, ಚೆನ್ನಾಗಿ ಕಾಪಿಸಿದನು.

ಕೆಲವು ಕ್ಷಣಗಳೊಳಗೇ ಶಕಟಾರನ ನಾಡಿಗಳು ಚಲಿಸಹತ್ತಿದವು. ಮಂದಮಂದವಾಗಿ ಶ್ವಾಸವೂ ಆಡಲಾರಂಭಿಸಿತು. ಎದೆಯು ಮೆಲ್ಲಮೆಲ್ಲನೆ ಸ್ಫುರಣಗೊಂಡಿತು. ಮುಂದೆ ತುಸ ಹೊತ್ತಿನಲ್ಲೇ ಶಕಟಾರನು ಒಮ್ಮೆ ಕಣ್ಣು ಕೂಡ ತೆರೆದು ಮತ್ತೆ ಮುಚ್ಚಿದನು.

ಮಾತಂಗಿ ಭೈರವಿ ಕೊಟ್ಟಿದ್ದ ಆ ಮೃತಸಂಜೀವಿನೀ ಮಾತ್ರೆಯ ಶಕ್ತಿಯನ್ನು ನೋಡಿ ಲಲಿತೆಯು ವಿಸ್ಮಯಾನ್ವಿತಳಾದಳು. ಶಕಟಾರನು ಸತ್ತಿರದೆ, ಆತನ ದೇಹದಲ್ಲಿ ಮತ್ತೆ ಚೈತನ್ಯವುಂಟಾಗುತ್ತಿರುವುದನ್ನು ನಿರೀಕ್ಷಿಸಿ ಚಾಣಕ್ಯನು ಹೆಚ್ಚಾಗಿ ಹರುಷಗೊಂಡನು. ಆತನು ಮನಸ್ಸಿನಲ್ಲಿ ಭಗವಂತನನ್ನುದ್ದೇಶಿಸಿ:— ಪ್ರಭೋ, ನೀನು ಯಾರನ್ನು ಕಾಪಾಡುತ್ತಿರುವೆಯೋ, ಅವರನ್ನು ಕೊಲ್ಲುವವರಾರು? ಈ ನುಡಿಯ ಪ್ರತ್ಯಕ್ಷ ಪ್ರಮಾಣವು ಈ ಶಕಟಾರನದೇ ಆಗಿರುತ್ತದೆಂಬುದು ಇಂದು ನನ್ನ ಕಣ್ಣಿಗೆ ಬಿತ್ತು. ಭಗವಂತಾ, ನಿನ್ನ ಅಗಾಧ ಲೀಲೆಯನ್ನೆಷ್ಟು ಬಣ್ಣಿಸಿದರೂ ಅಲ್ಪವೇ ಸರಿ!

ಲಲಿತೆಯು ಉತ್ಸುಕತೆಯಿಂದಲೂ ಒಮ್ಮನಸ್ಸಿನಿಂದಲೂ ಪತಿಯಸೇವೆಯಲ್ಲಿ ತೊಡಗಿದಳು. ಆಗ ಚಾಣಕ್ಯನು ಎದ್ದು ನಿಂತು:— ತಂಗೀ, ನೀನು ಬಹು ಎಚ್ಚರದಿಂದ ನಿನ್ನ ಪತಿಯ ಶುಶ್ರೂಷೆ ಮಾಡು. ಈಗ ಆತನಿಗೆ ಚೈತನ್ಯವುಂಟಾಗಹತ್ತಿರುವದು. ಮೈಮೇಲೆ ಸ್ಮೃತಿ ಬರಲಿಕ್ಕೆ ಇನ್ನು ತಡವಾಗಲಾರದು. ಈ ದಿನ ಮಧ್ಯಾಹ್ನದೊಳಗಾಗಿಯೇ ಇವನಿಗೆ ಸಂಪೂರ್ಣ ಸ್ಮೃತಿಯು ಉಂಟಾಗಬಹುದೆಂದು ನನಗನಿಸುತ್ತದೆ. ಪ್ರಾತಃ ಕೃತ್ಯಗಳನ್ನು ಮಾಡುವದಕ್ಕೆ ನನಗೆ ಸಮಯವಾಯಿತು. ಇಲ್ಲಿ ಹಾಲು ಸ್ವಲ್ಪೂ ಇರುವುದಿಲ್ಲ. ತುಸ ಹೊತ್ತಿನೊಳಗೇ ರೋಗಿಗೆ ಹಾಲು ಕೊಡಬೇಕಾದೀತು. ಹಾಲನ್ನೂ ರೋಗಿಗೆ ಬೇಕಾಗುವ ಇತರ ಅತ್ಯಾವಶ್ಯಕ ಪದಾರ್ಥಗಳನ್ನೂ ಸಂಗ್ರಹಿಸಿಕೊಂಡು, ಮಧ್ಯಾಹ್ನ ತಿರುಗುವದರೊಳಗೆ ನಾನು ಇಲ್ಲಿಗೆ ಪುನಃ ಬಂದು ಬಿಡುತ್ತೇನೆ. ಇನ್ನು ನೀನು ಚಿಂತಿಸಲು ಕಾರಣವೇ ಉಳಿದಿರುವದಿಲ್ಲ. ನನ್ನಲ್ಲಿಯ ಇನ್ನೊಂದು ಮಾತ್ರೆಯನ್ನು ಉಪಯೋಗಿಸುವದರಿಂದ ರೋಗಿಗೆ ಅತಿ ತೀವ್ರ ಚೈತನ್ಯ ಮತ್ತು ಶಕ್ತಿ ಬರುವವು. ನಾನು ಅದನ್ನು

ತರುವೆನು, ಅಲ್ಲದೆ ಇಲ್ಲಿ ಕೆಲ ಕಾಲ ನಿನ್ನ ಜೊತೆಗೆ ಇರಲಿಕ್ಕೆ ನಮ್ಮ ಕಪಾಲಿನಿಯನ್ನೂ ಕರೆದುಕೊಂಡು ಬರುವೆನು, ಎಂದು ಹೇಳಿ, ಹೊರಡಲನುವಾದನು. ಆಗ ಲಲಿತೆಯು ಆ ಭೂಸುರನ ಪಾದಗಳಿಗೆ ಪೊಡಮಟ್ಟು ಅವನಿಂದ ಸೌಭಾಗ್ಯಸೂಚಕ ಆಶೀರ್ವಾದವನ್ನು ಹೊಂದಿದಳು!

---

## ಅಪಕಾರಮಾಡಿದವರಿಗೂ ಉಪಕಾರಮಾಡು

ಅಲ್ಪ ದಿನಗಳಲ್ಲಿಯೇ ಆ ಗುಹೆಯೊಳಗೆ ನಿಂತಿದ್ದ ಶಕಟಾರನು ಪೂರ್ವವತ್ ಧಷ್ಟ-ಪುಷ್ಟ ಶರೀರದವನಾದನು ಸ್ಮೃತಿಯುಂಟಾದ ಮೇಲೆ ಆ ಚಾಣಕ್ಯಪಂಡಿತನು ಲಲಿತೆಯ ಗುರತನ್ನು ಅವನಿಗೆ ಮಾಡಿಕೊಟ್ಟು, ಈ ಸಾಧ್ವಿಯ ಪ್ರಯತ್ನದಿಂದಲೇ ನೀನು ಪುನರ್ಜೀವಿಯಾಗಿರುವೆಯೆಂದು ಹೇಳಿದನು; ಹಾಗೂ ಆಕೆಯ ಸಚ್ಚರಿತ್ರದ ಬಗ್ಗೆ ಆತನೆದುರಿಗೆ ತನ್ನ ಗುರುಸಾಕ್ಷಿಯಾಗಿ ಪ್ರಮಾಣ ಮಾಡಿ ಹೇಳಿದನು. ಶಕಟಾರನಿಗೆ ತಾನು ಜೀವಿಸಿದ್ದು ಮೊದಮೊದಲು ಅಶಕ್ಯವೆನಿಸಿದರೂ, ಲಲಿತೆಯ ಪ್ರೇಮಲ ಶುಶ್ರೂಷೆಯಿಂದಲೂ, ಚಾಣಕ್ಯನ ಪರಮ ಸ್ನೇಹಭಾವದಿಂದಲೂ, ಅವನಲ್ಲಿ ಹೊಸ ಚೈತನ್ಯವುಂಟಾಗಿ, ಆತನು ಬಹು ಬೇಗ ಶಕ್ತಿವಂತನಾದನು. ಶಕಟಾರನಿಗೆ ತುಸ ಅಡ್ಡಾಡುವ ಶಕ್ತಿ ಬಂದ ಕೂಡಲೆ ಚಾಣಕ್ಯನು ಕಪಾಲಿನಿಯನ್ನು ಅಲ್ಲಿಂದ ಕರೆದೊಯ್ದನಲ್ಲದೆ, ಆ ಶಕಟಾರ ದಂಪತಿಗಳನ್ನು ಅಲ್ಲಿ ಇರಗೊಡದೆ ಅವರನ್ನು ಗುಪ್ತವಾಗಿ ಪಾರ್ವತ್ಯರಾಜ್ಯಕ್ಕೆ ಕರೆದೊಯ್ದು ಅಲ್ಲಿಯ ಆಗಿನ ಪಾರ್ವತೇಶನಾದ ಮಲಯಕೇತುವಿನ ಆಶ್ರಯದಲ್ಲಿಟ್ಟನು.

ಶಕಟಾರನಿಗೆ ಮಲಯಕೇತುವಿನ ಪರಿಚಯವು ಚನ್ನಾಗಿತ್ತೆಂದು ಬೇರೆ ಹೇಳಬೇಕಾದುದಿಲ್ಲ ಯಾಕಂದರೆ ಅವನು ಈ ಮೊದಲು ಮಗಧದ ಮುಖ್ಯ ಅಮಾತ್ಯನಾಗಿದ್ದನು ಮಲಯಕೇತುವಿನ ಆಶ್ರಯದಲ್ಲಿಯೇ ಮಹಾಪದ್ಮನಂದನ ಪುತ್ರನೂ, ಮಗಧದ ಯುವರಾಜನೂ ಆದ ಚಂದ್ರಗುಪ್ತನೂ ಇರುತ್ತಿರುವದನ್ನು ಕಂಡು; ಶಕಟಾರನಿಗೆ ಒಮ್ಮೆಲೆ ಕಡು ದುಃಖವೆನಿಸಿದರೂ, ಭವಿತವ್ಯದ ಮುಂದೆ ಯಾರ ಆಟವೂ ಸಾಗುವದಿಲ್ಲೆಂಬ ಮಾತು ನೆನಪಿಗೆ ಬಂದ ಬಳಿಕ, ಅವನು ಒಂದು ಬಗೆಯಿಂದ ಸಮಾಧಾನವೆನಿಸಿಕೊಂಡನು. ಹೀಗೆ ಆಕಸ್ಮಿಕವಾಗಿ ಶಕಟಾರನಂಥ ಮಹಾ ಪ್ರವೀಣ ಸಚಿವವರನು ತಮಗೆ ದೊರೆತದ್ದಕ್ಕಾಗಿ ಮಲಯಕೇತು-ಮಂದಾಕಿನಿಯರಿಗುಂ

ಟಾದ ಸಂತೋಷವಂತೂ ಆಕಾಶ-ಪಾತಾಳಗಳಲ್ಲಿ ಹಿಡಿಸದಾಯಿತು ಆಗ ಅವರೆಲ್ಲರೂ ಕೂಡಿ ತಮ್ಮ ಶತ್ರುವಾದ ಮಗಧೇಶ್ವರ-ನಂದಮಹಾರಾಜ-ನನ್ನು ಹೇಗೆ ಹಣ್ಣಿಗೆ ತರಬೇಕೆಂಬದನ್ನು ಆಲೋಚಿಸತೊಡಗಿದರು.

ಶರತ್ಕಾಲದ ಒಂದು ಪೌರ್ಣಿಮೆಯ ರಾತ್ರಿಯು ಮಲಯಪುರಿಯ ಸಮಸ್ತ ಪ್ರಜೆಗಳು ಊಟ-ಉಡಿಗೆಗಳನ್ನು ತೀರಿಸಿಕೊಂಡು ನಿದ್ರಾಪರ ವಶರಾಗಿರುತ್ತಾರೆ. ಹಿಟ್ಟು ಚಲ್ಲಿದ ಹಾಗೆ ಎಲ್ಲೆಲ್ಲಿಯೂ ಸ್ವಚ್ಛವಾದ ಬೆಳದಿಂಗಳು ಬಿದ್ದಿದೆ. ಮಧ್ಯರಾತ್ರಿಯು ಮೀರತೊಡಗಿದೆ. ಈ ವರೆಗೆ ಮಂದಾಕಿನಿ ಹಾಗು ಚಂದ್ರಗುಪ್ತರು ಒಂದು ಉಪ್ಪರಿಗೆಯ ಮೇಲಿನ ಪಟಾಂಗಣದಲ್ಲಿ ಬೆಳದಿಂಗಳೊಳಗೆ ಕುಳಿತು ಸುಖ-ಸಮಾಧಾನದ ಸಂಭಾಷಣದಲ್ಲಿ ತೊಡಗಿದವರು ಈಗ ತಮ್ಮ ತಮ್ಮ ಮಹಾಲಿಗೆ ಹೋಗಿ ನಿದ್ರಾ ಪರವಶರಾಗಿದ್ದರು ಹೋಗಿ ಮಲಗಿದ ಕೂಡಲೆ ಗಾಢನಿದ್ರೆಯು ಮಂದಾಕಿನಿಯನ್ನು ಆವರಿಸಿತು; ಆದರೆ ಚಂದ್ರಗುಪ್ತನಿಗೆ ಮಾತ್ರ ಇನ್ನೂ ನಿದ್ರೆಯು ಹತ್ತಿರಲಿಲ್ಲ ಅವನು ತನ್ನ ಮೃದುಶಯ್ಯೆಯ ಮೇಲೆ ಅತ್ತಿಂದ ಇತ್ತ ಇತ್ತಿಂದ ಅತ್ತ ಹೊರಳಾಡುತ್ತ, ಯಾವದೋ ಒಂದು ವಿಚಾರದಲ್ಲಿ ಮಗ್ನನಾಗಿದ್ದನು. ಆ ಮಲಯಪುರದ ರಾಜಪ್ರಾಸಾದದ ಯಾವುದೊಂದು ಭಾಗದಲ್ಲಿ ಒಂದು ಸೂಜಿ ಬಿದ್ದರೂ ಸಹ ಅದರ ಸಪ್ಪಳವು ಸಹಜವಾಗಿ ಕೇಳುವಷ್ಟು ಶಾಂತತೆಯು ಆಗ ಅಲ್ಲಿ ನೆಲೆಗೊಂಡಿತ್ತು.

ಇಂಥೀ ಸಮಯದಲ್ಲಿ ಚಂದ್ರಗುಪ್ತನು ಮಲಗಿದ್ದ ಮಹಾಲಿನೊಳಗಿನ ಒಂದು ಗುಪ್ತದ್ವಾರವು ಮೆಲ್ಲನೆ ತೆರೆಯಲ್ಪಟ್ಟಿತು. ಚಂದ್ರಗುಪ್ತನಿಗೆ ನಿದ್ರೆಯು ಹತ್ತಿರದ್ದರಿಂದ. ಅವನು ಹಾಸಿಗೆಯ ಮೇಲೆ ಮಲಗಿಕೊಂಡೆ ಆ ದ್ವಾರದ ಕಡೆಗೆ ದೃಷ್ಟಿಯನ್ನಿಟ್ಟನು ಆ ಬಾಗಿಲದೊಳಗಿಂದ ಸಭ್ಯ ತರದ ಪೋಷಾಕನ್ನು ಧರಿಸಿದ ಒಂದು ತರುಣ ವ್ಯಕ್ತಿಯು ಕೈಯಲ್ಲಿ ಒಂದು ನಿಡಿದಾದ ಕತ್ತಿಯನ್ನು ಹಿಡಿದುಕೊಂಡು ಬಂದಿತು. ಚಂದ್ರಗುಪ್ತನಿಗೆ ಆ ವ್ಯಕ್ತಿಯ ಗುರತು ಒಮ್ಮೆಲೆ ಹತ್ತದಿದ್ದರೂ, ತಾಸ ಹೊತ್ತಿನಲ್ಲಿಯೇ ಅವನು ಆ ಆಗಂತುಕನನ್ನು ಗುರ್ತಿಸಿ:—ಮಲಯಕೇತೂ, ಈ ಅಪರಾತ್ರಿಯಲ್ಲಿ ಇತ್ತ ಇಷ್ಟು ಗೌಪ್ಯವಾಗಿ ಬಂದ ಕಾರಣವೇನು ? ಎಂದು ಪ್ರಶ್ನೆ ಮಾಡಲು,

ಮಲಯಕೇತು:—ಚಂದ್ರಗುಪ್ತಾ, ಪ್ರತಿ ಹುಣ್ಣಿಮೆಯ ದಿವಸ ನಾನು ನಮ್ಮ ಗುರುವರನ ದರ್ಶನಕ್ಕೆ ಹೋಗುವ ಪದ್ಧತಿಯನ್ನಿಟ್ಟುಕೊಂಡಿರುತ್ತೇನೆ. ಇಂದು ರಾತ್ರಿ ಪೂರ್ವ ಯಾಮದಲ್ಲಿಯೇ ಹೋಗಿ ಬರಬೇಕಾ

ಗಿತ್ತು; ಆದರೆ ವಿಶೇಷ ಕೆಲಸವಿತ್ತಾದ್ದರಿಂದ ಆಗ ಹೋಗಲಿಲ್ಲ; ಅಲ್ಲದೆ, ಇಂದು ನಿನ್ನನ್ನು ಅಲ್ಲಿಗೆ ಕರೆಕೊಂಡೇ ಹೋಗಬೇಕೆಂಬ ಇಚ್ಛೆಯಿಂದಲೇ ನಾನು ಸಂಜೆಯಾಗುತ್ತಲೆ ಅಲ್ಲಗೆ ಹೋಗಲಿಲ್ಲ ನಿನ್ನನ್ನು ಅಲ್ಲಿಗೆ ಕರೆಕೊಂಡು ಹೋಗುವೆನೆಂದು ನಾನು ಮೊದಲೇ ಸುದ್ದಿ ಹಬ್ಬಿಸಿದ್ದರೆ, ಮಗಧದ ಗುಪ್ತಚಾರರಿಗೆ ಆ ಸುದ್ದಿ ತಿಳಿದು, ಮಗಧೇಶ್ವರನು ನಿನ್ನ ಜೀವಕ್ಕೆರವಾಗುವ ಮತ್ತಾವ ಸಂಕಟವನ್ನಾದರೂ ಉಂಟು ಮಾಡಿಯಾನೆಂದು ಭಾವಿಸಿ,ನಾನು ಹಾಗೆ ಮಾಡಲಿಲ್ಲ. ಚಂದ ಗುಪ್ತಾ, ನಮ್ಮ ಯೋಗಾನಂದ ಸ್ವಾಮಿಗಳು ತ್ರಿಕಾಲಜ್ಞರು. ಅವರನ್ನು ಸರಿಗಟ್ಟುವ ಯೋಗ್ಯತೆಯ ಮಹರ್ಷಿಯರು ಬೇರೊಬ್ಬರಿಲ್ಲ ಅವರು ನಮ್ಮ ರಾಜ್ಯದ ಗಡಿ ಪ್ರದೇಶದೊಳಗೆ ಒಂದು ಆಶ್ರಮವನ್ನು ಕಟ್ಟಿಕೊಂಡು ವಾಸಿಸುತ್ತಿರುತ್ತಾರೆ. ಇಂದು ಅವರ ಬಳಿಗೆ ನಿನ್ನನ್ನು ಕರೆದೊಯ್ಯುವದೇ ನನ್ನ ಉದ್ದೇಶವಿರುತ್ತದೆ ಇನ್ನು ಸ್ವಲ್ಪೇ ದಿನಗಳಲ್ಲಿ ಮಗಧೇಶ್ವರನ ಕೂಡ ನಾವು ಯುದ್ಧಮಾಡಬೇಕಾಗಿದೆ ಆ ಕಾಳಗದಲ್ಲಿ ನೀನೇ ನಮ್ಮ ಸೈನ್ಯದ ಅಧ್ಯಕ್ಷನು. ನಿನ್ನ ಮಹರ್ದೆಶೆಯು ಹೇಗಿದೆ? ಈ ಪ್ರಸ್ತುತದ ಕಾಳಗದಿಂದ ನಿನಗಾಗಲಿ, ನಮ್ಮ ಪಾರ್ವತ್ಯ ರಾಜ್ಯಕ್ಕಾಗಲಿ ಯಾವ ಇಷ್ಟಾನಿಷ್ಟ ಫಲಗಳುಂಟಾಗುವವು? ನಿನಗೆ ಭವಿಷ್ಯತ್ಕಾಲದಲ್ಲಿ ಮಗಧ ದೇಶದ ಸಾರ್ವಭೌಮತ್ವವು ಲಭಿಸುವುದೋ ಇಲ್ಲವೋ? ಮುಂತಾದ ಸಂಗತಿಗಳನ್ನು ಅವರಿಂದ ತಿಳಿಕೊಳ್ಳಬೇಕಾಗಿದೆ ನಡೆ, ಎಂದಂದನು

ಬಳಿಕ ಅವರೀರ್ವರೂ ಆ ನಡು ರಾತ್ರಿಯಲ್ಲಿ ಆ ರಾಜಪ್ರಾಸಾದದಿಂದ ಹೊರಟು ಪರ್ವತ ಶ್ರೇಣಿಯೊಳಗಿನ ಕಾಲು ದಾರಿಯಿಂದ ಸ್ವಾಮೀ ಯೋಗಾನಂದರ ಆಶ್ರಮದ ಕಡೆಗೆ ನಡೆದರು. ಮಲಯ ಪುರಿಯಿಂದ ಯೋಗಾನಂದರ ಆಶ್ರಮವು ಬಹು ದೂರವಿದ್ದಂತೆ ತೋರುತ್ತಿತ್ತು; ಆದರೆ ಆ ಒಳ ದಾರಿಯಿಂದ ಅದು ಅಷ್ಟೊಂದು ದೂರವಿರದೆ, ಸರಾಸರಿ ಎರಡು ಮೈಲುಗಳ ಅಂತರದಲ್ಲಿತ್ತು. ದಾರಿಯಲ್ಲಿ ಚಂದ್ರಗುಪ್ತನು ಮಲಯಕೇತುವಿನೊಡನೆ ಆ ಪ್ರದೇಶದ ಆಗಿನ ಪ್ರಶಾಂತತೆಯ ವಿಷಯವಾಗಿಯೂ, ತನ್ನ ದುರ್ದೈವದ ವಿಷಯುವಾಗಿಯೂ, ತನ್ನಿಂದ ಪರ್ವತ ರಾಜ್ಯಕ್ಕೆ ಒದಗಬಹುದಾದ ಸಂಕಟದ ವಿಷಯುವಾಗಿಯೂ ಚರ್ಚಿಸುತ್ತ ನಡೆದಿದ್ದನು. ಇಷ್ಟಾಗುವದರೊಳಗೆ ಸ್ವಾಮೀಜಿಯವರ ಆಶ್ರಮವೂ ಬಂತು. ಆಗ ಆಶ್ರಮ ವಾಸಿಗಳೆಲ್ಲರೂ ಮಲಗಿದ್ದರು. ಇಲ್ಲಿನ್ನಲಿಕ್ಕೆ ಸ್ವಾಮೀಜಿಯವರು ಯೋಗಾಸನದಲ್ಲಿ ಕುಳಿತಿದ್ದರಲ್ಲದೆ, ಅವರ ಶಿಷ್ಯರಲ್ಲೋರ್ವನು ಅವರ ಸಮೀಪದಲ್ಲಿ ತೂಕಡಿಸುತ್ತ ಕುಳಿತಿದ್ದನು. ತಮ್ಮ ಯೋಗಬಲದಿಂದ ಮಲಯಕೇತ್ವಾದಿಗಳ ಆಗಮನ

ವನ್ನು ತಿಳಿದ ಸ್ವಾಮೀಜಿಯವರು, ತಮ್ಮ ಶಿಷ್ಯನಿಗೆ ಬಾಗಿಲು ತೆರೆದು, ಹೊರಗೆ ಬಂದಿರುವ ಮಲಯಕೇತು ರಾಜನನ್ನು ಒಳಗೆ ಬರಮಾಡಿಕೋ, ಎಂದು ಅಪ್ಪಣೆ ಮಾಡಿದರು ಆ ಶಿಷ್ಯನು ಬಂದು ಬಾಗಿಲು ತೆರೆಯಲಿಕ್ಕೂ ಮಲಯಕೇತು-ಚಂದ್ರಗುಪ್ತರು ಆ ಆಶ್ರಮದ ಸಮೀಪಕ್ಕೆ ಬರಲಿಕ್ಕೂ ಗಂಟೆ ಬಿದ್ದಿತು. ಕೂಡಲೆ ಅವರು ಒಳಗೆ ಹೋದರು. ಮೊದಲು ಮಲಯ ಕೇತುವೂ ತದನಂತರ ಚಂದ್ರಗುಪ್ತನೂ ಶ್ರೀ ಸ್ವಾಮೀಜಿಯವರಿಗೆ ಸಾ-ಷ್ಟಾಂಗ ನಮಸ್ಕರಿಸಿದರು ಸ್ವಾಮೀಜಿಯವರು ಅವರವರ ಹೆಸರ್ಗೊಂಡು ಆಶೀರ್ವದಿಸಿದರಲ್ಲದೆ, ಅವರು ತಮ್ಮ ಮನಸ್ಸಿನಲ್ಲಿ ಗಂಟು ಹಾಕಿಕೊಂಡು ಬಂದಿದ್ದ ಪ್ರತಿಯೊಂದು ಪ್ರಶ್ನೆಯ ಉತ್ತರವನ್ನು ಅವರ ಬಾಯಿಂದ ಆ ಪ್ರಶ್ನೆಯು ಹೊರಡುವ ಪೂರ್ವದಲ್ಲಿಯೇ ಸ್ಪಷ್ಟವಾಗಿ ಹೇಳಿ ಬಿಟ್ಟರು ಆಗ ಅವರು ಆಶೀರ್ವಾದಪೂರ್ವಕ ಹೇಳಿದ.ದೇನಂದರೆ:—

"ತಮ್ಮಾ ಮಲಯಕೇತು, ನೀನು ನಿನ್ನ ತಂದೆಯಂತೆಯೇ ಪ್ರಜಾ ವತ್ಸಲನಾಗಿ ರಾಜ್ಯ ಪರಿಪಾಲನ ಮಾಡುತ್ತಿರುವೆಯಾದುದರಿಂದ ಜಗನ್ನಿ ಯಂತನು ನಿನಗೆ ಎಂದೂ ಅಪಯಶ ಕೊಡಲಾರನು; ಆದರೆ ವಿಧಿವಶಾತ್ ಪ್ರಸ್ತುತದ ಕೆಲವು ದಿನಗಳು ನಿನಗೆ ಸಾಮಾನ್ಯವಾಗಿರುವದರಿಂದ, ಕೆಲವು ಎಡರುಗಳು ಪ್ರಾಪ್ತವಾಗುತ್ತವೆ ಆ ಸಂಕಟ ನಿವಾರಣಕ್ಕೆ ನೀನು ಸ್ವಂತ ಏನೂ ಪ್ರಯತ್ನಿಸಬೇಕಾದುದಿಲ್ಲ ನಿನ್ನಾಶ್ರಯ ಹೊಂದಿರುವ ಮಗಧ ದೇಶದ ಯುವರಾಜನಾದ ಈ ಕುಮಾರ ಚಂದ್ರಗುಪ್ತನಿಂದಲೇ ಆ ಸಮಸ್ತ ಸಂಕಟಗಳ ಪರಿಹಾರವಾಗಿ ನಿನಗೆ ವಿಜಯವಾಗುವದಲ್ಲದೆ, ಆ ವಿಜಯದ ಯೋಗದಿಂದ ಈ ಕುಮಾರ ಚಂದ್ರಗುಪ್ತನು ಮಗಧ ದೇಶದ ಏಕ ಛತ್ರ ಸಾರ್ವಭೌಮನಾಗುವ ಯೋಗವೂ ಇರುತ್ತದೆ. ಈ ಉಭಯ ಕಾರ್ಯ ಗಳಲ್ಲಿ ನನ್ನ ಪರಮ ಶಿಷ್ಯನೂ, ಪುನರ್ಜನ್ಮ ತಾಳಿರುವ ಮಗಧದೇಶದ ಪೂ-ರ್ವದ ಓರ್ವನಿಪುಣನಾದ ಮಂತ್ರಿಯೂ ತಾವಾಗಿಯೇ ನಿಮಗೆ ನೆರವಾಗುವರು ಆದುದರಿಂದ ತಮ್ಮಾ ಮಲಯಕೇತೂ, ಈಗ ಪ್ರಾಪ್ತವಾಗಿರುವ ಮಗಧ ದೇಶದೊಡನೆ ಕಾಳಗ ಮಾಡುವ ಈ ಪ್ರಸಂಗವನ್ನು ನೀನು ಯಾವ ಬಗೆ ಯಿಂದಲೂ ಕಳೆಕೊಳ್ಳಬೇಡ. ಪ್ರಜಾಹತ್ಯೆಯಾಗುವದೆಂಬ ಕ್ಲೈಬ್ಯವಿಚಾರ ವನ್ನು ಮನಸ್ಸಿನಲ್ಲಿ ತಂದುಕೊಂಡು ಹಿಂದೆಗೆಯಬೇಡ ಒಂದು ವೇಳೆ ನೀನು ಹಿಂದೆಗೆಯಬೇಕೆಂದರೂ ಹಾಗೆ ಆಗುವ ಯೋಗವೇ ಇರುವದಿಲ್ಲ. ಯಾಕಂದರೆ ಧನನಂದನ ನೀಚತನದ ಆಳಿಕೆಯು ಪರಮಾವಧಿಗೆ ಮುಟ್ಟಿರು ವದು. ಆದುದರಿಂದ ಆತನ ಮರಣವೇ ಸಮೀಪಿಸಿದಂತಾಗಿರುತ್ತದೆ. ಅದರ

ಅನುಭವವು ಕೂಡ ನಿಮಗೆ ಇನ್ನೊಂದು ಗಳಿಗೆಯೊಳಗಾಗಿಯೇ ಬರುತ್ತದೆ. ಕುಮಾರಾ, ಚಂದ್ರಗುಪ್ತಾ, ನೀನಾದರೂ ಆಯುತ ಸಮಯದಲ್ಲಿ ಅಣ್ಣನ ಸೈನಿಕರನ್ನು ಹೇಗೆ ಸಂಹರಿಸಬೇಕು? ಅಣ್ಣನಿಗೆ ಹೇಗೆ ದುಃಖವ ಕೊಡಬೇಕು? ಎಂಬ ಹೇಡಿತನದ ವಿಚಾರಗಳನ್ನು ಮನದಲ್ಲಿ ತರಬೇಡ; ನಿನ್ನ ಅಣ್ಣನ ವಿನಾಶಕ್ಕೆ ನೀನಾಗಿ ತೊಡಗಿರುವದಿಲ್ಲ; ನಿನ್ನ ಅಣ್ಣನೇ ಈ ಆತ್ಮಯಜ್ಞದ ಸತ್ರವನ್ನು ಹೂಡಲುದ್ಯುಕ್ತನಾಗಿರುತ್ತಾನೆ; ಆದುದರಿಂದ ನೀನು ಈ ಪ್ರಸಂಗದಲ್ಲಿ ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ, ಎಂಬ ಗೀತೋಕ್ತಿಯಂತೆ, ಮಲಯಕೇತುವಿಗೆ ಮನಮುಟ್ಟಿ ಸಹಾಯ ಮಾಡಿ ಅವನಿಗೆ ವಿಜಯವ ದೊರೆಕಿಸಿ ಕೊಡು. ಅದರಿಂದ ನಿನಗೂ ಕೋಟಿ ಕಲ್ಯಾಣವಾಗುವದು. ನಡೆಯಿರಿ, ತಡವಾಯಿತಿನ್ನು; ಬಹು ಎಚ್ಚರದಿಂದ ಕೆಲಸ ಮಾಡಿರಿ.

ಮಲಯಕೇತು ಹಾಗು ಚಂದ್ರಗುಪ್ತರು ಶ್ರೀ ಸ್ವಾಮಿಗಳವರಿಗೆ ಮತ್ತೊಮ್ಮೆ ಸಾಷ್ಟಾಂಗ ನಮಸ್ಕಾರ ಮಾಡಿ, ಅವರು ಕೊಟ್ಟ ಫಲ-ಮಂತ್ರಾಕ್ಷತೆಗಳನ್ನು ತಂತಮ್ಮ ಉತ್ತರೀಯ ವಸ್ತ್ರಗಳ ಸೆರಗಿನಲ್ಲಿ ಕಟ್ಟಿಕೊಂಡು ಬಹು ಸಂತೋಷದಿಂದ ಮಲಯಪುರಿಗಭಿಮುಖವಾಗಿ ತಿರುಗಿದರು.

ಸ್ವಾಮಿಯವರ ಆಶ್ರಮದಿಂದ ಹೊರಟ ಅವರು ಮೈಲರ್ಧಮೈಲಿನಷ್ಟು ದಾರಿ ನಡೆದಿರಬಹುದೋ-ಇಲ್ಲವೋ, ಅಷ್ಟರಲ್ಲಿ ಒಂದು ಪರ್ವತದ ಕಂದರದ ಕಡೆಗೆ ಒಮ್ಮೆಲೆ ಗಟ್ಟಿಯಾಗಿ ಅಳುವ ಧ್ವನಿಯು ಕೇಳಿಸಿತು ಆ ಧ್ವನಿಯನ್ನು ಅವರು ಮತ್ತೊಮ್ಮೆ ಆಲಿಸ ಬೇಕೆನ್ನುವಷ್ಟರಲ್ಲಿ ದೂರಿನಲ್ಲಿ ಅಳುವ ಆ ವ್ಯಕ್ತಿಯ ಕುತ್ತಿಗೆಯನ್ನು ಯಾರೋ ಒತ್ತಿ ಹಿಡಿದುದರಿಂದಲೋ-ಏನೋ, ಆ ವ್ಯಕ್ತಿಯ ಕಂಠವು ನಡುವೇ ಕುಗ್ಗಿತೆಂಬದು ಆ ನಡುರಾತ್ರಿಯ ಪ್ರಶಾಂತ ಸಮಯದಲ್ಲಿ ಅವರಿಗೆ ಒಳ್ಳೇ ಸ್ಪಷ್ಟವಾಗಿ ಕೇಳಿಸಿತು ಆ ಶೋಕಧ್ವನಿಯು ಗಂಡಸಿನದಾಗಿರದೆ, ನಿಶ್ಚಯವಾಗಿ ಹೆಂಗಸಿನದೇ ಆಗಿರಬೇಕೆಂಬ ಬಗ್ಗೆ ಅವರೀರ್ವರ ಮತಗಳು ಒಂದೇ ಆದವು. ಕೂಡಲೆ ಅವರು ಆ ವ್ಯಕ್ತಿಯನ್ನು ಹುಡುಕುವ ಸಲುವಾಗಿ ಒಬ್ಬೊಬ್ಬರೊಂದೊಂದು ದಿಕ್ಕಿನ ಕಡೆಗೆ ಸಾಗಿದರು.

ಚಂದ್ರಗುಪ್ತನು ಪರ್ವತರಾಜ್ಯ ಹಾಗು ಮಗಧ ರಾಜ್ಯಗಳ ಗಡಿಗಭಿಮುಖವಾಗಿ ಉತ್ತರದಿಂದ ಸಾಗಿರಲು, ತುಸ ದೂರಿನಲ್ಲಿಯೇ ಅವನಿಗೆ ಗೊಂದು ದೃಶ್ಯವು ಕಂಗೊಳಿಸಿತು. ಆ ಸ್ಪಷ್ಟವಾದ ಬೆಳದಿಂಗಳಲ್ಲಿ ಅವನಿಗೆ ಆಗ ಕಾಣಿಸಿದ್ದೇನಂದರೆ: ಒಬ್ಬ ಬ್ರಾಹ್ಮಣ ವಿಧವೆಯನ್ನು ಭ್ರಷ್ಟಗೊಳಿಸು

ವದಕ್ಕೆಂದು ಒಬ್ಬ ಪರಮ ಚಾಂಡಾಲನು ಪ್ರಯತ್ನಿಸುತ್ತಿದ್ದು, ಇವನಿಗೆ ಸಹಾಯ ಮಾಡಲಿಕ್ಕೆಂದು ಇಬ್ಬರು ಜನರು ಅವನ ಬಳಿಯಲ್ಲಿ ನಿಂತಿದ್ದರು. ಕೂಡಲೆ ಚಂದ್ರಗುಪ್ತನ ಕೋಪವು ಅನಿವಾರ್ಯವಾಯಿತು ಅವನು ಕೆರಳಿದ ಹುಲಿಯಂತೆ ಒಮ್ಮೆಲೆ ಹಾರಿ, ತನ್ನ ಕೈಗತ್ತಿಯಿಂದ ಆ ದುಷ್ಟನ ಸಹಾಯಕರಿಬ್ಬರನ್ನೂ ಒಂದೇ ಏಟಿನಿಂದ ನೆಲಕ್ಕುರುಳಿಸಿದನು; ಹಾಗು ಉತ್ತರ ಕ್ಷಣದಲ್ಲಿ ಆ ತರುಣ ವಿಧವೆಯ ಬಾಯಲ್ಲಿ ತುರುಕಿದ್ದ ಅರಿವೆಯ ಚಂಡನ್ನು ಹಿರಿದನು. ಆ ಕೂಡಲೆ ಆ ಹೆಂಗಸನ್ನು ಭ್ರಷ್ಟಗೊಳಿಸಲುದ್ಯುಕ್ತನಾಗಿದ್ದ ಆ ನೀಚನು ಚಂದ್ರಗುಪ್ತನ ಮೈಮೇಲೆ ಏರಿ ಬಂದನು. ಇನ್ನು ಅವನು ತನ್ನ ಕಠಾರಿಯಿಂದ ಚಂದ್ರಗುಪ್ತನ ಎದೆಗೆ ತಿವಿಯತಕ್ಕವನು, ಅಷ್ಟರಲ್ಲಿ ಆವರೀರ್ವರ ಹಿಂದಿನಿಂದ ಓಡುತ್ತ ಬರುತ್ತಿದ್ದ ಒಬ್ಬ ಮುದುಕನು ತನ್ನ ಮುಂಗೈಯೊಳಗಿನ ಶಕ್ತಿಯನ್ನೆಲ್ಲ ಉಪಯೋಗಿಸಿ, ಆ ನೀಚನ ಕುತ್ತಿಗೆಯ ಮೇಲೆ ಗುದ್ದಿ ಅವನನ್ನು ನಲಕ್ಕುರುಳಿಸಿದನಲ್ಲದೆ, ಆತನ ಕೈಯೊಳಗಿನ ಆ ತೀಕ್ಷ್ಣಧಾರೆಯ ಕಠಾರಿಯನ್ನೂ ಕಸಿದು ಕೊಂಡನು.

ಬಳಿಕ ಚಂದ್ರಗುಪ್ತನು ಆ ನೀಚನನ್ನು ಕೊಲ್ಲದೆ, ತನ್ನ ಉತ್ತರೀಯದಿಂದ ಅವನ ಹೆಡಮುರಿಗೆ ಬಿಗಿದನು. ನಂತರ ಅವನು ಆ ಸಾಧ್ವಿಯನ್ನು ಕುರಿತು:— ತಾಯಿ, ನೀನು ಯಾರು? ಎಲ್ಲಿಗೆ ಹೋಗತಕ್ಕವಳು? ಈ ನೀಚರ ಬಲೆಯಲ್ಲಿ ಹೇಗೆ ಸಿಕ್ಕೆ? ಮುಂತಾದುದನ್ನು ಕೇಳಿದನು. ತನ್ನ ಪಾತಿವ್ರತ್ಯವನ್ನು ಭಂಗಪಡಿಸಲುದ್ಯುಕ್ತರಾದವರನ್ನು ಆಯತ ಸಮಯದಲ್ಲಿ ದಂಡಿಸಿ, ತನ್ನ ಮಾನವನ್ನು ಉಳಿಸಿದ ಆ ತರುಣನನ್ನು ಮನದಲ್ಲಿ ಅಭಿನಂದಿಸುತ್ತ ಆ ವಿಧವೆಯು:— ಮಹಾರಾಜ, ನೀವು ಯಾರೇ ಇರಲೊಲ್ಲಿರೇಕೆ? ನನ್ನ ಮಾನವುಳಿಸಿರುವದರಿಂದ, ನೀವು ನನಗೆ ಸಹೋದರರೇ ಸರಿ. ನಾನು ಪಾಟಲಿಪುತ್ರದ ಸ್ಮಶಾನದ ಬಳಿ ವಾಸಿಸುತ್ತಿರುವ ಮಹಾ ಪ್ರಾಜ್ಞ ಪಂಡಿತ ಚಾಣಕ್ಯಮುನಿಯ ಮಗಳಾದ ಬಾಲವಿಧವೆ ಕಪಾಲಿನಿಯು. ನಮ್ಮ ತಂದೆಯು ಇಂದೇ ಬೇರೂರಿಗೆ ವೈದಿಕ ಕರ್ಮಗಳನ್ನು ಮಾಡಿಸಲಿಕ್ಕೆಂದು ಹೋಗಿದ್ದು, ಆತನು ಮರಳಿ ಬರುವದಕ್ಕೆ ಒಂದು ವಾರದ ಅವಧಿಯು ಬೇಕಂತೆ ಆ ಸ್ಮಶಾನ ಭೂಮಿಯ ಗುಡಿಸಿಲಿನಲ್ಲಿ ನನ್ನೊಬ್ಬಳನ್ನೇ ಬಿಟ್ಟು ಹೋಗುವದು ಸರಿಯಲ್ಲವೆಂದು ಭಾವಿಸಿ, ಅವನು ತನ್ನ ಈ ವೃದ್ಧ ಶಿಷ್ಯನಿಗ ಹೇಳಿ, ಒಂದು ಡೋಲಿಯನ್ನು ಗೊತ್ತು ಮಾಡಿ, ನನ್ನನ್ನ ಸ್ವಾಮಿ ಯೋಗಾನಂದರ ಆಶ್ರಮಕ್ಕೆ ಕಳಿಸಿಕೊಟ್ಟನು. ನಾವು ನಮ್ಮ ಗುಡಿಸಿಲವನ್ನು ಬಿಟ್ಟಾಗ ಸಾಯಂಕಾಲದ ಐದು ಗಂಟೆಯಾಗಿತ್ತು. ಎಷ್ಟು ಸಾವ

ಕಾಶವಾಗಿ ಹೋಗಿದ್ದರೂ ನಾವು ಸ್ವಾಮಿಯವರ ಆಶ್ರಮಕ್ಕೆ ರಾತ್ರಿ ಏಳು ಗಂಟೆಯೊಳಗಾಗಿ ಸಹಜವಾಗಿ ತಲುಪಬಹುದಾಗಿತ್ತು: ಆದರೆ ಇಗೋ, ಇಲ್ಲಿ ನಿಂತಿರುವ ಈ ನೀಚನು ಯಾರೆಂಬದು ನಿಮಗೆ ಗೊತ್ತಿಲ್ಲವೋ? ಈತನೇ ಮಗಧ ದೇಶದ ರಾಜಧಾನಿಯಲ್ಲಿ ನಮ್ಮಂಥ ಹೆಂಗಸರ ಪಾತಿವ್ರತ್ಯವನ್ನು ಭಂಗಗೊಳಿಸುತ್ತ ಪ್ರಖ್ಯಾತಿ ಹೊಂದಿದ ಕಪಟಕನೆಂಬ ಹೆಸರಿನ ಮಗಧಾಧಿಪ ನಂದಭೂಪತಿಯ ಶ್ಯಾಲಕನು. ಈತನು ತನ್ನ ಸಂಗಡಿಗರೊಡನೆ ನಮ್ಮನ್ನು ಜಾಹ್ನವೀ ತಟಾಕದಲ್ಲಿ ಅಡ್ಡಗಟ್ಟಿ, ದಾರಿ ತಪ್ಪಿಸಿ ಇತ್ತ ಕರೆ ತಂದನು; ಹಾಗು ಈ ಘೋರಾರಣ್ಯದಲ್ಲಿ ನಮ್ಮ ಡೋಲಿಯವರನ್ನು ಹೊಡೆದೋಡಿಸಿ, ಇವನು ಈಗ ನನ್ನನ್ನು ಭ್ರಷ್ಟಗೊಳಿಸತಕ್ಕವನಿದ್ದನು, ಎಂದು ಹೇಳುತ್ತಿರುವಷ್ಟರಲ್ಲಿ ಮಲಯಕೇತುವೂ ಅಲ್ಲಿಗೆ ಬಂದನು. ಆಗ ಅವನು ತನ್ನಲ್ಲಿಯ ಒಂದು ವಿಶಿಷ್ಟ ದನಿಯ ಕೊಳಲನ್ನು ಊದಲು, ತುಸ ಹೊತ್ತಿನಲ್ಲಿಯೇ ಮಲಯಾಪುರಿಯಿಂದ ೭-೮ ಜನ ಸೈನಿಕರು ಇವರಿದ್ದಲ್ಲಿಗೆ ಓಡಿಬಂದರು; ಹಾಗು ಮಲಯಕೇತುವಿನ ಆಜ್ಞೆಯ ಮೇರೆಗೆ ಅವರಲ್ಲಿಯ ಕೆಲವರು ಕಪಟಕನನ್ನು ತಮ್ಮ ರಾಜಧಾನಿಗೆ ಹಿಡಿದೊಯ್ದರು ಉಳಿದವರು ಕಪಾಲಿನಿಯ ಜೊತೆಯಲ್ಲಿದ್ದ ಆ ವೃದ್ಧನೊಡನೆ ಹೋಗಿ, ತುಸ ದೂರದಲ್ಲಿ ಬಿದ್ದಿದ್ದ ಮೋಡಲಿನ ಆ ಡೋಲಿಯನ್ನು ಎತ್ತಿ ತಂದರು ಬಳಿಕ ಮಲಯಕೇತುವು ಕಪಾಲಿನಿಗೆ ಆ ಡೋಲಿಯಲ್ಲಿ ಕೂಡ್ರ ಹೇಳಿ, ತನ್ನ ಸೈನಿಕರಿಗೆ ಆ ಡೋಲಿಯನ್ನು ಸ್ವಾಮೀ ಯೋಗಾನಂದರ ಆಶ್ರಮಕ್ಕೆ ತಲುಪಿಸಲಿಕ್ಕೆ ಹೇಳಿದನು; ಹಾಗು ತಾನು ಚಂದ್ರಗುಪ್ತನೊಡನೆ ಮಲಯಪುರಿಗೆ ನಡೆದನು

ಮಲಯಕೇತುವು ಮರು ದಿನ ಮಧ್ಯಾಹ್ನದಲ್ಲ ದರ್ಬಾರು ನೆರೆಯಿಸಿ, ಕಪಟಕನ ಅಪರಾಧವನ್ನು ವಿಚಾರಿಸಿ, ಅವನನ್ನು ದಂಡಿಸುವ ಉದ್ಯೋಗದಲ್ಲಿ ತೊಡಗಿದ್ದನು. ಆ ದರ್ಬಾರಿಗೆ ಪರ್ವತ ದೇಶದ ಚಿಕ್ಕ ದೊಡ್ಡ ಸರದಾರರೂ ಮಾಂಡಲಿಕ ರಾಜರೂ ಬಂದಿದ್ದರು. ಕಪಟಕನ ಅಪರಾಧವನ್ನು ವಿಚಾರಿಸಿ ಶಿಕ್ಷೆ ಕೊಡುವದೆಂದರೆ, ಸಾಮಾನ್ಯ ಕೆಲಸವಾಗಿರಲಿಲ್ಲ. ಯಾಕಂದರೆ, ಅವನು ಮಗಧೇಶ್ವರನ ಶ್ಯಾಲಕನು. ಅವನಿಗೆ ಶಿಕ್ಷೆ ಕೊಟ್ಟರೆ ಮಗಧೇಶ್ವರನಿಗೆ ಶಿಕ್ಷೆ ಕೊಟ್ಟಂತೆಯೇ ಆಗುವದು ಅವನನ್ನು ಹಾಗೇ ಬಿಟ್ಟರೆ ತಮ್ಮ ಹೇಡಿತನದ ಪ್ರದರ್ಶನವನ್ನು ತಾವೇ ಮಾಡಿಕೊಂಡಂತಾಗುವದಿತ್ತು. ಆದರಿಂದ ಆ ಪ್ರಸಂಗದಲ್ಲಿ ಮಲಯಕೇತುವು ತನ್ನ ಪ್ರತಿಯೊಬ್ಬ ಮಾಂಡಲಿಕರ ಮತವನ್ನೂ ತೆಗೆದುಕೊಳ್ಳುವದು ಅವಶ್ಯಕವಿತ್ತು. ಅಂತೆಯೇ

ಮಲಯಕೇತುವು ಅಂದಿನ ದರ್ಬಾರಿಗೆ ತನ್ನ ರಾಜ್ಯದಲ್ಲಿಯ ಮಾಂಡಲಿಕ ರನ್ನೂ, ಸರದಾರರನ್ನೂ, ಪ್ರಮುಖ ಜನರನ್ನೂ ಬೇಕಂತ ಕರೆಯಿಸಿದ್ದನು.

ಮಲಯಕೇತುವು ಮುಖ್ಯ ಸಿಂಹಾಸನದ ಮೇಲೆ ಕುಳಿತಿದ್ದು, ಅವನ ಬಲಗಡೆಯು ಉಚ್ಚ ಸಿಂಹಾಸನದ ಮೇಲೆ ಕುಮಾರ ಚಂದ್ರಗುಪ್ತನು ಕುಳಿತಿದ್ದನು. ಸಿಂಹಾಸನದ ಎಡ-ಬಲದ ಪ್ರದೇಶದಲ್ಲಿ ಪರ್ವತ ರಾಜ್ಯದ ಮಾಂಡಲಿಕ ರಾಜರೂ ಸರದಾರರೂ ಸಾಲು-ಸಾಲಾಗಿ ಕುಳಿತಿದ್ದರು. ಸಭಾ ಮಧ್ಯದಲ್ಲಿ ಹೆಡಮುರಿಗೆ ಬಿಗಿದಿದ್ದ ಕಪಟಕನು ನಿಲ್ಲಿಸಲ್ಪಟ್ಟಿದ್ದನು. ಅವನ ದುಷ್ಟ ಕಾರ್ಯಕ್ಕೆ ಬೇರೆ ಸಾಕ್ಷಿದಾರರ ಅವಶ್ಯಕತೆಯೇ ಇರಲಿಲ್ಲ. ಚಂದ್ರ ಗುಪ್ತನೇ ಫಿರ್ಯಾದಿಯಾಗಿದ್ದನು. ಸ್ವತಃ ಮಲಯಕೇತುವೇ ಸಾಕ್ಷಿದಾರ ನಾಗಿದ್ದನು. ಸಭಾಸದರ ಸರ್ವಾನುಮತದಿಂದ ಕಪಟಕನ ತಲೆ ಬೋಳಿಸಿ, ಮುಸುಡಿಗೆ ಕಪ್ಪು ಹಚ್ಚಿಸಿ, ಕತ್ತೆಯ ಮೇಲೆ ಕೂಡ್ರಿಸಿ ಮೆರೆಯಿಸಬೇಕೆಂಬ ಶಿಕ್ಷೆಯು ಅವನಿಗೆ ವಿಧಿಸಲ್ಪಟ್ಟಿತು. ಮಲಯಕೇತುವು ಇನ್ನು ಅದನ್ನು ಅಮಲಿನಲ್ಲಿ ತರಲಿಕ್ಕೆ ತನ್ನ ದೂತರಿಗೆ ಹೇಳತಕ್ಕವನು; ಅಷ್ಟರಲ್ಲಿ ಒಬ್ಬ ಬ್ರಾಹ್ಮಣನು ಸಭಾಗೃಹದಲ್ಲಿ ಜನಂದಟ್ಟಣೆಯೊಳಗಿಂದ ಹಾದಿ ತೆಗೆಯುತ್ತ ತನ್ನ ಕಡೆಗೆ ಬರುತ್ತಿರುವದು ಮಲಯಕೇತುವಿಗೆ ಕಾಣಿಸಲು, ಅವನು ಸಿಂಹಾಸನದಿಂದ ಇಳಿದು ಬಂದು, ಆ ಬ್ರಾಹ್ಮಣನನ್ನು ತನ್ನ ಸಿಂಹಾಸನದ ಮೇಲೆ ತಂದು ಕೂಡ್ರಿಸಿದನು; ಚಂದ್ರಗುಪ್ತನೂ ತನ್ನ ಆಸನದಿಂದ ಎದ್ದು ನಿಂತನು. ಕೂಡಲೆ ಎಲ್ಲ ಸಭಾಸದರೂ ಎದ್ದು ನಿಂತು:— ಭೂದೇವ ಚಾಣಕ್ಯ ಮುನಿಯ ಆಶೀರ್ವಾದದಿಂದ ನಮ್ಮ ಮಲಯಕೇತುವಿಗೆ ಜಯ ವಾಗಲಿ! ಕುಮಾರ ಚಂದ್ರಗುಪ್ತನಿಗೆ ಜಯವಾಗಲಿ!! ಎಂದು ಪುನಃ ಪುನಃ ಗರ್ಜಿಸಿದರು.

ಆಗ ಚಾಣಕ್ಯನು, ಮಲಯಕೇತು-ಚಂದ್ರಗುಪ್ತರನ್ನೂ, ಸಭಾಸದ ರನ್ನೂ ಆಶೀರ್ವದಿಸಿ:— ಪರ್ವತೇಶಾ, ನೀನು ಈಗ ಯಾವ ಉದ್ಯೋಗ ದಲ್ಲಿ ತೊಡಗಿರುವಿಯೆಂಬದು ನನಗೆ ಗೊತ್ತಾಗಿರುತ್ತದೆ, ರಾಜಶಾಸನದ ಪ್ರಕಾರ ಕಪಟಕನಂಥ ನೀಚ ಮನುಷ್ಯನಿಗೆ ಯೋಗ್ಯ ಶಿಕ್ಷೆ ವಿಧಿಸುವದು ವಿಹಿತವೇ ಇದೆ. ಈ ಪ್ರಸಂಗದಲ್ಲಿ ನಾನೇ ನಿಜವಾಗಿ ಫಿರ್ಯಾದಿಯಾಗ ಬೇಕಾಗಿತ್ತು; ಆದರೆ ನನ್ನ ಗೈರಹಾಜರಿಯಲ್ಲಿ ನನ್ನ ಆ ಕೆಲಸವನ್ನು ನಮ್ಮ ಯುವರಾಜರಾದ ಕುಮಾರ ಚಂದ್ರಗುಪ್ತರೇ ಮಾಡಿರುತ್ತಾರೆ. ಮಲಯ ಕೇತು ಮಹಾರಾಜರೇ, ಫಿರ್ಯಾದಿಯೆಂದು ನಾನು ಈಗ ತಮಗೆ ಒಂದಿಷ್ಟು ಬಿನ್ನೈಸಿಕೊಳ್ಳುತ್ತೇನೆ ನೀವು ಅದನ್ನು ಲಾಲಿಸಿ ಅದರಂತೆ ನಡೆದುಕೊಂ

ಡರೆ, ನಿಮ್ಮ ಹಾಗು ನಿಮ್ಮ ಪಾರ್ವತೀಯ ಪ್ರಜೆಗಳ ಕಲ್ಯಾಣವಾಗುವ ದೆಂದು ಈ ಬ್ರಾಹ್ಮಣನ ಮನೋದೇವತೆಯು ಹೇಳುತ್ತದೆ. ನೀವು ನನ್ನ ಇಚ್ಛೆಯಂತೆ ವರ್ತಿಸುವೆವೆಂದು ವಚನಕೊಟ್ಟರೆ ಮಾತ್ರ ನಾನು ನನ್ನ ಅರಿಕೆ ಯನ್ನು ಬಿನ್ನೈಸಿಕೊಳ್ಳುತ್ತೇನೆ, ಎಂದು ನುಡಿದನು.

ಅದಕ್ಕೆ ಎಲ್ಲರೂ ಒಪ್ಪಲು, ಚಾಣಕ್ಯನು:—

ಈ ನೀಚ ಕಪಟಕನಿಗೆ ಯಾವ ಬಗೆಯ ಶಿಕ್ಷೆಯನ್ನೂ ವಿಧಿಸ ಬೇಡಿರಿ; ಅಪಕಾರ ಮಾಡಿದವನಿಗೆ ಉಪಕಾರ ಮಾಡಬೇಕೇ ಹೊರತು, ಕೇಡು ಬಗೆಯಬಾರದು. ನಾನು ಬಲು ಸಿಟ್ಟಿನವನೆಂಬದು ನಿಮ್ಮೆಲ್ಲರಿಗೂ ಗೊತ್ತೇ ಇದೆ. ನನ್ನ ಮಗಳ ಮೇಲೆ ಅತ್ಯಾಚಾರ ಮಾಡಲೆಳಸಿದ ಈತ ನನ್ನು ನಾನು ನನ್ನ ಕ್ರೋಧಾಗ್ನಿಯಿಂದಲೇ ದಹಿಸಬಲ್ಲೆನು; ಆದರೆ ಸಿಟ್ಟು-ಕೋಪಗಳನ್ನು ಇಂಥ ಹೇಡಿ ಜನರ ಮೇಲೆ ಮಾಡಿ ಪ್ರಯೋಜನ ವೇನು? ಈಗ ಈತನನ್ನು ದಂಡಿಸುವದಕ್ಕಿಂತ ಹಾಗೆಯೇ ಬಿಟ್ಟು ಬಿಡು ವದು ನಮ್ಮ ಮುಂದಿನ ಕಾರ್ಯಗಳಿಗೆ ವಿಹಿತವೆಂದು ಸ್ವಾಮಿ ಯೋಗಾ ನಂದರು ನಿಮ್ಮೆಲ್ಲರಿಗೆ ತಿಳಿಸುವದಕ್ಕೂ, ನಿಮ್ಮ ಕಾರ್ಯದಲ್ಲಿ ನೆರವಾಗು ವದಕ್ಕೂ ನನ್ನನ್ನು ಅಜ್ಞಾಪಿಸಿ ಕಳಿಸಿದ ಮೇರೆಗೆ ನಾನು ನಿಮಗೆ ನಿವೇದಿ ಸಿರುತ್ತೇನೆ; ಎಂದು ಹೇಳಿ, ಅವನು ಆ ಸಭಾಗೃಹದೊಳಗಿನ ಎಲ್ಲರಿಗೂ ಮತ್ತೊಮ್ಮೆ ಆಶೀರ್ವದಿಸಿ, ಅಲ್ಲಿಂದ ಹೊರಟು ಹೋದನು.

----

## ನಿನ್ನ ಶ್ರಾದ್ಧದ ದಿನವೇ ನನ್ನ ಜುಟ್ಟು ಕಟ್ಟುವೆನು.

ಅರಮನೆಯಂಥ ಭವ್ಯವಾದ ಮೇಲಂತಸ್ತಿನ ಮನೆಯ ನಿರ್ಜನವಾದ ಒಂದು ಕೋಣೆಯಲ್ಲಿ ಅಮಾತ್ಯವರ್ಯ ರಾಕ್ಷಸನು ಸಾಮ್ರಾಜ್ಯ ಸಂಬಂಧದ ಆಲೋಚನೆಯಲ್ಲಿ ಮಗ್ನನಾಗಿದ್ದನು ಆ ಸಮಯದಲ್ಲಿ. ಒಬ್ಬ ಹೇರನು ಬಂದು ವಿನಯದಿಂದ ನಮಿಸಿ, ಮಂತ್ರಿಯನ್ನು ಕುರಿತು:— ಹುಜೂರ! ಸೆರೆಮನೆಯ ಮುಖ್ಯಸ್ಥನಾದ ಚಂದ್ರಪಾಲನು ತಮ್ಮ ಭೇಟಿಗಾಗಿ ಹೊರಗೆ ಕಾದಿರುತ್ತಾನೆ, ಎಂದು ತಿಳಿಸಿದನು.

ಆ ಮಾತನ್ನು ಕೇಳಿ ಗಂಟಿಕ್ಕಿದ ಅಮಾತ್ಯನ ಮುಖವು ಪೌರ್ಣಿಮೆಯ ಚಂದ್ರಮನಂತೆ ಅರಳಿ ಪ್ರಸನ್ನವಾಯಿತು ಕೂಡಲೆ ಆತನು ಆ ಹೇರ ನಿಗೆ: ಹೋಗು, ಆತನನ್ನು ಈಗಲೇ ನನ್ನ ಬಳಿಗೆ ಕಳಿಸು, ಎಂದನು

ತುಸ ಹೊತ್ತಿನಲ್ಲಿಯೇ ಚಂದ್ರಪಾಲನು ಧೀರಬುದ್ಧಿಯು ಆ ಮಂತ್ರ ಶಾಗಾರವನ್ನು ಪ್ರವೇಶಿಸಿ, ಸಚಿವನನ್ನು ಅಭಿವಂದಿಸಿ, ತನಗಾಗಿ ಮಂಡಿಸಿದ್ದ ಆಸನದ ಮೇಲೆ ಕುಳಿತನು. ಆಗ ಮಂತ್ರಿಯು ಒಳ್ಳೇ ಉತ್ತೇಜಕ ಧ್ವನಿಯಿಂದ ನುಡಿದನೇನಂದರೆ:—ಚಂದ್ರಪಾಲಾ, ಇಷ್ಟು ನಸಕಿನಲ್ಲಿ ನೀನು ನನಗೆ ಭೇಟಿಯಾಗುವಂಥ ಅದಾವ ಕೆಲಸವಿರುತ್ತದೆ?

ಮಂಗುಳು ನಗೆ ನಗುತ್ತ ಚಂದ್ರಪಾಲನು:—ತಮ್ಮ ಕೆಲಸವು ಕೈ-ಗೂಡಿದಂತಾಯಿತು

ತುಸ ವಿಚಾರಕ್ಕೊಳಗಾಗಿ ನಂತರ ಧೀರಬುದ್ಧಿಯು:— ಶಕಟಾರನ ದೇಹಸಂಸ್ಕಾರವೂ ಕೂಡ ಆಗಿ ಹೋಯಿತೇ?

ಇಷ್ಟೇ ಅಲ್ಲ, ಆತನ ಚಿತೆಯು ಬೆಂಕಿ ಕೂಡ ನಂದಿ ಹೋಗಿದೆ; ಅದರಿಂದ ತಮ್ಮ ಚಿರಶತ್ರುವಿನ ಶೇಷಚಿಹ್ನವೂ ಲೋಪವಾದಂತಾಯಿತು!

ರಾಕ್ಷಸ:—ಚಂದ್ರಪಾಲಾ, ಆವನ ಶವಕ್ಕೆ ಅಗ್ನಿಸಂಸ್ಕಾರವಾದುದನ್ನು ನೀನು ಕಣ್ಣುಟ್ಟಿ ನೋಡಿರುವೆಯಾ?

ಆ ಬಗ್ಗೆ ನಾನು ಸುಳ್ಳಾಡುವೆನೆಂದು ತಮಗನಿಸುವದೇನು? ಬೇಕಾದರೆ ಸ್ಮಶಾನಭೂಮಿಯ ಪೂರ್ವ ದಿಕ್ಕಿನ ಆ ದೊಡ್ಡ ಅಶ್ವತ್ಥವೃಕ್ಷದ ಕೆಳಗಿರುವ ಚಿತಾಭಸ್ಮವನ್ನು ತಾವು ಕಣ್ಮುಟ್ಟಿ ನೋಡಿ ಬರಬಹುದು.

ರಾಕ್ಷಸ:— ಚಂದ್ರಪಾಲಾ, ಆದಿರಲಿ ಸಾಯುವ ಸಮಯದಲ್ಲಿ ಆ ನೀಚನೇನಾದರೂ ಹೇಳಿದನೇ?

ಏನೂ ಹೇಳಲಿಲ್ಲ. ಒಮ್ಮೆಲೆ ಶ್ವಾಸ ಬಿಟ್ಟು ಸತ್ತನು. ಅದರಿಂದ ಏನನ್ನಾದರೂ ನುಡಿಯಲಿಕ್ಕೆ ಆವನಿಗೆ ಅವಕಾಶವೆಲ್ಲಿ ದೊರೆಯಬೇಕು?

ರಾಕ್ಷಸ: —ಚಂದ್ರಪಾಲಾ, ನಿನ್ನ ಬಾಯಿಂದ ಹೊರಟ ಈ ಸಂಗತಿಯನ್ನು ಕೇಳಿ, ನನಗೆ ಅತ್ಯಂತ ಸಂತೋಷವುಂಟಾಗಿರುತ್ತದೆ. ಇಷ್ಟು ದಿನಗಳ ತರುವಾಯ ಈಗ ನಾನು ನಿಷ್ಕಂಟಕನಾದಂತಾದೆನು. ನನ್ನ ಮನಸ್ಸಿನಲ್ಲಿ ಸದಾ ಒಂದು ವ್ಯಥೆಯಿತ್ತು, ಅದೇನಂದರೆ, ತುಸು ಅನುವು ದೊರೆತರೂ ಸಾಕು, ಶಕಟಾರನು ಕಾರಾಗೃಹದಿಂದ ಪಾರಾಗುವನೆಂದು!! ನಾನು ಆತನನ್ನು ಸೆರೆಮನೆಯಲ್ಲಿಯೇ ಗುಪ್ತರೀತಿಯಿಂದ ಕೊಲ್ಲಿಸಿ ಬಿಡಬೇಕೆಂದು ಈ ಮೊದಲು ಎಷ್ಟೋ ಸಾರೆ ಆಲೋಚಿಸಿದ್ದೆನು; ಆದರೆ ಆ ಸಾಹಸವು ನನ್ನಿಂದ ಕಾರ್ಯತಃ ಪರಿಣಮಿಸದಿರುವದಕ್ಕೆ ಒಂದು ವಿಶೇಷ ಕಾರಣವಿತ್ತು. ಮಗಧೇಶ್ವರನಾದ ನಂದನು ಶಕಟಾರನನ್ನು ಹಾಗೆ ಕೊಲ್ಲಿಸಲಿಕ್ಕೆ ನಿಷೇಧಿಸಿದ್ದನು; ಆದರಿಂದ ನಾನು ಇದು ವರೆಗೆ ಆತನ ವಿಷಯು

ವಾಗಿ ಕೊರಗಬೇಕಾಯಿತು ಇರಲಿ. ಚಂದ್ರಪಾಲಾ, ನಿನ್ನ ಕರ್ತವ್ಯ ನಿಷ್ಠತೆಗಾಗಿ ನಾನು ಕೊಡುವ ಈ ಅಲ್ಪಧನವನ್ನು ಸ್ವೀಕರಿಸು; ಎಂದು ಹೇಳಿ, ಅಮಾತ್ಯರಾಕ್ಷಸನು ಸಮೀಪದ ಒಂದು ತಿಜೋರಿಯನ್ನು ತೆರೆದು, ಬಂಗಾರದ ಐದು ನೂರು ಮೊಹರುಗಳನ್ನು ತುಂಬಿದ ಚೀಲವನ್ನು ಅವನ ಮುಂದೆ ಇಟ್ಟನು.

ಆಗ ಚಂದ್ರಪಾಲನು ಧೀರಬುದ್ಧಿಯನ್ನು ಕುರಿತು:— ಸಚಿವಶ್ರೇಷ್ಠ ಪುರಸ್ಕಾರದ ಇಚ್ಛೆಯಿಂದ ನಾನೀ ಕೆಲಸವನ್ನು ಮಾಡಿರುವದಿಲ್ಲ. ತಮ್ಮ ಈ ವಿಶ್ವಾಸಿಗ ಸೇವಕನು ತನ್ನ ಕರ್ತವ್ಯಕರ್ಮವನ್ನು ಮಾಡಿರುತ್ತಾನೆ. ನಾನು ಹೀಗೆ ನನ್ನ ಕರ್ತವ್ಯಕರ್ಮವನ್ನು ಏಕನಿಷ್ಠೆಯಿಂದ ಮಾಡಿದಾಕ್ಷಣಕ್ಕೆ ಇನಾಮು ಬೇರೆ ಇಚ್ಛಿಸಬೇಕೇ? ಅಮಾತ್ಯವರ್ಯಾ, ಚಂದ್ರಪಾಲನನ್ನು ಈ ಘನ ಪದವಿಗೇರಿಸಿದವರು ತಾವೇ ಅಲ್ಲವೆ? ಸಾಯುವ ವರೆಗೆ ಹೆಣಗಿ ದರೂ, ನಾನು ತಮ್ಮ ಉಪಕಾರದ ಲವಲೇಶವನ್ನಾದರೂ ತೀರಿಸಲಾರೆನು. ಹೀಗಿದ್ದು, ಈ ಪ್ರಸಂಗದಲ್ಲಿ ತಾವು ನನಗೆ ಈ ಪಾರಿತೋಷಕವನ್ನೇಕೆ ಕೊಡುವಿರಿ? ಎಂದು ಅಂದು, ಆ ಹಣದ ಚೀಲವನ್ನು ಅಲ್ಲಿಯೇ ಹಿಂದಕ್ಕೆ ಸರಿಸಿಟ್ಟು, ಅಮಾತ್ಯವರನಿಗೆ ಮತ್ತೊಮ್ಮೆ ನಮಸ್ಕಾರ ಮಾಡಿ ಹೊರ ಡಲನುವಾದನು.

ರಾಕ್ಷಸ ಮಂತ್ರಿಯು ಆತನನ್ನು ತಡೆದು:—ಶಮ್ಮಾ ಚಂದ್ರಪಾಲಾ, ನೀನನ್ನುವ ಮಾತು ನಿನ್ನಂಥ ಕರ್ತವ್ಯಜಾಗರೂಕನಿಗೆ ಸಲ್ಲತಕ್ಕದ್ದೇ; ಆದರೂ ನಾನು ಸಂತೋಷದಿಂದ ಕೊಡುವ ಈ ಅಲ್ಪ ಧನವನ್ನು ನೀನು ಒಯ್ಯಲೇಬೇಕು. ಎಂದು ಹೇಳಿ, ಅದನ್ನು ಅವನ ಪದರಿನಲ್ಲಿ ಕಟ್ಟಿದನು. ಚಂದ್ರಪಾಲನು ಎದುರುತ್ತರ ಕೊಡದೆ, ಆ ದ್ರವ್ಯವನ್ನು ತಕ್ಕೊಂಡು ಮೌನದಿಂದ ಆ ಸ್ಥಳವನ್ನು ಬಿಟ್ಟು ನಡೆದನು.

ಈ ಚಂದ್ರಪಾಲನು ಶಕಟಾರನ ಪತ್ನಿಯಾದ ಲಲಿತೆಯ ದೂರಿನ ಆಪ್ತತ್ವದ ಬಂಧುವೆಂಬದೂ, ಈತನ ಸಹಾಯದಿಂದಲೇ ಆಕೆಯು ತನ್ನ ಪತಿಯನ್ನು ಆ ನಲಾಂದಾ ಕಾರಾಗೃಹದೊಳಗಿಂದ ಬಿಡಿಸಿಕೊಂಡು ಹೋಗಿ, ಈಚೆಗೆ ಆ ಸತಿ-ಪತಿಗಳು ಪಾರ್ವತೇಶನ ಆಶ್ರಯದಲ್ಲಿ ಸುಖದಿಂದಿರುತ್ತಿರು ವರೆಂಬದೂ ನಮ್ಮ ವಾಚಕರಿಗೆ ಗೊತ್ತಿದ್ದ ವಿಷಯವೇ ಆಗಿದೆ. ಚಂದ್ರ ಪಾಲನು ತನ್ನ ಗುಪ್ತ ಕೆಲಸದ ವಿಷಯವಾಗಿ ಧೀರಬುದ್ಧಿಗೆ ಕೊಂಚವೂ ಸಂಶಯ ಉಂಟಾಗಬಾರದೆಂದು ಮೇಲೆ ವಿವರಿಸಿರುವಂತೆ ಬೇಕಂತ ಸುದ್ದಿ ಹೇಳಿ, ಆ ರಾಕ್ಷಸನಿಂದಲೂ ಪುರಸ್ಕಾರವನ್ನು ಹೊಂದಿದ್ದನು. ಇರಲಿ.

ಹಿಂದಿನ ಪ್ರಕರಣದ ಕೊನೆಗೆ ಹೇಳಿದಂತೆ ಚಾಣಕ್ಯನು ತನ್ನ ಅಧಿಕಾರವಾಣಿಯಿಂದ ಮಲಯಕೇತ್ವಾದಿಗಳಿಗೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ, ಕಪಟಿಗನನ್ನು ಅಲ್ಲಿಂದ ಬಂಧಮುಕ್ತ ಮಾಡಿಸಿದನು; ಹಾಗು ತಾನು ಅಂದಿನ ತನ್ನ ನಿಮಂತ್ರಣದ ಸ್ಥಳಕ್ಕೆ ಸಾಗಿದನು

ಚಾಣಕ್ಯನು ಅಂದು ತನ್ನ ಯಜಮಾನನ ಮನೆಯ ಕಾಲಶ್ರಾದ್ಧಕ್ಕಾಗಿ ಹೋಗಬೇಕಾಗಿತ್ತು ಆ ಯಜಮಾನನ ಊರು ಅಲ್ಲಿಂದ-ಮಲಯಪುರಿಯಿಂದ-ಎರಡು ಕ್ರೋಶಗಳ ಮೇಲಿತ್ತು. ಚಾಣಕ್ಯನು ಮಲಯಪುರಿಯಿಂದ ಸರಾಸರಿ ಹನ್ನೊಂದು ಗಂಟೆಗೆ ಹೊರಟು ಒಳ್ಳೇ ಒತ್ತರದಿಂದ ಸಾಗಿದ್ದನು ಭರದಿಂದ ಮೈಲರ್ಧವನ್ನೇಲು ಸಾಗುವಷ್ಟರಲ್ಲಿ ಅವನು ಒಂದು ಕರಿಕೆಯ ಕಂಟೆಯನ್ನು ಎಡವಿ ಮುಗ್ಗುರಿಸಿದನು ಅದರಿಂದ ಅವನ ಕಾಲಿನ ಹೆಬ್ಬೊಟ್ಟಿಗೆ ರಕ್ತವೊಡೆಯಿತ ಆಗ ಚಾಣಕ್ಯ ಮುನಿಯಲ್ಲುಂಟಾದ ಸಂತಾಪವು, ಆ ಬೇಸಿಗೆಯ ಕಾಲದ ಅಂದಿನ ನಿರಭ್ರವಾದ ಆಕಾಶದಲ್ಲಿ ಸಂಚರಿಸುತ್ತಿದ್ದ ದಿನಕರನ ತಾಪಕ್ಕಿಂತಲೂ ಮಿಗಿಲಾಗಿತ್ತೆಂದು ಅದನ್ನು ನೋಡಿದವರು ಹೇಳದಿರಲಾರರು. ಚಾಣಕ್ಯನು ಮುಂದೆ ಒಂದು ಹೆಜ್ಜೆ ಕೂಡ ಇಡಗೆ ಅಲ್ಲಿಯೇ ನಿಂತು, ಎಡಬಲದ ಗಿಡ-ಗಂಟೆಗಳಲ್ಲಿಯ ಒಂದು ಗಟ್ಟಿಮುಟ್ಟಾದ ಕಟ್ಟಿಗೆಯನ್ನು ಮುರಕೊಂಡನು; ಹಾಗು ಅದನ್ನು ಗೊರಸಿ ಕಲ್ಲಿನಿಂದ ಕೆತ್ತಿ ಮೊನೆ ಮಾಡಿ, ಆ ಮೊನೆಗಟ್ಟಿಗೆಯಿಂದ ಅಲ್ಲಿಯ ಆ ಕರಿಕೆಯ ಬಿಡ್ಡನ್ನು ಬುಡಮುಟ ಅಗಿದು ಕಿತ್ತೊಗೆಯಲಾರಂಭಿಸಿದನು. ಇಷ್ಟಾಗುವದರೊಳಗೆ ಆ ಯಜಮಾನನ ಕಡೆಯ ಸ್ವಾರನೊಬ್ಬನು ಈತನನ್ನು ಕರೆಯುವ ಸಲುವಾಗಿ ಅದೇ ಮಾರ್ಗದಿಂದ ಕುದುರೆಯನ್ನೋಡಿಸುತ್ತ ಬರುತ್ತಲಿದ್ದನು ಅವನಿಗೆ ದೂರಿನಿಂದಲೇ ಚಾಣಕ್ಯನ ಮೂರ್ತಿಯು ನಡುದಾರಿಯಲ್ಲಿ ನಿಂತಿರುವದು ದೃಷ್ಟಿಗೆ ಬೀಳಲು, ಅವನು ಕುದುರೆಯಿಂದಿಳಿದು ಈತನ ಹತ್ತಿರಕ್ಕೆ ಬಂದು, ತೀವ್ರ ಬರಬೇಕೆಂಬ ತನ್ನ ಒಡೆಯನ ಅಪ್ಪಣೆಯನ್ನು ನಿವೇದಿಸಿದನು. ಆಗ ಚಾಣಕ್ಯನು ಆ ಸ್ವಾರನಿಗೆ ಹೇಳಿ ಕಳಿಸಿದನೇನಂದರೆ:— "ನಾನು ಇಷ್ಟೊತ್ತಿಗೆ ನಿಮ್ಮ ಯಜಮಾನನಲ್ಲಿಗೆ ಬಂದು ಆತನ ಪಿತೃ-ಶ್ರಾದ್ಧಕಾರ್ಯವನ್ನು ನೆರವೇರಿಸುತ್ತಿದ್ದೆನು; ಆದರೆ ಬರುವಾಗ ದಾರಿಯಲ್ಲಿಯ ಈ ಕರಿಕೆಯ ಕಂಟೆಯು ತಾಕಿ, ನನ್ನ ಕಾಲಿನ ಹೆಬ್ಬೊಟ್ಟಿಗೆ ರಕ್ತವೊಡೆಯಿತು. ಶ್ರಾದ್ಧ ಮಾಡುವವನಿಗಾಗಲಿ, ಮಾಡಿಸುವ ಋತ್ವಿಜನಿಗಾಗಲಿ ಇಲ್ಲವೆ! ದೇವ-ಪಿತೃಗಳ ಸ್ಥಾನಕ್ಕೆ ಕೂಡ್ರುವ ಬ್ರಾಹ್ಮಣರಿಗಾಗಲಿ ಶ್ರಾದ್ಧತಿಥಿಯ ದಿವಸ ಯಾವದೊಂದು ಕಾರಣದಿಂದ ರಕ್ತ

ಶ್ರಾವವುಂಟಾದರೆ, ಆ ದಿನವು ಪಿತೃಶ್ರಾದ್ಧಕ್ಕೆ ಅಯೋಗ್ಯವೆಂದು ಶಾಸ್ತ್ರದಲ್ಲಿ ಹೇಳುವದರಿಂದ, ಇಂದು ನಿನ್ನ ಯಜಮಾನನ ಮನೆಯು ಶ್ರಾದ್ಧಕಾರ್ಯವು ಜರಗುವಂತಿಲ್ಲ ಆದ್ದರಿಂದ ನೀನು ಈಗಲೆ ಹೋಗಿ ಅವನಿಗೆ ಈ ಸುದ್ದೀ ತಿಳಿಸು. ನಾನು ಈ ಕರಿಕೆಯ ಜಿಡ್ಡನ್ನು ಸಂಪೂರ್ಣವಾಗಿ ಕಿತ್ತೊಗೆದು ನಂತರ ಬರುತ್ತೇನೆ. ನೀನು ನಿನ್ನ ಯಜಮಾನನಿಗೆ ಈ ಸುದ್ದಿ ಹೇಳಿದವನೇ, ಒಂದು ಕೊಡ ತುಂಬ ಹುಳಿಮಜ್ಜಿಗೆಯನ್ನು ಸಂಗ್ರಹಿಸಿಕೊಂಡು ಇಲ್ಲಿಗೆ ಬೇಗನೆ ಬಾ. ನೀನು ಬಂದ ನಂತರ ನಾನೂ ನೀನೂ ಕೂಡಿಯೇ ನಿಮ್ಮೂರಿಗೆ ಹೋಗೋಣವಂತೆ.

ಆ ಸವಾರನು ಲಗುಬಗೆಯಿಂದ ಆ ಸುದ್ದಿಯನ್ನು ತನ್ನ ಯಜಮಾನನಿಗೆ ತಿಳಿಸಿದನು ಆ ವಾರ್ತೆಯನ್ನು ಕೇಳಿ ಯಜಮಾನನು ತುಸ ವಿಷಣ್ಣನಾದರೂ ಆಕಸ್ಮಿಕವಾಗಿ ಉಂಟಾದ ವಿಘ್ನಕ್ಕೆ ಉಪಾಯವಿಲ್ಲೆಂದ್ಯು ಭಾವಿಸಿ ಸಮಾಧಾನ ತಾಳಿ, ನಿಮಂತ್ರಣವಿತ್ತ ಬ್ರಾಹ್ಮಣರಿಗೂ, ಆಪ್ತವರ್ಗಕ್ಕೂ ಭೋಜನಕ್ಕೆ ಕೂಡ್ರುಹೇಳಿ, ತಾನಾ ಆ ತನ್ನ ಸೇವಕನೊಡನೆ ಒಂದು ಕೊಡ ಹುಳಿಮಜ್ಜಿಗೆಯನ್ನು ತಕ್ಕೊಂಡು ಚಾಣಕ್ಯಮುನಿಯಿದ್ದೆಡೆಗೆ ಬಂದನು. ಆ ಗೃಹಸ್ಥನು ಬರುವಷ್ಟರಲ್ಲಿ ಚಾಣಕ್ಯನ ಅನಿಯೋಣಿವೆಲ್ಲ ತೀರಿತ್ತು. ಕೂಡಲೆ ಅವನು ಆ ಹುಳಿಮಜ್ಜಿಗೆಯನ್ನು ಕರಿಕೆಯ ಬೇರುಗಳಿದ್ದಲ್ಲಿ ತುಸ ತುಸ ಸುರವಿದನು. ಇಷ್ಟೆಲ್ಲ ಖಟಾಟೋಪವಾದ ಬಳಿಕ ಆ ಚಾಣಕ್ಯಮುನಿಗೆ ತುಸ ಸಮಾಧಾನವಾಯಿತು ಚಾಣಕ್ಯನು ಸ್ವಸ್ಥಚಿತ್ತನಾದದ್ದು ಮನವರಿಕೆಯಾದ ಬಳಿಕ ಆ ಯಜಮಾನನು ಆತನಿಗೆ ಸಾಷ್ಟಾಂಗ ಪ್ರಣಿಪಾತವಂ ಮಾಡಿ:-ಮಹಾಸ್ವಾಮಿ, ತಾವು ಅಪ್ಪಣೆಕೊಡಿಸಿದಂತೆ ಇಂದು ಶ್ರಾದ್ಧ ಕಾರ್ಯ ಮಾಡುವದನ್ನು ರಹಿತಮಾಡಿ, ನಿಮಂತ್ರಿತ ವಿಪ್ರರಿಗೆ ಭೋಜನಕ್ಕೆ ಕೂಡ್ರುಹೇಳಿ, ತಕ್ರವನ್ನು ತಕ್ಕೊಂಡು ಇಲ್ಲಿಗೆ ಬಂದೆನು; ಆದರೆ ವಿಪ್ರವರ್ಯಾ, ಇಲ್ಲಿ ಬಂದು ನೋಡುವಲ್ಲಿ ವಿಚಿತ್ರ ದೃಶ್ಯವೇ ಕಾಣಿಸಿತು! ಬಿಸಿಲಿನಿಂದ ಬಳಲಿದ ತಾವು ಈ ಮಜ್ಜಿಗೆಯನ್ನು ಸೇವಿಸಬಹುದೆಂದು ನಾನು ಈ ಮೊದಲು ತರ್ಕಿಸಿದ್ದೆನು, ಆದರೆ ಹಾಗೆ ಮಾಡದೆ, ತಾವು ಈ ತಕ್ರವನ್ನು ಕರಿಕೆಯ ಬೇರುಗಳಿಗೆ ಸುರುವುವದನ್ನು ನೋಡಿ ಆಶ್ಚರ್ಯವಾಗುತ್ತದೆ ಹೀಗೆ ಮಾಡುವದರಿಂದ ಪ್ರಯೋಜನವೇನೆಂಬದನ್ನು ಈ ಅಲ್ಪಮತಿಗೆ ತಿಳಿಸಬಹುದೇ? ಎಂದು ಪ್ರಾರ್ಥಿಸಲು, ಚಾಣಕ್ಯನು ಪ್ರಸನ್ನಚಿತ್ತದಿಂದ:—ಕರಿಕೆಯು ನಿರ್ವಂಶವಾಗಲಿಕ್ಕೆ ಈ ಹುಳಿಮಜ್ಜಿಗೆಯೇ ಮೇಲಾದ ಉಪಾಯವು. ಆದಕ್ಕಾಗಿಯೇ ನಾನು

ಇದನ್ನು ನನ್ನ ಕಾಲಿಗೆ ತಾಕಿ, ನಿನ್ನ ಮನೆಯ ಶ್ರಾದ್ಧಕಾರ್ಯಕ್ಕೆ ವಿಘ್ನವನ್ನುಂಟು ಮಾಡಿದ್ದ ಈ ಕರಿಕೆಯ ಜಡ್ಡಿಗೆ ಎರಚುತ್ತಿರುವೆನು, ಎಂದು ಹೇಳಿ, ಆ ಗೃಹಸ್ಥನ ಶಂಕೆಯನ್ನು ಸಮಾಧಾನಗೊಳಿಸಿದನು.

ಚಾಣಕ್ಯಮುನಿಯು ಕಾಲಿಗೆ ತಾಕಿದ ಆ ಕರಿಕೆಯ ಜಡ್ಡಿನ ಸ್ಥಳವು ಮಲಯಪುರಿಯಿಂದ ಸಮೀಪದಲ್ಲಿಯೇ ಇತ್ತೆಂದು ಮೇಲೆಯೇ ವಿವರಿಸಿದೆಯಷ್ಟೇ? ಆ ಎತ್ತರವಾದ ಮಲಯ ಪುರಿಯ ಉನ್ನತವಾದ ರಾಜಪ್ರಾಸಾದದ ಮೇಲಂತಸ್ತಿನ ಒಂದು ಬೈಠಕ ಖಾನೆಯಲ್ಲಿ ಕುಳಿತಿದ್ದ ಒಂದು ವ್ಯಕ್ತಿಯು ಈ ದೃಶ್ಯವನ್ನು ಪ್ರಾರಂಭದಿಂದ ಕೊನೆಯ ವರೆಗೂ ಒಳ್ಳೇ ಲಕ್ಷ್ಯಗೊಟ್ಟು ನಿರೀಕ್ಷಿಸುತಲಿತ್ತು. "ಈ ಬ್ರಾಹ್ಮಣನು ಇಷ್ಟು ವಯಸ್ಸಾದರೂ ಇನ್ನೂ ತನ್ನ ಹಟ ಬಿಟ್ಟಿರುವದಿಲ್ಲವಲ್ಲ! ಆದರೆ, ಇಂಥವನಿಂದಲೇ ದೇಶಕಾರ್ಯವಾಗಲಿ—ರಾಷ್ಟ್ರಕಾರ್ಯವಾಗಲಿ ಆಗಬೇಕು." ಎಂದು ನಿಶ್ಚಯಿಸಿಕೊಂಡು, ಆ ವ್ಯಕ್ತಿಯು ಅಲ್ಲಿಂದ ಬೇರೆ ಕಡೆಗೆ ಹೊರಟು ಹೋಯಿತು. ಹೀಗೆ ಆಲೋಚಿಸಿದ ವ್ಯಕ್ತಿಯು ಬೇರೆ ಯಾರೂ ಆಗಿರದೆ, ತುಸ ದಿವಸಗಳ ಹಿಂದೆ ಮಲಯಕೇತುವಿನ ಆಶ್ರಯವನ್ನು ಹೊಂದಿದ್ದ ಮಗಧ ದೇಶದ ಪದಚ್ಯುತ ಮಂತ್ರಿಯಾದ ಶಕಟಾರನೇ ಆಗಿದ್ದನು.

ಚಾಣಕ್ಯನು ಅತ್ತ ಆ ಗೃಹಸ್ಥನೊಡನೆ ಅವನ ಊರಿಗೆ ಹೊರಟು ಹೋಗಲು, ಇತ್ತ ಶಕಟಾರನು ಮಲಯಕೇತುವಿನಿಂದ ತನ್ನ ಕೆಲಸಕ್ಕಾಗಿ ಯೋಜಿಸಲ್ಪಟ್ಟ ನಾಲ್ವರು ಪ್ರಣಿಧಿಗಳಲ್ಲಿ ಒಳ್ಳೇ ನಿಪುಣರಾದ ಚಂಡಭೈರವ ಹಾಗು ಕೌಶಿಕರೆಂಬ ಹೆಸರಿನ ಇಬ್ಬರು ಹೇರರನ್ನು ಕರೆದು, ಅವರಿಗೆ ಕೆಲವು ಕಿವಿ ಮಾತುಗಳನ್ನು ಹೇಳಿ, ಇನ್ನೊಂದು ಗಳಿಗೆಗೆ ನನ್ನ ಬಳಿಗೆ ಬನ್ನಿರೆಂದು ತಿಳಿಸಿದನು. ಆ ಪ್ರಣಿಧಿಗಳು ಹೊರಟು ಹೋದ ಕೂಡಲೆ ಶಕಟಾರನು ತನ್ನ ಕೋಣೆಗೆ ಹೋಗಿ, ಅಲ್ಲಿಯ ಬರೆವಣಿಗೆಯ ಸಾಮಗ್ರಿಗಳನ್ನು ತಕ್ಕೊಂಡು, ಎಡಗೈಯಿಂದ ಒಂದು ರಾಜಶಾಸನವನ್ನು ಬರೆದನು. ಬಲಗೈಯಿಂದ ಬರೆದರೆ ತನ್ನ ಕೈ ಬರೆಹದ ಗುರತು ಓದುವವರಿಗಾಗಲಿ, ಬೇರೆ ಯಾರಿಗೇ ಆಗಲಿ, ಹತ್ತಬಹುದೆಂದು ತಿಳಿದೇ ಆತನು ಅದನ್ನು ಗುರ್ತಿಸದ ಹಾಗೆ ಬೇಕಂತ ಎಡಗೈಯಿಂದ ಬರೆದಿದ್ದನು. ಶಾಸನವು ಬರೆದು ಮುಗಿದಮೇಲೆ, ಅವನು ತನ್ನ ಪೆಟ್ಟಿಗೆಯ ಒಂದು ಗುಪ್ತ ಖಾನೆಯಲ್ಲಿ ಬಹು ಗೌಪ್ಯವಾಗಿ ಶೇಖರಿಸಿಡಲ್ಪಟ್ಟಿದ್ದ ಒಂದು ಮುದ್ರೆ(ಮೊಹರನ್ನು)ಯನ್ನು ತೆಗೆದುಕೊಂಡು, ಆ ಶಾಸನದ ಮೇಲೆ ಯೋಗ್ಯ ಸ್ಥಳದಲ್ಲಿ ಅದರ ಛಾಪನ್ನು ಮುದ್ರಿಸಿದನು.

ಈ ಮುದ್ರೆಯು ಯಾರದೆಂದೂ ಅದನ್ನು ಶಕಟಾರನು ಇಷ್ಟು ಗೌಪ್ಯವಾಗಿ ಏಕೆ ಇಟ್ಟಿದ್ದನೆಂದೂ ವಾಚಕರಲ್ಲಿ ಸಹಜವಾಗಿ ಜಿಜ್ಞಾಸೆಯುಂಟಾಗಬಹುದು. ಆ ಮುದ್ರೆಯು ಮಗಧ ರಾಜ್ಯದ ಒಡೆಯನಾದ ನಂದಭೂಪತಿಯ ಹೆಸರಿನದಾಗಿತ್ತು. ಶಕಟಾರನು ಮುಖ್ಯ ಮಂತ್ರಿಯಾಗಿದ್ದಾಗ ನಂದಭೂಪತಿಯ ಮುದ್ರೆಯು ಇವನಲ್ಲಿಯೇ ಇರುತ್ತಿರುವದು ಸ್ವಾಭಾವಿಕವಾಗಿತ್ತು; ಆದರೆ ಪ್ರಸಂಗೋಪಾತ್ ತನ್ನನ್ನು ಈ ಪದವಿಯಿಂದ ಯಾರಾದರೂ ಚ್ಯುತಿಗೊಳಿಸಿದರೆ, ಅವರ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದದಲೋ ಮತ್ತಾವ ಕಾರಣದಿಂದಲೋ ಶಕಟಾರನು ತನ್ನ ಒಬ್ಬ ಶ್ರೇಷ್ಠ ಕಾರಾಗಿರನಿಂದ ರಾಜಮುದ್ರೆಯಂತಹ ಬೇರೊಂದು ಮುದ್ರೆ ಮಾಡಿಸಿದ್ದನು. ಈ ಗುಹ್ಯವು ಯಾವ ರೀತಿಯಿಂದಲೋ ಅಮಾತ್ಯ ರಾಕ್ಷಸನಿಗೆ ತಿಳಿಯಲು, ಅವನು ಆ ವಿಷಯದ ಚಾಡಿ ಮಾತುಗಳನ್ನು ನಂದ ಮಹಾರಾಜನಿಗೆ ಯಥೇಚ್ಛವಾಗಿ ಹೇಳಿ, ಶಕಟಾರನನ್ನು ಪದಚ್ಯುತಗೊಳಿಸಿ, ನಲಾಂದಾ ದುರ್ಗಕ್ಕೆ ಕಳಿಸಿದನು. ಹಾಗು ಆ ಎರಡನೇ ಮುದ್ರೆಯನ್ನು ಬಹು ಪರಿಯಾಗಿ ಶೋಧಿಸಿದನು. ಅದನ್ನು ನಿರ್ಮಿಸಿ ಕೊಟ್ಟ ಕಾರಾಗಿರನ ಮೈಗೆ ಎಣ್ಣೆ ಎದ್ದಿದ ಅರಿವೆ ಸುತ್ತಿಸಿ ಸುಡಿಸಿದನು ಸಹ! ಆದರೂ ಅದರ ಪತ್ತೆಯಾಗಲಿಲ್ಲ. ಅದು ಆಗಲೇ ಸಿಕ್ಕಿದ್ದರೆ, ಆ ಪುರಾವೆಯಿಂದ ರಾಕ್ಷಸನು ಶಕಟಾರನನ್ನು ಅರಮನೆಯೆದುರಿಗೇ ಗಲ್ಲಿಗೇರಿಸಲಿಕ್ಕೆ ಹಚ್ಚುತ್ತಿದ್ದನು, ಆದರೆ ಶಕಟಾರನು ಆ ಮೊಹರನ್ನು ತನ್ನ ಮನೆ-ಮಠಗಳಲ್ಲಿಡದೆ, ಒಂದು ಪೆಟ್ಟಿಗೆಯಲ್ಲಿಟ್ಟು, ಚಾಣಕ್ಯನ ವಶಕ್ಕೆ ಕೊಟ್ಟಿದ್ದನು. ನಾನು ಜೀವದಿಂದ ಉಳಿದರೆ, ಈ ಪೆಟ್ಟಿಗೆಯನ್ನು ನನ್ನ ಕಡೆಗೆ ಕೊಡಬೇಕೆಂದೂ, ಇಲ್ಲವಾದರೆ ನನ್ನ ಚಿತೆಯಲ್ಲಿ ಈ ಇಡೀ ಪೆಟ್ಟಿಗೆಯನ್ನೊಗೆದು ದಹಿಸಿ ಬಿಡಬೇಕೆಂದೂ ಅವನು ತನ್ನ ಪರಮ ಮಿತ್ರ ಚಾಣಕ್ಯನಿಗೆ ಅರಿಕೆ ಮಾಡಿಕೊಂಡಿದ್ದನು ಶಕಟಾರನು ಪ್ರಾಣಾಂತ ಸಂಕಟದಿಂದ ಪಾರಾಗಿ ಇತ್ತೀಚೆಗೆ ಪಾರ್ವತೇಶನ ಆಶ್ರಯದಲ್ಲಿರಹತ್ತಿದ ಬಳಿಕ, ಚಾಣಕ್ಯನು ತನ್ನಲ್ಲಿದ್ದ ಶಕಟಾರನ ಆ ಗುಪ್ತ ಇಡಿಗಂಟನ್ನು ಆತನಿಗೊಪ್ಪಿಸಿದ್ದನು.

ಶಕಟಾರನ ಶಾಸನವು ಬರೆಯುವದಾಗುವಷ್ಟರಲ್ಲಿ ಚಂಡಭೈರವ-ಕೌಶಿಕರು ಅಲ್ಲಿಗೆ ಬಂದರು. ಕೂಡಲೆ ಅವನು ಆ ಶಾಸನವನ್ನು ಅವರ ಕೈಯಲ್ಲಿ ಕೊಟ್ಟು, ನಾನು ಈ ಮೊದಲು ಹೇಳಿದಂತೆ ಇವನ್ನು ನಾಳೆ ಬೆಳಿಗ್ಗೆ ಚಾಣಕ್ಯಮುನಿಗೆ ಮುಟ್ಟಿಸಿರೆಂದು ತಿಳಿಸಿದನು.

ಮರು ದಿನ ಬೆಳಗಾಗುವಷ್ಟರಲ್ಲಿ ಆ ಚಂಡಭೈರವ-ಕೌಶಿಕರು ಕೇವಲ ಮಾಗಧೀ ಸೈನಿಕರಂತೆ ವೇಷ-ಭೂಷಣಗಳಿಂದ ಸಜ್ಜಾಗಿ, ಚಾಣಕ್ಯನಿದ್ದ ಆ ಊರಿಗೆ ಅಶ್ವಾರೋಹಿಗಳಾಗಿ ಹೋದರು; ಹಾಗು ಗ್ರಾಮಸ್ಥರಿಗೆ ವಿಚಾರಿಸಿದರೇನಂದರೆ:—ಈ ಊರಿಗೆ ಪಾಟಲಿಪುತ್ರದ ಪಂಡಿತವರನಾದ ಚಾಣಕ್ಯಮುನಿಯು ಬಂದಿರುವನೇ? ಎನ್ನಲು, ಕೂಡಲೆ ಗ್ರಾಮಸ್ಥರು ಆ ಸ್ವಾರರನ್ನು ಚಾಣಕ್ಯನು ಇಳಿದುಕೊಂಡ ಮನೆಗೆ ಕರೆದೊಯ್ದು ಅವರಿಗೆ ಭೇಟಿ ಮಾಡಿಸಿದರು. ಆ ಸ್ವಾರರು ಸಾಷ್ಟಾಂಗ ನಮಸ್ಕಾರ ಮಾಡಿ, ತಾವು ತಂದಿದ್ದ ರಾಜಶಾಸನವನ್ನು ಚಾಣಕ್ಯನಿಗೆ ಕೊಟ್ಟರು. ಚಾಣಕ್ಯನು ಅದನ್ನು ಸಾದ್ಯಂತವಾಗಿ ಓದಿದನು. ಅದರಲ್ಲಿ ಹೀಗೆ ಬರೆದಿತ್ತು:—

"ವೇದಶಾಸ್ತ್ರ ಸಂಪನ್ನ ಕರ್ಮಕಾಂಡ ನಿರತರಾದ ಪಂಡಿತ ಚಾಣಕ್ಯ
ಮುನಿಗಳ ಚರಣಾರವಿಂದಗಳಿಗೆ—

ಮಗಧ ದೇಶದ ಸಾರ್ವಭೌಮನಾದ ಮಹಾಪದ್ಮನಂದನ ಔರಸಪುತ್ರ-ಧನನಂದನ ಸಾಷ್ಟಾಂಗ ಪ್ರಣಿಪಾತಗಳು ನಾಳಿನ ವೈಶಾಖ ಶು|| ಅಷ್ಟಮಿಯು ದಿವಸ ನನ್ನ ತಂದೆಯ (ಮಹಾ ಪದ್ಮನಂದನ)ಶ್ರಾದ್ಧತಿಥಿಯಿರುವದು. ಆ ದಿನ ತಮ್ಮನ್ನು ಮುಖ್ಯ ಋತ್ವಿಜರನ್ನಾಗಿ ಪೂಜಿಸಬೇಕೆಂದು ನಿಶ್ಚಯಿಸಿ, ಈ ಪತ್ರಿಕೆಯನ್ನು ಬರೆಸಿರುವೆನು. ತಾವು ಬಂದು, ಆ ದಿನದ ನನ್ನ ಪಿತೃಶ್ರಾದ್ಧವನ್ನು ಯಥಾ ಸಾಂಗಗೊಳಿಸಬೇಕೆಂದು ಪ್ರಾರ್ಥಿಸುವೆ."

ಹೇರರು ಆ ಪತ್ರವನ್ನು ಕೊಟ್ಟರಲ್ಲದೆ:—ಭೂದೇವ, ನಾಡದು ಮಹಾರಾಜರ ಹಿರಿಯರ ಶ್ರಾದ್ಧವಿದೆ. ತಾವು ಆ ದಿವಸ ಪ್ರಾತಃಕಾಲಕ್ಕೆ ಪಾಟಲಿಪುತ್ರದ ಅರಮನೆಗೆ ಅವಶ್ಯವಾಗಿ ಬರಬೇಕೆಂದು ನಂದಮಹಾರಾಜರು ತಮಗೆ ತಿಳಿಸಿರುತ್ತಾರೆ, ಎಂದು ಹೇಳಿ, ಚಾಣಕ್ಯನ ಆಶೀರ್ವಾದವಂ ಪಡೆದು, ಹೊರಟು ಹೋದರು.

ಚಾಣಕ್ಯನು ಅಂದು ಅಲ್ಲಿಯ ಶ್ರಾದ್ಧಕಾರ್ಯವನ್ನು ನೆರವೇರಿಸಿಕೊಂಡು, ಮರು ದಿನ ಸ್ವಾಮಿ ಯೋಗಾನಂದರ ಆಶ್ರಮಕ್ಕೆ ಹೋದನು; ಹಾಗು ಮಾರನೆಯ ದಿನ ಬೆಳಿಗ್ಗೆ ಎದ್ದು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು, ಪಾಟಲಿಪುತ್ರದೊಳಗಿನ ಅರಮನೆಗೆ ನಡೆದನು.

ಅಂದು ಮಹಾರಾಜರ ತಂದೆಯ ಶ್ರಾದ್ಧ ದಿನವಾದ್ದರಿಂದ ಅರಮನೆಯನ್ನೆಲ್ಲ ಶುಚಿರ್ಭೂತಗೊಳಿಸಿದ್ದರು. ಮುಖ್ಯ ದಿವಾಣಖಾನೆಯಲ್ಲಿ ಶ್ರಾದ್ಧದ ಸರ್ವ ಸಿದ್ಧತೆಯನ್ನು ಮಾಡಿದ್ದು, ಮಧ್ಯದಲ್ಲಿ ಮುಖ್ಯ ಋತ್ವಿಜನಿಗಾಗಿ ಆಸನವು ಮಂಡಿಸಲ್ಪಟ್ಟಿತ್ತು. ಚಾಣಕ್ಯನು ಅಲ್ಲಿಗೆ ಹೋಗಲು,

ಆಮಂತ್ರಣ ಪತ್ರವನ್ನು ತಂದಿದ್ದ ಪ್ರಣಿಧಿಯೊಬ್ಬನು ಆ ಉಚ್ಚಾಸನದಲ್ಲಿ ಕೂಡ್ರಬೇಕೆಂದು ಅವನಿಗೆ ಸಂಜ್ಞೆ ಮಾಡಿದವನೇ ಬೇರೆ ಕಡೆಗೆ ಹೊರಟು ಹೋದನು. ಯಾವ ಹುಳುಕನ್ನೂ ಅರಿಯದ ಚಾಣಕ್ಯನು, ನೆಟ್ಟಗೆ ಹೋಗಿ ಪ್ರಾಮುಖ್ಯಾಸನವನ್ನಲಂಕರಿಸಿದನು!

ಅಲ್ಲಿಯ ವ್ಯವಸ್ಥಾಪಕನಾಗಿದ್ದ ಕಪಟಿಕನಿಗೆ ಚಾಣಕ್ಯನ ಗುರ್ತ ಹತ್ತಲು, ಈ ಹಾರುವನ ಹಲ್ಲು ಮುರಿಯಲಿಕ್ಕೆ ಇದೊಳ್ಳೇ ಸಮಯವೆಂದು ಬಗೆದು, ಅವನು ಚಾಣಕ್ಯನ ಹತ್ತರ ಹೋಗಿ. ಆತನ ಜುಟ್ಟುಹಿಡಿದು, ಆತನನ್ನು ಆ ಉಚ್ಚಾಸನದಿಂದ ಕೆಳಗೆ ಎಳೆದು:-ನೀಚಾ, ನಿನಗೆ ಇಲ್ಲಿ ಕೂಡ್ರುವ ಅಧಿಕಾರವೆಲ್ಲಿರುವದು? ಈ ಸ್ಥಾನವು ಇಂದು ರಾಜಗುರುಗಳಿಂದ ಅಲಂಕರಿಸಲ್ಪಡತಕ್ಕದ್ದೆಂಬದನ್ನು ಅರಿಯೆಯಾ? ಎಂದು ಅವಮಾನಗೊಳಿಸಿದನು. ಚಾಣಕ್ಯನು ಕ್ರೋಧಸಂತಪ್ತನಾಗಿ ತನ್ನ ಕ್ಕಿದ್ದ ರಾಜಶಾಸನವನ್ನು ಅಲ್ಲಿಯೇ ಕುಳಿತಿದ್ದ ನಂದಭೂಪತಿಯ ಮುಂದೆ ಚೆಲ್ಲಿ:—'ಕುಲಗೇಡಿಯೇ, ಬ್ರಾಹ್ಮಣನಿಗೆ ಆಮಂತ್ರಣವನ್ನು ಕೊಟ್ಟು, ಈ ಪರಿ ಅಪಮಾನ ಮಾಡುವ ನಿನ್ನ ಈ ರಾಜ್ಯವು ಕ್ಷಿಪ್ರದಲ್ಲಿಯೇ ಹಾಳಾಗಲಿ! ಇಂದು ಬಿಚ್ಚಲ್ಪಟ್ಟ ನನ್ನೀ ಜುಟ್ಟುಗಳನ್ನು ನಾನು ನಿನ್ನ ಶ್ರಾದ್ಧದ ದಿನವೇ ಕಟ್ಟುವೆನು,' ಎಂದು ಪಣ ಮಾಡಿ, ಅಲ್ಲಿಂದ ಹೊರಟನು.

---

## ಕಂಕಣ ಕಳವಾದರೆ ನನ್ನ ಪಣ ಕೈಗೂಡುವದು

ಶಕಟಾರನು ಚಾಣಕ್ಯನಿಗೆ ಅಪಮಾನವಾಗುವ ರಾಜಕಾರಣವನ್ನುಂಟು ಮಾಡಿದ್ದರಿಂದ, ಮೊದಲೇ ತಾಮಸವೃತ್ತಿಯ ಚಾಣಕ್ಯನು ತನ್ನ 'ಕೌಟಿಲ್ಯ ಸೂತ್ರ'ವೆಂಬ ಗ್ರಂಥದಲ್ಲಿ ಉಲ್ಲೇಖಿಸಿರುವಂತೆ, ನಂದಭೂಪತಿಯ ಉಚ್ಛೇದಕ್ಕೆ ಸಜ್ಜಾದನು ಚಾಣಕ್ಯನಂಥ ತೇಜಸ್ವಿಯಾದ ವ್ಯಕ್ತಿಯು ಕೈಗೊಡದ ಹೊರತು, ಮಗಧ ಸಾಮ್ರಾಜ್ಯ ಶಿಖರವನ್ನು ಉರುಳಿಸುವದಾಗುವದಿಲ್ಲೆಂಬದು ಶಕಟಾರನಿಗೆ ಚನ್ನಾಗಿ ಗೊತ್ತಿತ್ತು. ಅಂತೇ ಅವನು ಚಾಣಕ್ಯನಿಂದಲೇ ಮಗಧ ಭೂಪತಿಯ ನಾಶಕ್ಕೆ ಕಾರಣವಾಗುವಂಥ ಉಪಾಯವನ್ನು ಕಂಡು ಹಿಡಿದು, ಅದನ್ನು ಅವನ ಮೇಲೆ ಪ್ರಯೋಗಿಸಿದನು! ಕಾಲವೂ ಅನುಕೂಲವಾದ್ದರಿಂದ, ಆತನ ಆ ಪ್ರಯೋಗವು ಫಲಿಸಿತು!! ಬಳಿಕ ಶಕಟಾರನು ಮತ್ತೊಂದು ಉದ್ಯೋಗದಲ್ಲಿ ತೊಡಗಿದನು ಆತನು

ಪೂರ್ವ ವಯಸ್ಸಿನಲ್ಲಿದ್ದಾಗ, ಅಂದರೆ ಸರಾಸರಿ ಹನ್ನೆರಡು ವರ್ಷಗಳ ಮೊದಲು ಒಮ್ಮೆ ಈ ಪರ್ವತ ರಾಜ್ಯದ ಸೀಮೆಯಲ್ಲಿ ವಿಹರಿಸುವದಕ್ಕಾಗಿ ಬಂದಿದ್ದನು. ಪರ್ವತ ಹಾಗೂ ಮಗಧ ರಾಜ್ಯಗಳ ಸೀಮೆಗಳಲ್ಲಿ ಕುಸುಮಪುರವೆಂಬ ಹೆಸರಿನ ಮಗಧ ರಾಜ್ಯಕ್ಕೆ ಅಧೀನವಾದ ಒಂದು ಪ್ರಖ್ಯಾತ ಪಟ್ಟಣವಿತ್ತು. ಕುಸುಮಪುರವಾದರು ಗಂಗಾ ತಟಾಕದಲ್ಲಿಯೇ ಇದ್ದದರಿಂದ, ಪಾಟಲಿಪುತ್ರದೊಳಗಿನ ಸಮಸ್ತ ಜಿನಸುಗಳು ಜಲ ಮಾರ್ಗದಿಂದ ಇಲ್ಲಿಗೆ ಸಹಜವಾಗಿ ಬರುವಂತಿತ್ತು. ಆದರಿಂದಲೇ ಆ ಗಡಿಪ್ರದೇಶದೊಳಗಿನ ಆ ಪಟ್ಟಣವು ವ್ಯಾಪಾರಕ್ಕೆ ಹೆಸರಾಗಿತ್ತು. ಆ ಕುಸುಮಪುರದ ಗಂಗಾ ತಟಾಕದಲ್ಲಿ ರಾಜಪ್ರಾಸಾದದಂಥ ಒಂದು ಮಾಡೆಯಿತ್ತು. ಅದನ್ನು ನೋಡಿದಾಕ್ಷಣವೇ ಅದು ಯಾರದಿರಬಹುದೆಂಬ ಜಿಜ್ಞಾಸೆಯು ಶಕಟಾರನಲ್ಲಿ ಉತ್ಪನ್ನವಾಯಿತು. ಆಗ ಅವನು ಆ ಮನೆಯ ಮಾಲಕನ ಶೋಧ ನಡೆಸಲು, 'ಧನಶ್ರೀಪ್ರಸಾದ' ನೆಂಬ ಹೆಸರಿನ ಶೆಟ್ಟಿಯು ಬಂದು ಮಗಧರಾಜ್ಯದ ಮುಖ್ಯ ಅಮಾತ್ಯನಾದ ತರುಣ ಶಕಟಾರನಿಗೆ ಭೆಟ್ಟಿಯಾದನು.

ಧನಶ್ರೀಪ್ರಸಾದ ಶೆಟ್ಟಿಯು ಮೊದಲು ಎಷ್ಟೋ ಶ್ರೀಮಂತನಿದ್ದರೂ ಶಕಟಾರನೊಡನೆ ಸ್ನೇಹವುಂಟಾದಂದಿನಿಂದಲೇ ಆತನ ನಿಜವಾದ ಭಾಗ್ಯೋದಯವಾದಂತಾಯಿತು! ಯಾಕೆಂದರೆ, ಶಕಟಾರನು ಸಾಮಾನ್ಯ ಮನುಷ್ಯನಾಗಿರಲಿಲ್ಲ; ಮಗಧ ಸಾಮ್ರಾಜ್ಯದ ಪ್ರಧಾನ ಸಚಿವನಾಗಿದ್ದನು. ಶಕಟಾರನ ಕೃಪಾವಲೋಕನದಿಂದಲೇ ಕುಸುಮಪುರದ ಧನಶ್ರೀಪ್ರಸಾದ ಶೆಟ್ಟಿಯು ಬರಬರುತ್ತ ಮಗಧರಾಜ್ಯದ ಒಬ್ಬ ಪ್ರಖ್ಯಾತ ರತ್ನ-ಮಾಣಿಕಗಳ ವ್ಯಾಪಾರಿಯಾದನು.

ಧನಶ್ರೀಶೆಟ್ಟಿಗೆ ಉಪವರಳಾದ ಒಬ್ಬ ಸುಂದರ ಕನ್ಯೆಯಿದ್ದಳು. ಈ ಮೊದಲೇ ಆಕೆಯ ವಿವಾಹ ಮಾಡಬೇಕೆಂದು ಆ ವಣಿಕವರನು ಬಹು ಆತುರಪಡುತಲಿದ್ದನು; ಆದರೆ ಆ ಕನ್ಯೆಗೆ ತಕ್ಕ ವರನ ಜೋಡಣಿಯು ಇದುವರೆಗೆ ಆಗಿರಲಿಲ್ಲಾದ್ದರಿಂದಲೇ ಆ ಕಾರ್ಯವು ಹಾಗೇ ನಿಂತು ಹೋಗಿತ್ತು. ಸಂಸಾರದಲ್ಲಿ ಆ ಕನ್ಯೆಯ ವಿನಃ ಅವನಿಗೆ ಮತ್ತಾರೂ ಇರಲಿಲ್ಲ. ಅವನು ತನ್ನ ಮಗಳನ್ನು ಯಾವನೊಬ್ಬ ಚಲೋ ವರನಿಗೆ ಕೊಟ್ಟು ಬೇಕಾದಷ್ಟು ಸಂಪತ್ತನ್ನು ಅವಳಿಗೆ ಕೊಡಬಹುದಾಗಿತ್ತು; ಆದರೆ ಇದ್ದ ಒಬ್ಬ ಮಗಳನ್ನು ಗಂಡನ ಮನೆಗೆ ಕಳಿಸಿಕೊಟ್ಟರೆ, ತನಗೆ ಎಲ್ಲ ಕಡೆಗೂ ಅರಣ್ಯವೇ ಆಗುವದೆಂದು ತಿಳಿದು, ಆ ಧನಶ್ರೀಶೆಟ್ಟಿಯು ತನ್ನ ಮಗಳಾದ ತಡಿತೆಗೆ ತನ್ನ ಮನೆಯಲ್ಲಿಯೇ ಬಂದು ಇರುವಂಥ ವರನನ್ನು ಹುಡುಕುತ್ತಿ

ದ್ದನು. ಅಂಥ ಯಾವ ವರನೂ ಇದು ವರೆಗೂ ದೊರೆತಿರಲಿಲ್ಲ. ನಯನ ಮನೋಹರಳಾದ ತಡಿತೆಯು ಷೋಡಶಾವಸ್ಥೆಯನ್ನು ಮೀರತೊಡಗಿದಳು. ಅದರಿಂದ ಮೊದಲೇ ಮಿಂಚಿನಂತಹ ಅವಳ ಮೈಬಣ್ಣದ ಲಾವಣ್ಯವು ಮತ್ತಿಷ್ಟು ಪ್ರಸ್ಫುಟಿತವಾಗಲಾರಂಭಿಸಿತು. ಧನಶ್ರೀ ಶೆಟ್ಟಿಗೆ ಮತ್ತಾವ ಚಿಂತೆಯೂ ಇದ್ದಿಲ್ಲ; ತನ್ನ ಮಗಳ ವಿವಾಹದ ಚಿಂತೆಯೊಂದೇ ಘನವಾಗಿ ಮುಸುಕಿ ಬಿಟ್ಟಿತ್ತು.

ಆ ಕಾಲಕ್ಕೆ ಶಕಟಾರನೂ ಒಳ್ಳೇ ಪ್ರಾಯದವನಾಗಿದ್ದನು; ಆದರೂ ತನ್ನ ತಂದೆಯ ಆಪ್ತನೆಂದು ತಡಿತೆಯು ಆತನೊಡನೆ ಮಾತು-ಕಥೆಗಳನ್ನಾಡಲಿಕ್ಕೆ ಸಂಕೋಚ ತಾಳುತ್ತಿರಲಿಲ್ಲ; ಆದರೆ ಅವರೀರ್ವರ ತಾರುಣ್ಯಾವಸ್ಥೆಯಲ್ಲಿಯ ಆ ಸಂಭಾಷಣದ ಯೋಗವು ಅವರೀರ್ವರಿಗೂ ತಿಳಿಯದ ಹಾಗೆ ಮಧುರಮೀಲನವಾಗಿ ಪರಿಣಮಿಸಲಾರಂಭಿಸಿತು. ತಡಿತೆಯ ಭೇಟಿಯಾಗದಿದ್ದರೆ ಶಕಟಾರನಿಗೆ ಹೇಗೆ ಹೇಗೋ ಅನಿಸಲಾರಂಭಿಸಿತು; ಶಕಟಾರನ ಭೇಟಿಯಾಗದಿದ್ದರೆ ತಡಿತೆಗೂ ಅನ್ನ-ನೀರುಗಳು ಕೂಡ ರುಚಿಸದಾದವು!

ಆದರೆ ಶಕಟಾರನು ಕೀಳು ನಡತೆಯುವನಿದ್ದಿಲ್ಲ ಆತನ ಸ್ವಭಾವವು ಅತಿ ನಿರ್ಮಲವಿದ್ದಂತೆ, ಮನಸ್ಸಾದರೂ ಆತ್ಮಸಂಯಮನಕ್ಕೊಳಗಾದದ್ದಿತ್ತು. ಆದರೂ ಎಷ್ಟು ಗಟ್ಟಿಯಾದ ಹೆತ್ತ ತುಪ್ಪವಿದ್ದರೂ ಅದನ್ನು ಬೆಂಕಿಯ ಹತ್ತಿರಕ್ಕೆ ಒಯ್ದರೆ ಅದು ಹೇಗೆ ಕ್ರಮಶಃ ಕರಗಹತ್ತುವದೋ, ಹಾಗೆ ಶಕಟಾರ-ತಡಿತೆಯರ ಅವಸ್ಥೆಯಾದರೂ ಆಯಿತು ಅಂತೇ ನಮ್ಮ ಹಿಂದೂ ಶಂಸ್ಕಾರಕಾರರು ಯುವಕ-ಯುವತಿಯರ ಏಕಾಂತಾಲಾಪಕ್ಕೆ ಹಲವು ಬಗೆಯಿಂದ ನಿಷೇಧಿಸಿರುತ್ತಾರೆ.

ಶಕಟಾರನು ತನ್ನ ಆಯುಷ್ಯದ ಮೊದಲನೇ ಪಾದವನ್ನು(೨೫ವರ್ಷಗಳನ್ನು)ಮೀರಿದವನಾದ್ದರಿಂದ, ಅವನು ಹರಿಯುವ ತನ್ನ ಮನಸ್ಸಿಗೆ ಬಂಧನವನ್ನುಂಟು ಮಾಡಿ ವಿವೇಕ ತಾಳುತ್ತಿದ್ದನು; ಆದರೆ ತಡಿತೆಯು ಕೇವಲ ತರುಣಳೂ ರೂಪ-ಲಾವಣ್ಯಗಳಿಂದ ಮತ್ತಳೂ ಆದುದರಿಂದ, ಅವಳು ತನ್ನ ಕಾಮುಬಾಧೆಯನ್ನು ಸೈರಿಸಲಾರದಾದಳು. ಬರಬರುತ್ತ ಆಕೆಯು ತನ್ನ ಮನೋವಿಕಾರಗಳನ್ನು ಶಕಟಾರನಿಗೆ ಬಾಯಿಬಿಚ್ಚಿ ತಿಳಿಸಲಾರಂಭಿಸಿದಳು. ಶಕಟಾರನ ಮನಸ್ಸಾದರೂ ಆಕೆಯ ವಿಷಯವಾಗಿ ಅನುಕೂಲವಿದ್ದರೂ, ಅವನು ಆಕೆಗೆ ಎಷ್ಟೋ ವಿವೇಕದ, ಆತ್ಮಸಂಯಮನದ ಮಾತುಗಳನ್ನು ಹೇಳಿ, ಆಕೆಯ ವಿಕಾರಗಳಿಗೆ ಒಡ್ಡು ಹಾಕುತ್ತಿದ್ದನು. ಆದರೂ ರಮಣಿಯರ ಸ್ಥಿತಿಯು ವಿಚಿತ್ರವಾದದ್ದು; ಅವರು ಯಾವನಲ್ಲಿ ಒಮ್ಮೆ ಮನಃ

ಪೂರ್ವಕವಾಗಿ ಪ್ರೇಮವಿಡುವರೋ, ಅವನ ಸಲುವಾಗಿ ತಮ್ಮ ಸರ್ವಸ್ವವನ್ನೂ ಕಳೆಕೊಳ್ಳಲಿಕ್ಕೆ ಹಿಂದುಮುಂದು ನೋಡುವದಿಲ್ಲ! "ನಾನು ಮನಃಪೂರ್ವಕವಾಗಿ ನಿನ್ನನ್ನು ವರಿಸಿರುವೆನು. ನಿನ್ನ ಹೊರತು ಜಗತ್ತಿನೊಳಗಿನ ಎಲ್ಲ ಪುರುಷರೂ ನನಗೆ ಅಣ್ಣ-ತಮ್ಮಂದಿರು; ಆದುದರಿಂದ ಪ್ರಿಯಕರಾ, ನೀನು ನನ್ನನ್ನು ವರಿಸಿ, ನನ್ನೊಡನೆ ಸುಖದಿಂದ ಜೀವಿಸು" ಎಂದು ತಡಿತೆಯು ಶಕಟಾರನಿಗೆ ಒಮ್ಮೆ ಸ್ಪಷ್ಟವಾಗಿ ಹೇಳಿಬಿಟ್ಟಳು.

ಹೀಗೆ ತಡಿತೆಯು ಹೇಳಿದಂದಿನಿಂದ ಶಕಟಾರನು ಆ ಧನಶ್ರೀಶೆಟ್ಟಿಯ ಕಡೆಗೆ ಹೋಗುವದನ್ನೇ ಕಡಿಮೆ ಮಾಡಿದನು. "ನನ್ನ ಬಡವನ ಮನೆಗೆ ಇತ್ತೀಚೆಗೆ ನೀವು ಏಕೆ ಬರುವದಿಲ್ಲ?" ಎಂದು ಶೆಟ್ಟಿಯು ವಿಚಾರಿಸಲು, "ಈಗ ರಾಜ್ಯದ ನಾಲ್ಕೂ ಕಡೆಗೆ ಗೊಂದಲವೆದ್ದಿರುವದರಿಂದ, ನನಗೆ ಅತ್ತಿತ್ತ ಉಲುಕಾಡಲಿಕ್ಕೆ ಕೂಡ ಸಮಯ ದೊರೆಯುವದಿಲ್ಲ" ವೆಂದು ಏನಾದರೂ ನೆವ ಹೇಳಿ, ಶಕಟಾರನು ಆ ಪ್ರಸಂಗವನ್ನು ದಾಟಿಸಿ ಬಿಡುತ್ತಿದ್ದನು. ಒಮ್ಮೆ ಧನಶ್ರೀಶೆಟ್ಟಿಯು ಶಕಟಾರನ ಬಳಿಗೆ ತನ್ನ ಸೇವಕರನ್ನು ಕಳುಹಿಸಿ ಕರೆಯಿಸಿಕೊಂಡನು. ಆಗ ಶೆಟ್ಟಿಗೆ ಅವಸಾನಕಾಲವು ಪ್ರಾಪ್ತವಾಗಿತ್ತು. ಅವನು ಶರಪಂಜರದಲ್ಲಿ ಬಿದ್ದುಕೊಂಡು, ಶಕಟಾರನ ಕಡೆಗೆ ದೀನಮುಖದಿಂದ ನೋಡುತ್ತ:—ಮಂತ್ರಿವರ್ಯಾ, ಪೂರ್ವಜನ್ಮದ ಋಣಾನುಬಂಧುತ್ವದ ಮೂಲಕ ನನ್ನ-ನಿನ್ನಲ್ಲಿ ಇಷ್ಟು ದೃಢವಾದ ಮೈತ್ರಿಯು ಉಂಟಾಗಿರುತ್ತದೆ. ಮಿತ್ರಾ, ನಾನಿನ್ನು ಇಹಲೋಕವನ್ನು ತ್ಯಜಿಸುವೆನು. ನಿನ್ನ ಕೃಪೆಯಿಂದ ನನಗೆ ಧನ-ದೌಲತ್ತುಗಳ ಅಭಾವವಿಲ್ಲ. ಇಲ್ಲೆನ್ನಲಿಕ್ಕೆ ಒಂದೇ ಒಂದು ಮಾತಿನ ಕೊರತೆಯಿರುತ್ತದೆ. ಪ್ರೌಢಳೂ, ರೂಪ-ಲಾವಣ್ಯಗಳಿಂದ ಯುಕ್ತಳೂ, ಮಾತೃಹೀನಳೂ ಆದ ನನ್ನ ಕನ್ಯೆಗೆ ತಕ್ಕ ವರನು ಸಿಗದಿರುವದೇ ನನ್ನ ಚಿಂತೆಗೆ ಕಾರಣವು. ಸಚಿವಶ್ರೇಷ್ಠಾ, ನಾನಂತೂ ನಡೆದೆನು. ನನ್ನ ಮಗಳನ್ನು ಯಾವನೊಬ್ಬ ಹೀನ ವರನ ಕೊರಳಲ್ಲಿ ಕಟ್ಟಬೇಡ. ಅವಳು ಈಗ ಹ್ಯಾಗೂ ದೊಡ್ಡವಳಾಗಿರುತ್ತಾಳೆ ತನ್ನ ಹಿತಾಹಿತಗಳು ಅವಳಿಗೂ ತಿಳಿಯಹತ್ತಿವೆ ಅದರಿಂದ ಅವಳು ಬಯಸುವ ವರನೊಡನೆ ಅವಳ ವಿವಾಹವನ್ನು ಮಾಡಿಕೊಡು; ಹಾಗು ನನ್ನ ತರುವಾಯ ನನ್ನ ಮನೆತನದ ಮೇಲ್ವಿಚಾರಣೆಯನ್ನು ನೀನೇ ನೋಡುತ್ತ ನಡೆಯಿಸು.

ಧನಶ್ರೀಶೆಟ್ಟಿಯ ಮರಣದ ನಂತರ ಮನಸ್ಸಿಲ್ಲದಿದ್ದರೂ ಶಕಟಾರನು ಆಗಾಗ್ಗೆ ಕುಸುಮಪುರಕ್ಕೆ ಹೋಗಿ, ಆ ಶೆಟ್ಟಿಯ ಮನೆಯ ವ್ಯವಸ್ಥೆಯನು

ನೋಡಬೇಕಾಯಿತು; ಆದರೆ ತಡಿತೆಯೊಡನೆ ಸಾಕ್ಷಾತ್ಕಾರವಾಗದಂತೆ ಅವನು ವಾಡೆಯ ಪಡಸಾಲೆಯ ಕೋಣೆಯಲ್ಲಿ ಕುಳಿತೇ ಮನೆಯ ಕಾರಭಾರ ನೋಡುತ್ತ, ಆಕೆಯ ಕ್ಷೇಮಸಮಾಚಾರದ ಬಗ್ಗೆ ದಾಸಿಯರ ಮುಖದಿಂದಲೇ ಕೇಳಿಕೊಳ್ಳುತ್ತ ಕಾಲಹಾಕುತ್ತಿದ್ದನು.

ಒಂದು ದಿನ ಸಮಯ ಸಾಧಿಸಿ, ತಡಿತೆಯು ಶಕಟಾರನ ಮುಂಗೈ ಹಿಡಿದು:—"ನಾಥ! ಈ ದಾಸಿಯಲ್ಲಿ ಇಷ್ಟು ಅವಕೃಪೆಯೇಕೆ? ನೀವೂ ನಾನೂ ಒಂದೇ ಜಾತಿಯವರಲ್ಲೆಂದು ನೀವು ನನ್ನನ್ನು ವರಿಸಲಿಚ್ಛಿಸುವದಿಲ್ಲೇನು? ಪ್ರೇಮಸಂಯೋಗಕ್ಕೆ ಜಾತಿ-ಕುಲಗಳ ಆತಂಕವೇ?" ಎಂದು ಕೇಳಲು,

ಶಕಟಾರನು ಆಕೆಗೆ ಹೇಳಿದ್ದೇನಂದರೆ:—ಆ ಕಾರಣದಿಂದ ನಾನು ನಿನ್ನನ್ನು ಉಪೇಕ್ಷಿಸುವದಿಲ್ಲ. ನಿನ್ನನ್ನು ನಾನು ವರಸಿದುದೇ ಆದರೆ, ಮಗಧ ರಾಜ್ಯದಲ್ಲಿಯ ನನ್ನ ಗೌರವವು ಕಡಿಮೆಯಾದೀತು! ಯಾಕಂದರೆ, ನಾನು ನಿನ್ನಷ್ಟು ಧನವಂತನಲ್ಲ ಧನದಾಶೆಯಿಂದಲೇ ಇವನು ಈಕೆಯನ್ನು ವರಸಿದನೆಂದು ಜನರೆಲ್ಲ ಆಡಿಕೊಳ್ಳಬಹುದು.

ಕೂಡಲೆ ತಡಿತೆಯು:—ಪ್ರಾಣನಾಥ, ಈ ಹಣದ ಸಲುವಾಗಿ ನನ್ನ ತಮ್ಮ ನಡುವೆ ಅಂತರವೇ? ಬೇಕಾದರೆ ತಾವು ಇದನ್ನೆಲ್ಲ ಈಗಲೆ ತಮ್ಮ ಇಷ್ಟಸ್ಥಳಕ್ಕೆ ತಕ್ಕೊಂಡು ನಡೆಯಿರಿ. ಇಲ್ಲವಾದರೆ ಇದನ್ನೆಲ್ಲ ಇಲ್ಲಿಯೇ ಬಿಟ್ಟುಗೊಟ್ಟು ನಾವೀರ್ವರೂ ಬೇರೆ ದೇಶಕ್ಕೆ ಹೋಗಿ, ದಾಂಪತ್ಯಭಾವವನ್ನು ವಹಿಸಿ, ಸುಖ-ಸಮಾಧಾನಗಳಿಂದ ಕಾಲ ಕ್ರಮಿಸೋಣ. ನೀವು ನನ್ನನ್ನು ವರಿಸದಿದ್ದರೂ, ಮನಸ್ಸಿನಿಂದಾದರೂ ನಾನು ನಿಮ್ಮನ್ನು ವರಿಸಿ, ಮನೋಭೂಮಿಕೆಯಲ್ಲಿ ನಿಮ್ಮ ಮೂರ್ತಿಯನ್ನು ನೆಲಿಸಿಕೊಂಡು, ಆ ಮೂರ್ತಿಯ ಧ್ಯಾನದಲ್ಲಿಯೇ ನನ್ನ ಆಯುಷ್ಯವನ್ನೆಲ್ಲ ಕಳೆಯತಕ್ಕವಳು! ಎಂದು ಸ್ಪಷ್ಟವಾಗಿ ಆರುಹಿದಳು ಶಕಟಾರನಿಂದ ಆಕೆಯ ವಿನಂತಿಯನ್ನು ಮಾನ್ಯಮಾಡುವದೂ ಆಗಲೊಲ್ಲದು: ಇದಾಗದೆಂದು ತಟ್ಟನೆ ನುಡಿಯುವದೂ ಆಗಲೊಲ್ಲದು. ಆಗ ಅವನೊಂದು ಹಂಚಿಕೆ ಹಾಕಿ:—"ಈ ಬಗ್ಗೆ ಆಲೋಚಿಸಿ, ಇನ್ನೊಂದು ತಿಂಗಳಿಗೆ ಏನೆಂಬದನ್ನೂ ನಿನಗೆ ಖಂಡಿತವಾಗಿ ತಿಳಿಸುವೆನು; ಆದರೆ ಆಗ ನಾನು ನಿನ್ನನ್ನು ವರಿಸುವದನ್ನು ನಿಶ್ಚಯಿಸಿದರೆ, ನೀನು ನಿನ್ನ ಈ ಧನರಾಶಿಯ ಮೇಲೆ ತುಳಸೀಪತ್ರವನ್ನಿಟ್ಟು, ನನ್ನೊಡನೆ ಪರದೇಶಕ್ಕೆ ಬರಬೇಕಾದೀತು ನೋಡು" ಎಂದು ತಿಳಿಸಿದನು. ಆಗ ಅವಳು ಹೇಳಿದಳೇನಂದರೆ:—ನೀವು ಒಂದು ತಿಂಗಳಿಗೇ ಏಕೆ; ಒಂದು ವರ್ಷಕ್ಕೆ,

ಅದೇಕೆ, ನಿಮಗೆ ಕೂಡಿದಾಗ ಬಂದಹೂ ಬರ್ರಿ; ಆದರೆ ಬರುವಾಗ ಮಾತ್ರ ನನ್ನನ್ನು ವರಿಸುವದನ್ನೇ ನಿಶ್ಚಯಿಸಿಕೊಂಡು ಬನ್ನಿರಿ. ಅಲ್ಲಿಯ ವರೆಗೆ ನಾನು ನಿಮ್ಮ ಮೂರ್ತಿಯ ಧ್ಯಾನದಲ್ಲಿಯೇ ರತಳಾಗಿ, ಬ್ರಹ್ಮಚರ್ಯ ವನ್ನು ಪಾಲಿಸುತ್ತಿರುತ್ತೇನೆ. ನೀವು ನನ್ನನ್ನು ಬಾಹ್ಯತಃ ವರಿಸಿರಿ-ವರಿಸದಿರಿ; ನೀವೇ ನನಗೆ ಇಹಜನ್ಮದ ಪತಿಗಳು

ಮುಂದೆ ತಿಂಗಳು-ಆರು ತಿಂಗಳು-ವರ್ಷ-ಹನ್ನೆರಡು ವರ್ಷಗಳು ಕಳೆದರೂ ಶಕಟಾರನಿಗೆ ತಡಿತೆಯ ದರುಶನಕ್ಕೆ ಹೋಗುವದಾಗಲಿಲ್ಲ. ರಾಕ್ಷಸನು ಇಲ್ಲದ್ದೊಂದು ನೆವ ಮಾಡಿ, ಆತನನ್ನು ನಲಾಂದಾ ದುರ್ಗದಲ್ಲಿ ಸೆರೆ ಇಟ್ಟಿದ್ದೇ ಅದಕ್ಕೆ ಕಾರಣವಾಗಿತ್ತು.

ಶಕಟಾರನು ಇನ್ನು ಆ ತಡಿತೆಯನ್ನು ಕಾಮೇಚ್ಛೆಯಿಂದಲ್ಲದಿದ್ದರೂ ನಂದಭೂಪತಿಯನ್ನು ಪೇಚಿನಲ್ಲಿ ಕೆಡಹುವ ಉದ್ದೇಶದಿಂದಲಾದರೂ ಭೇಟಿಯಾಗಬೇಕಾಗಿತ್ತು. ಧನನಂದನು ಒಳ್ಳೇ ಸ್ತ್ರೀಲೋಲುಪನಿದ್ದನೆಂಬದು ನಮ್ಮ ವಾಚಕರಿಗೆ ಬೇರೆ ಹೇಳಬೇಕೇ? ತಡಿತೆಯ ಭೇಟಿಗೆ ತಾನೇ ಹೋದರೆ' ತನ್ನ ಈಪ್ಸಿತ ಕೆಲಸವಾಗದ್ದೆಂದು ಭಾವಿಸಿದ್ದ ಶಕಟಾರನು, ತಡಿತೆಯನ್ನೇ ತನ್ನಲ್ಲಿಗೆ ಕರೆತರುವ ಸಲುವಾಗಿ ತನ್ನ ಪ್ರಿಯಪತ್ನಿಯಾದ ಲಲಿತೆಯನ್ನು ಚಂಡಭೈರವನೊಡನೆ ಅವಳಲ್ಲಿಗೆ ಕಳುಹುವದನ್ನು ನಿಶ್ಚಯಿಸಿದನು.

ಒಂದು ದಿನ ಮಕ-ಮಕ ಮೂರೂ ಸಂಜೆಯ ಹೊತ್ತಿನಲ್ಲಿ ಇಬ್ಬರು ಪ್ರವಾಸಿಗಳು ಕುಸುಮಪುರದೊಳಗಿನ ಒಂದು ದೇವಾಲಯದಲ್ಲಿ ಬಂದು ಇಳಿದರು. ಅವರು ಬಾವಾ-ಬೈರಾಗಿಣಿಯರಂತೆ ತೋರುತ್ತಿದ್ದರು. ಯಾವ ಮಂದಿರದಲ್ಲಿ ಆ ಬಾವಾ-ಬೈರಾಗಿಣಿಯರಿಳಿದುಕೊಂಡಿದ್ದರೋ, ಅದೇ ಮಂದಿರಕ್ಕೆ ರಾತ್ರಿ ಒಂಬತ್ತು ಹೊಡೆದು ಹೋದ ಮೇಲೆ ತಡಿತೆಯು ದೇವ ದರ್ಶನಕ್ಕೆಂದು ಬರುವ ಪದ್ಧತಿಯಿತ್ತು. ಆಕೆಯು ದೇವರ ದರ್ಶನಕ್ಕಾಗಿ ಬಂದಾಗ ಅಲ್ಲಿಯ ವೃದ್ಧ ಪೂಜಾರಿಯೂ, ಪಾಂತಸ್ಥರಾರಾದರೂ ಇದ್ದರೆ ಅವರೂ, ಇವರ ಹೊರತು ಬೇರೆ ಯಾರೂ ಅಲ್ಲಿರುತ್ತಿರಲಿಲ್ಲ. ಆ ದೇವಾಲಯವನ್ನು ತಡಿತೆಯೇ ಸ್ಥಾಪಿಸಿದ್ದರಿಂದ, ಅಲ್ಲಿಯ ಎಲ್ಲ ವ್ಯವಸ್ಥೆಯೂ ಅವಳ ಮನಸ್ಸಿನಂತೆಯೇ ನಡೆಯುತ್ತಿತ್ತು. ಆ ದಿವಸ ತಡಿತೆಯು ದೇವದರ್ಶನಕ್ಕೆ ಬರಲು, ಬೈರಾಗಿಣಿ ವೇಷಧರಿಸಿದ್ದ ಲಲಿತೆಯು ಅವಳ ಪದದ್ವಯಗಳನ್ನು ಗಟ್ಟಿಯಾಗಿ ಹಿಡಕೊಂಡು ಬಿಕ್ಕಿ-ಬಿಕ್ಕಿ ಅಳಲಾರಂಭಿಸಿದಳು. ತಡಿತೆಯು ತನ್ನ ಕಾಲುಗಳನ್ನು ಬಿಡಿಸಿಕೊಳ್ಳಲು ಎಷ್ಟು ಪ್ರಯತ್ನಿಸಿದರೂ, ಬೈರಾಗಿಣಿಯು ಬಿಡಲೊಲ್ಲಳು. ಆಗ ತಡಿತೆಯು ಆಕೆಗೆ ಅಭಯ ಕೊಟ್ಟು

ಕೇಳಲು, ಆ ವೈರಾಗಿಣಿ ವೇಷಧಾರಿಣಿಯು--ಸಾಧ್ವೀ, ಬ್ರಹ್ಮಚಾರಿಣಿಯೇ. ನಾನು ಮಗಧ ದೇಶದ ಪದಚ್ಯುತ ಮಂತ್ರಿಯಾದ ಶಕಟಾರನ ಧರ್ಮಪತ್ನಿಯು. ಮಗಧ ಸಾಮ್ರಾಜ್ಯದಲ್ಲಿ ಅವನಿಗುಂಟಾದ ಕಷ್ಟ-ನಷ್ಟಗಳ ವರ್ತಮಾನವು ನಿನಗೆ ಗೊತ್ತಿರಲಿಕ್ಕೆ ಸಾಕು. ಶಕಟಾರನು ತೀರ ಅವಸಾನಗೆಟ್ಟಿರಲು, ಸ್ವಾಮಿ ಯೋಗಾನಂದರ ಅನುಗ್ರಹದಿಂದ ನಾನು ಅವನನ್ನು ಅಲ್ಲಿಂದ ಬಿಡಿಸಿಕೊಂಡು ಬೇರೆ ಗುಪ್ತಸ್ಥಳದಲ್ಲಿಟ್ಟು, ಸೇವಾ,ಶುಶ್ರೂಷೆಯ ಮಾಡಲು, ದೇವರ ದಯೆಯಿಂದ ಅತನು ಈಗ ಜೀವದಿಂದ ಉಳಿದಿರುತ್ತಾನೆ. ಈ ಸ್ಥಿತಿಯಲ್ಲಿ ನಾವು ಇನ್ನು ಮಗಧ ರಾಜ್ಯದಲ್ಲಿರುವದು ದುಸ್ತರವಾದುದರಿಂದ, ಗುಪ್ತವಾಗಿ ಪರ್ವತರಾಜ್ಯಕ್ಕೆ ಬಂದು, ಪರ್ವತೇಶನಾದ ಮಲಯಕೇತುವಿನ ಆಶ್ರಯದಲ್ಲಿರಹತ್ತಿದ್ದೇವೆ ನನ್ನ ಪತಿಯು ಪುನರ್ಜನ್ಮ ತಾಳಿದಂದಿನಿಂದ ನಿನಗೆ ಭೇಟಿಯಾಗಬೇಕೆಂದಿರುತ್ತಾನೆ; ನಿನ್ನ ಬಗ್ಗೆ ಒಂದೇಸವನೇ ಹಂಬಲಿಸುತ್ತಿದ್ದಾನೆ: ಆದರೆ ಅವನಂಥ ಪ್ರಮುಖ ವ್ಯಕ್ತಿಯು ಈ ಮಗಧ ರಾಜ್ಯದಲ್ಲಿ ವ್ಯಕ್ತವಾಗಿಯಾಗಲೀ-ಗುಪ್ತವಾಗಿಯಾಗಲಿ ಸಂಚರಿಸುವದು ಕಠಿಣವೇ ಆದುದರಿಂದ, ನಿನ್ನ ಭೇಟಿಗಾಗಿ ಹೊರಡಲುಸುವಾದ ಅತನನ್ನು ನಾನೇ ತಡೆದೆನು; ಹಾಗು ನಾನೇ ಹೋಗಿ, ತದಿತೆಯನ್ನು ನಿನ್ನಲ್ಲಿಗೆ ಕರೆತೊಂಡು ಬರುವೆನೆಂದು ಹೇಳಿದೆನು ಆದಾದರಿಂದ ಪ್ರಿಯ ಭಗಿನೀ, ನೀನು ನನಗೋಸ್ಕರ ಮಲಯಪುರಿಯವರೆಗೆ ಬರುವ ತೊಂದರೆಯನ್ನಷ್ಟು ತಕ್ಕೊಳ್ಳಬೇಕೆಂದು ಅಂಗಲಾಚಿ ಬೇಡಿಕೊಳ್ಳುತ್ತೇನೆ. ಎಂದು ಲಲಿತೆಯು ಎಷ್ಟು ಪ್ರಾರ್ಥಿಸಿದರೂ, ಕದಿತೆಯು ಆಕೆಯ ಮಾತಿಗೆ ಒಪ್ಪಲಿಲ್ಲ. "ನನ್ನ ಪ್ರಾಣದೊಲ್ಲಭನ ಭೇಟಿಯು ಮೊದಲನೇ ಯೋಗವು ಈ ವಿಶಲಿಂಗೇಶ್ವರನ ಸನ್ನಿಧಿಯಲ್ಲಿಯೇ ಆಗಬೇಕೆಂದು ನಾನು ನಿಶ್ಚಯಿಸಿಕೊಂಡಿರುವದರಿಂದ, ಅದಕ್ಕೆ ವ್ಯತ್ಯಯವಾಗುವ ಯಾವ ಆಚರಣೆಯನ್ನೂ ನಾನು ಎಂದಿಗೂ ಆಚರಿಸಲಾರೆನು. ನಾಳೆ ಮಧ್ಯರಾತ್ರಿಯ ಹೊತ್ತಿನಲ್ಲಿ ಶಕಟಾರನು ಬರಲಿ. ಈ ದೇವಾಲಯದ ಈ ಉತ್ತರ ದಿಕ್ಕಿನ ಗುಪ್ತದ್ವಾರದ ಬಳಿಗೆ ಬಂದು ಮೆಲ್ಲನೆ ಶಬ್ದ ಮಾಡಲಿ. ನಾನು ಅದುವರೆಗೂ ಎಚ್ಚರವೇ ಇದ್ದು, ಅದನ್ನು ತೆರೆದು, ಅವನನ್ನು ಒಳಗೆ ಕರೆತೊಂಡು ಭೇಟಿಯಾಗುವೆನು" ಎಂದು ಕದಿತೆಯು ಹೇಳಲು ನಿರುಪಾಯಳಾಗಿ ಲಲಿತೆಯು ಚಂಡಭೈರವನೊಡನೆ ಮಲಯ ಪುರಿಗೆ ಹೋಗಿ, ಆ ಸಂಗತಿಯನ್ನು ತನ್ನ ಪತಿಗೆ ತಿಳಿಸಿದಳು.

ಬಳಿಕ ಶಕಟಾರನು ಜಾಣತನವನ್ನು ಬರವಸಾಡಿಕೊಂಡು:— ಮಹಾ

ಕೆಯುರೀ, ನನ್ನಂತೆ ತಾವೂ ನಂದಭೂಪತಿಯ ಉಚ್ಚಾಟನಕ್ಕೆ ತೊಡಗಿರು ವದು ವಿಹಿತವೇ ಆಗಿದೆ. ಆದರೆ ಈ ಪ್ರಸಂಗದಲ್ಲಿ ನಾನು ತಮಗೊಂದು ಮಾತನ್ನು ತಿಳಿಸಬೇಕೆಂದಿದ್ದೇನೆ. ಅದೇನೆಂದರೆ, ಧನನಂದನು ಸ್ತ್ರೀ-ಲೋಭಿಯೆಂಬುದು ಸರ್ವ ಶ್ರುತವಿದೆ! ಅವನು ಎಂಥ ಕಾರ್ಯದಕ್ಷನಾಗಿ ದ್ದರೂ ಆದೊಂದು ವಿಷಯದಲ್ಲಿ ಅವನನ್ನು ಕೊರಗಿಸಿ ಬಿಟ್ಟರೆ, ಅವನಿಂದ ಉಳಿದ ಎಲ್ಲ ಕಾರ್ಯಗಳ ಬಗ್ಗೆ ಸಹಜವಾಗಿಯೇ ದುರ್ಲಕ್ಷ್ಯವಾಗುವದು. ಹೀಗೆ ಅತನನ್ನು ವಿಷಯಲೋಲುಪನನ್ನಾಗಿ ಮಾಡುವದರಿಂದ, ಮಗಧ ದೇಶವಿನಾಶಕ್ಕೆ ನಮಗೆ ಹೆಚ್ಚು ಆಸ್ಪದವಾಗುವದಿಲ್ಲವೇ? ಮಹನೀಯರೇ, ಆದುದರಿಂದ ಧನನಂದನನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವಂಥ ಒಂದು ಅದ್ವಿತೀಯ ಸ್ತ್ರೀರತ್ನವನ್ನು ನಾನು ಸಂಪಾದಿಸಿರುತ್ತೇನೆ. ತದ್ವಾರಾ ಆ ಕೆಲಸ ಮಾಡಿಸಬೇಕಾಗಿದೆ: ಆ ಸ್ತ್ರೀಯು ವಾರಾಂಗನೆಯಲ್ಲ; ನನ್ನ ಮತ್ತೊಬ್ಬ ಹೆಂಡತಿಯೇ ಆಗಿರುತ್ತಾಳೆ. ವಿಶೇಷ ಕಾರಣಗಳ ಮೂಲಕ, ನಾನು ಅವಳನ್ನು ಈ ಜನ್ಮದಲ್ಲಿ ಲಗ್ನವಾಗುವಂತಿರುವದಿಲ್ಲ. ಆಕೆಯಾ ದರೂ ಆ ಹಂಬಲವನ್ನು ಇನ್ನು ಹಿಡಿಯಲಾರಳು. ಅವಳು ಕೇವಲ ಬ್ರಹ್ಮಚರ್ಯವ್ರತದಿಂದಲೇ ಇರುವಳು. ಅಂಥವಳನ್ನು ವಿಷಯಲೋಲು ಪತೆಯಿಂದಲ್ಲದಿದ್ದರೂ, ನಮ್ಮ ಕಾರ್ಯಸಾಧನೆಗಾಗಿ ನಾವು ಧನನಂದನ ಪ್ರಲೋಭನಕ್ಕೆ ಗುರಿ ಮಾಡಿ, ನಮ್ಮ ಕಾರ್ಯ ಸಾಧಿಸಿಕೊಳ್ಳುವ ಎತ್ತು ಗಡೆ ಮಾಡಬೇಕು, ಎಂದು ತಿಳಿಸಿದನು.

ಈ ಪ್ರಕಾರ ಶಕಟಾರನು ಚಾಣಾಕ್ಯನಿಗೆ ತಿಳಿಸಲು, ಅದಿತಿಯಂಥ ಸ್ತ್ರೀರತ್ನವು ಸಹಾಯಕಳಾಗುವದು ವಿಹಿತವೇ, ಎಂದು ಆವನೂ ನಿರ್ಧರಿಸಿ ದನು. ಆಗ ಚಾಣಕ್ಯನಲ್ಲಿ ಮತ್ತೊಂದು ಹೊಸ ವಿಚಾರವು ಪ್ರಾದುರ್ಭ ವಿಸಿತು. ಅದೇನೆಂದರೆ, ಧನನಂದನು ಮುರಲೆಯ ಪಾಣಿಗ್ರಹಣ ಮಾಡುವ ಕಾಲಕ್ಕೆ ಆಕೆಯಿಂದ ತನಗುಂಟಾಗುವ ಅನಿಷ್ಟ ನಿವಾರಣಾರ್ಥವಾಗಿ ಒಂದು ಮಂತ್ರಪೂತ ಕಂಕಣವನ್ನು ಆಕೆಯ ಕೈಯೊಳಗೆ ಇಟ್ಟಿರುವನು. ಆ ರತ್ನಖಚಿತ ಕಂಕಣವನ್ನು ನಾನೇ ನಮ್ಮ ಸಾರ್ವಭೌಮನಿಗೆ ಅಭ್ಯು ದಯವಾಗಬೇಕೆಂದು ರಾಜಗುರುವಿನ ವಿನಂತಿಯ ಮೇರೆಗೆ ಮಂತ್ರಪೂತ ವನ್ನಾಗ ಮಾಡಿಕೊಟ್ಟಿರುತ್ತೇನೆ. ಆ ಕಂಕಣವು ಮುರಲೆಯ ಕೈಯೊಳಗೆ ಇರುವ ವರೆಗೆ ಮಗಧಾಧಿಪನಿಗೆ ಯಾವ ಬಗೆಯ ಕೇಡೂ ಆಗಲಾರದು. ಆ ಕಂಕಣವು ಅವಳಿಂದ ಅಪಹೃತವಾದ ಒಂದು ತಿಂಗಳ ಒಳಗೇ ಮುರಲೀರಾಣಿಗೆ ಖಂಡಿತವಾಗಿಯೂ ವೈಧವ್ಯ ಪ್ರಾಪ್ತವಾಗುವ

ಯೋಗವಿರುವದರಿಂದ, ಅದನ್ನು ಹ್ಯಾಗಾದರೂ ಮಾಡಿ ಕಳವು ಮಾಡಿಸಬೇಕು. ಮುರಲೆಯು ವಾಸಿಸುವ ಅಂತಃಪುರಕ್ಕೆ ನಂದಭೂಪತಿಯ ವಿನಃ ಯಾವ ಪುರುಷನೂ ಎಂದೂ ಹೋಗುವಂತಿರುವದಿಲ್ಲ. ಅದರಿಂದ ಆ ಕಂಕಣವು ಯಾವ ಪುರುಷನಿಂದಲೂ ಅಪಹೃತವಾಗುವ ಸಂಭವವಿಲ್ಲ. ಅದು ಅಪಹೃತವಾಗಬೇಕಾದರೆ, ಆ ಕೆಲಸಕ್ಕೆ ಯಾವಳೊಬ್ಬ ನಿಷ್ಣಾತ ಸ್ತ್ರೀಯಳನ್ನೇ ಯೋಜಿಸಬೇಕಾಗುವದು. ಈ ತಡಿತೆಯು ನಮಗೆ ಅನುಕೂಲವಾದರೆ, ನಮ್ಮ ಎಲ್ಲ ಕೆಲಸಗಳೂ ನೀರೊಳಗಿನ ಕಲ್ಲು ಎತ್ತಿದಂತೆ ಸುಲಭವಾಗುವವು. ಆ ಕಂಕಣವೊಂದು ಅಪಹೃತವಾದರೆ, ನನ್ನ ಪಣವು ಬೇಗನೆ ಕೈಗೂಡುವದು; ಶಕಟಾರನ ಇಷ್ಟಾರ್ಥವು ಸಾಧಿಸುವದು; ಪರ್ವತೇಶನ ಅರಿಷ್ಟವೂ ನಿವಾರಣವಾಗುವದು; ಹಾಗು ಚಂದ್ರಗುಪ್ತನ ರಾಜ್ಯಾರೋಹಣಕ್ಕೂ ಅನುಕೂಲವಾಗುವದು!

ಬಳಿಕ ಶಕಟಾರನೂ ಚಾಣಕ್ಯನೂ ಮರುದಿನ ರಾತ್ರಿ ಕುಸುಮಪುರಕ್ಕೆ ಹೋಗಿ ತಡಿತೆಗೆ ಭೇಟಿಯಾದರು ಮೊದಲು ಅವಳು ಇವರ ಪ್ರಸ್ತಾಪಕ್ಕೆ ಮನಸ್ಸು ಮಾಡಲಿಲ್ಲ, ಆದರೆ ಚಾಣಕ್ಯನಂಥ ನಿರ್ಭಿಡೆಯ ಅಧಿಕಾರ ಸಂಪನ್ನನ ಉಪದೇಶಕ್ಕೂ, ಶಕಟಾರ-ತನ್ನ ಪ್ರಾಣದೊಲ್ಲಭ-ನ ಪ್ರಿಯ ವಚನಕ್ಕೂ ಅವಳು ಒಪ್ಪಿ, ಕಡೆಗೆ ಅವರು ಹೇಳಿದ ಹಾಗೆ ಕೆಲಸ ಮಾಡಲು ಸಿದ್ಧಳಾದಳು.

---

## ಬಾಯ್ಬಡಕತನವೇ ಮುಖ್ಯ ಸಾಧನ.

ಏನಾದರೂ ಪತ್ತೆಯಾಯಿತೇ?

ಇಲ್ಲ, ಮಹಾಪ್ರಭೋ!

ಆತನು ನಿನಗೆ ಎಲ್ಲಿಯೂ ಭೆಟ್ಟಿಯಾಗಲಿಲ್ಲವೇ?

ಬಹಳ ಪ್ರಯತ್ನ ಮಾಡಿದೆನು; ಆದರೂ ಸಿಗಲಿಲ್ಲ.

ಆತನ ಮನೆಗೆ ಹೋಗಿದ್ದೆಯಾ?

ಅದಕ್ಕೆ ಸ್ವಲ್ಪವೂ ತಪ್ಪಿಲ್ಲ.

ಆತನು ಅಲ್ಲಿಯೂ ದೊರೆಯಲಿಲ್ಲವೇ

ಇಲ್ಲ; ಆತನ ನಿವಾಸಸ್ಥಾನವು -ಹುಲ್ಲಿನ ಆ ಚಪ್ಪರವು- ಸುಟ್ಟು ಬೂದಿಯಾಗಿದೆ!

ಏನನ್ನುತ್ತೀ? ಬ್ರಾಹ್ಮಣನ ಪರ್ಣ ಕುಟೀರಕ್ಕೆ ಬೆಂಕೀ ಹಚ್ಚುವಂಥ ಅದಾವ ನೀಚನು ಈ ಮಗಧ ರಾಜ್ಯದಲ್ಲಿರಬಹುದು?

ಆತನು ತನ್ನ ಪರ್ಣಕುಟೀರಕ್ಕೆ ತಾನೇ ಬೆಂಕೀ ಹಚ್ಚಿದನೆಂದು ಜನರಲ್ಲಿ ಪ್ರವಾದವಿದೆ.

ಈ ಸಂಗತಿಯು ಮತ್ತೂ ಆಶ್ಚರ್ಯಕರವಾದುದು! ಆತನು ಯೋಗಾನಂದ ಸ್ವಾಮಿಗಳಲ್ಲಿರಬಹುದು; ಅಲ್ಲಿ ಶೋಧಿಸಿದಿಯೋನು?

ಅಲ್ಲಿಯೂ ಹೋಗಿದ್ದೆನು; ಇರಲಿಲ್ಲ.

ಆತನೆಲ್ಲಿರುವನೆಂಬದು ಅಲ್ಲಿ ತಿಳಿಯಲಿಲ್ಲವೇ?

ಇಲ್ಲ; ಅಲ್ಲಿ ಈಗ ಯಾರೂ ಇರುವದಿಲ್ಲ. ಆಶ್ರಮವೆಲ್ಲ ಹಾಳು ಸುರಿಯುತ್ತಿದೆ. ಸ್ವಾಮಿಯವರು ಶಿಷ್ಯರಿಂದೊಡಗೂಡಿ ಹರಿದ್ವಾರದ ಕಡೆಗೆ ಹೋಗಿರುವರಂತೆ. ಅವರ ಆಶ್ರಮದಲ್ಲಿ ಒಬ್ಬ ಶಿಷ್ಯನಿದ್ದು, ಆವನು ಅತಿಥಿ ಸತ್ಕಾರ ಮಾಡುತ್ತಿರುತ್ತಾನೆ. ಚಾಣಕ್ಯನು ಈಚೆಗೆ ಬಂದೇ ಇಲ್ಲವೆಂದು ಆತನು ಹೇಳಿದನು.

ಪ್ರಣಿಧೀ, ನೀನು ಇದೊಳ್ಳೇ ನಿರಾಶಾಪೂರ್ಣ ವರ್ತಮಾನವನ್ನು ತಂದೆ ಬಿಡು! ಈಗ ನೀನು ವಿಶ್ರಾಂತಿ ಪಡೆ ನಾನು ಮಹಾರಾಜರಲ್ಲಿ 'ಏಳ್ ದಿನಗಳಲ್ಲಿ ಎಲ್ಲಿದ್ದರೂ ಚಾಣಕ್ಯನನ್ನು ನಿಮ್ಮೆದುರಿಗೆ ಹಿಡಿತರಿಸಿ ನಿಲ್ಲಿಸುವೆನೆಂದು' ಪಣ ತೊಟ್ಟಿರುವೆನು. ಇದಕ್ಕೆ ತಪ್ಪಿದರೆ ಮಹಾರಾಜನು ನನ್ನನ್ನು ಗಲ್ಲಿಗೇರಿಸುವನು. ಆದುದರಿಂದ ನೀನು ನಾಳೆ ಬೇಗನೆ ಎದ್ದು, ಆತನನ್ನು ಶೋಧ ಮಾಡುವ ಪ್ರಯತ್ನಕ್ಕೆ ಮತ್ತೆ ತೊಡಗು

ಯಥಾಶಕ್ತಿ ಪ್ರಯತ್ನ ಮಾಡುವೆನು, ಎಂದಂದು, ಮುಜುರೆ ಮಾಡಿ ಪ್ರಣಿಧಿಯು ಅಲ್ಲಿಂದ ಹೊರಟು ಹೋದನು. ಬಳಿಕ ಆ ಮಂತ್ರಣಾಗಾರದಲ್ಲಿ, ಸಚಿವಶ್ರೇಷ್ಠನಾದ ರಾಕ್ಷಸನೊಬ್ಬನೇ ಕುಳಿತುಕೊಂಡನು

ಮಗಧಾಧಿಪನ ತಂದೆಯ ಶ್ರಾದ್ಧದ ದಿವಸ ಚಾಣಕ್ಯನನ್ನು ನಿಮಂತ್ರಿತ ವಿಪ್ರನಲ್ಲೆಂದು ಅಪಮಾನಪಡಿಸಲು, ನಿನ್ನನ್ನೂ ನಿನ್ನ ರಾಜ್ಯವನ್ನೂ ನಾಶ ಮಾಡದ ವಿನಃ ನಾನು ನನ್ನ ಜುಟ್ಟವನ್ನು ಕೂಡ ಕಟ್ಟಲಿಕ್ಕಿಲ್ಲೆಂದು ಆತನು ಪಣ ತೊಟ್ಟು ಹೋದದ್ದನ್ನು ನಮ್ಮ ವಾಚಕರು ಮರೆತಿರಲಿಕ್ಕಿಲ್ಲ. ಚಾಣಕ್ಯನು ಹಾಗೆ ಶಪಿಸಿ ಹೋದ ಎಷ್ಟೋ ಹೊತ್ತಿನ ಮೇಲೆ ಮದಾಂಧ ಧನನಂದನ ಕಣ್ಣಿಗೆ ಅಂಜನ ಹಚ್ಚಿದಂತಾಯಿತು! ಆಗ ಆತನು ಚಾಣಕ್ಯನು ತನ್ನೆದುರಿಗೆ ಚಲ್ಲಿ ಹೋಗಿದ್ದ ಆ ರಾಜಶಾಸನವನ್ನು ಎತ್ತಿಕೊಂಡು, ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದನು. ಅದು ಪ್ರಸ್ತುತದ ಶ್ರಾದ್ಧತಿಥಿಗಾಗಿ

ಬರೆದ ಬೇರೆ ರಾಜಶಾಸನಗಳಂತೆಯೇ-ಅದೇ ಪ್ರಕಾರದ ಒಕ್ಕಣೆಯಿಂದ, ಅದೇ ಬಗೆಯ ಕಾಗದಗಳಲ್ಲಿ, ಅಂಥ ಬಣ್ಣದ ಮಸಿಯಿಂದಲೇ, ಇಷ್ಟೇ ಅಲ್ಲ; ಸಂಪೂರ್ಣವಾಗಿ ಅವೇ ವಾಕ್ಯಗಳಿಂದ, ಬರೆಯಲ್ಪಟ್ಟಿತ್ತು. ಹಾಗು ಶಾಸನದ ಶಿರೋಭಾಗದಲ್ಲಿ ಮಹಾರಾಜ ಧನನಂದನ ಸ್ವಾಕ್ಷರದ ಮುದ್ರೆ ಯೊತ್ತಲ್ಪಟ್ಟಿತ್ತು! ಅದನ್ನೆಲ್ಲ ಚನ್ನಾಗಿ ನಿರೀಕ್ಷಿಸಿದ ಬಳಿಕ ಧನನಂದನು ಅದನ್ನು ಅಮಾತ್ಯ-ರಾಕ್ಷಸನ ಕೈಗಿತ್ತು:—ಸಚಿವಶ್ರೇಷ್ಠಾ, ಚಾಣಕ್ಯ ಮುನಿಗೆ ಈ ಶಾಸನವನ್ನು ಯಾರು ಕಳಿಸಿದರು? ಇತ್ತೀಚೆಗೆ ನನ್ನ ರಾಜ್ಯ ದಲ್ಲಿ ಅರಾಜಕತೆಯ ಎಷ್ಟೋ ಪ್ರಕಾರಗಳು ನಡೆದಿವೆಯೆಂದು ಈ ರಾಜ ಶಾಸನದ ನಿರೀಕ್ಷಣದಿಂದಲೇ ಗೊತ್ತಾಗುತ್ತದೆ. ಮೂರ್ಖಾ, ಶ್ರಾದ್ಧ ನಿಮಿತ್ಯದ ಎಲ್ಲ ಶಾಸನಗಳನ್ನು ನೀನೊಬ್ಬನೇ ಬರೆಯಿಸಿ, ಅವರವರಿಗೆ ರವಾ ನಿಸಿರುತ್ತೀ. ನನ್ನ ಹಸ್ತಾಕ್ಷರದ ಮುದ್ರೆಯು ನಿನ್ನಬಳಿಯಲ್ಲಿಯೇ ಇರು ತ್ತದೆ. ಹೀಗಿದ್ದು, ಚಾಣಕ್ಯಮುನಿಗೆ ರವಾನಿಸಲ್ಪಟ್ಟಿರುವ ಈ ಶಾಸನವು ಎಲ್ಲಿಂದ ಬಂತು? ಎಂದೆಂದು, ಅತ್ಯಂತ ಕ್ರೋಧದಿಂದ ರಾಕ್ಷಸನ ಕಡೆಗೆ ನೋಡುತ್ತ ಮತ್ತೆ:- ರಾಕ್ಷಸಾ, ಅದು ಹೇಗೆಯೇ ಇರಲಿ ನೀವು ಆ ಚಾಣಕ್ಯಮುನಿಯನ್ನು ನನ್ನೆಡೆಗೆ ಕರೆದುಕೊಂಡು ಬಾ, ಹಾಗು ಅತನಿಗೆ ಈ ಶಾಸನವನ್ನು ಯಾರು ಕಳಿಸಿದರೆಂಬದನ್ನು ಪತ್ತೆ ಹಚ್ಚು. ನೀನು ಇನ್ನು ಏಳು ದಿವಸಗಳಲ್ಲಿ ಈ ಎರಡೂ ಸಂಗತಿಗಳನ್ನು ಜರಗಿಸಲು ಶಕ್ತನಾಗದಿದ್ದರೆ, ನಿನ್ನನ್ನು ಶೂಲಕ್ಕೇರಿಸಲಿಕ್ಕೆ ಈ ಮಗಧಾಧಿಪ-ಧನ ನಂದನು ತಪ್ಪಲಿಕ್ಕಿಲ್ಲ! ಬಹು ಎಚ್ಚರಿಕೆಯಿಂದ ಪತ್ತೆ ಹಚ್ಚು, ಎಂದು ಹೇಳಿ, ಅವನಿಗೆ ಆ ರಾಜಶಾಸನವನ್ನು ಕೊಟ್ಟು ಕಳಿಸಿದನು.

ಇಂದು ರಾಕ್ಷಸನು ಧನನಂದನ ಮುಂದೆ ಚಾಣಕ್ಯನು ಚಲ್ಲಿ ಹೋ- ಗಿದ್ದ ಆ ರಾಜಶಾಸನವನ್ನು ಕೈಯಲ್ಲಿ ಹಿಡಕೊಂಡು ವಿಚಾರಿಸುತ್ತ ಕುಳಿತಿ ದ್ದನು. ಅಷ್ಟರಲ್ಲಿ ಹೇರನು ಬರಲು, ಅವನೊಡನೆ ಮಾತಾಡಿ, ಅವನಿಗೆ ಹೇಳತಕ್ಕದ್ದನ್ನು ಹೇಳಿ ಕಳಿಸಿ, ಪುನಃ ತನ್ನ ಆಲೋಚನೆಯಲ್ಲಿಯೇ ತಲ್ಲೀ ನಾದನು.

ಆಗ ಅವನು ತನ್ನ ಮನಸ್ಸಿನಲ್ಲಿಯೇ ಈ ಬಗೆಯಾಗಿ ವಿಚಾರ ಮಾಡ ಹತ್ತಿದನು:—ಈ ಶಾಸನದ ಅಕ್ಷರಗಳು ಇತರ ಶಾಸನದ ಅಕ್ಷರಗಳಂತೆಯೇ ಇವೆ. ಇತರ ನಿಮಂತ್ರಣ ಪತ್ರಗಳು ಸಂಸ್ಕೃತಭಾಷೆಯಲ್ಲಿ ಬರೆಯಲ್ಪಟ್ಟಿದ್ದು, ಇದೂ ಹಾಗೆಯೇ ಬರೆದಿದೆ; ಹಾಗು ಎಲ್ಲ ಪತ್ರಗಳಂತೆ ಇದರ ಮೇಲೂ ರಾಜನ ಹಸ್ತಾಕ್ಷರದ ಮುದ್ರೆಯು ಒತ್ತಲ್ಪಟ್ಟಿದೆ. ರಾಜನ ಹಸ್ತಾಕ್ಷರದ

ಮುದ್ರೆಯು ಸದಾ ಸರ್ವ ಕಾಲದಲ್ಲಿ ತನ್ನ ಬೆರಳಿನಲ್ಲಿಯೇ ಇರುತ್ತಿದ್ದು, ಇದು ತನಗೆ ತಿಳಿಯದ ಹಾಗೆ ಈ ಚಾಣಕ್ಯನ ಹೆಸರಿನ ನಿಮಂತ್ರಣ ಪತ್ರದ ಮೇಲೆ ಹೇಗೆ ಮುದ್ರಿಸಲ್ಪಟ್ಟಿತು? ಆಗ ಅವನಿಗೆ ಮತ್ತೊಂದು ವಿಚಾರವು ಹೊಳೆಯಿತು. ಅದೇನೆಂದರೆ, ಪೂರ್ವದಲ್ಲಿ ಶಕಟಾರನು ಮುಖ್ಯ ಮಂತ್ರಿಯಾಗಿರುವಾಗ ಆತನು ರಾಜನ ಮುದ್ರೆಯಂತಹ ಬೇರೊಂದು ಮುದ್ರೆಯನ್ನು ಮಾಡಿಸಿ ತನ್ನ ಹತ್ತಿರ ಇಟ್ಟುಕೊಂಡಿದ್ದನೆಂಬುದು; ಆದರೆ ಶಕಟಾರನು ಪದಚ್ಯುತನಾದ ಮೇಲೆ ಆ ಮುದ್ರೆಯ ಸಲುವಾಗಿ ನಾನು ಆತನನ್ನು ಎಷ್ಟು ಗೋಳಾಡಿಸಿದರೂ ಅದು ತನ್ನಲ್ಲಿಲ್ಲ, ತನ್ನ ಮನೆಯಲ್ಲಿಯೇ ಇತ್ತು; ಆದರೆ ಮಹಾರಾಜರ ಆದೇಶದಂತೆ ಯಾವಾಗ ತನ್ನ ಮನೆಯು ಜಪ್ತಿಯಾಯಿತೋ, ಆಗ ಅದು ಎಲ್ಲಿ ಬಿದ್ದು ಹೋಯಿತೋ, ತಿಳಿಯದೆಂಬುದೊಂದೇ ಉತ್ತರವನ್ನು ಆವನು ಹೇಳುತ್ತ ಬಂದಿದ್ದನು. ಈಗ ಈ ಪತ್ರದ ಮೇಲೆ ಒತ್ತಲ್ಪಟ್ಟ ಮುದ್ರೆಯು ನನ್ನ ಬಳಿಯಲ್ಲಿರುವ ಅಥವಾ ಶಕಟಾರನ ಬಳಿಯಲ್ಲಿದ್ದ ಮುದ್ರೆಗಿಂತ ಭಿನ್ನವಾಗಿಲ್ಲ. ಅಂದ ಮೇಲೆ ಶಕಟಾರನಲ್ಲಿದ್ದ ಆ ಮುದ್ರೆಯು ಯಾವನೊಬ್ಬ ಬೇರೆ ರಾಜತಂತ್ರಗಾರನ ಕೈಯಲ್ಲಿ ಬಿದ್ದಿಲ್ಲವಷ್ಟೇ? ಅಥವಾ ಶಕಟಾರನೇ ಸತ್ತನೆಂದು ಸುಳ್ಳು ಸುದ್ದಿ ಹಬ್ಬಿಸಿ, ಕಾರಾಗೃಹದಿಂದ ಪಲಾಯನ ಮಾಡಿರುವನೋ? ರಾಕ್ಷಸ ಮಂತ್ರಿಗೆ ಮೊದಲನೇ ಆಕ್ಷೇಪಕ್ಕಿಂತ ಈ ಎರಡನೇ ಆಕ್ಷೇಪವೇ ಹೆಚ್ಚು ಸಂಭವವಾಗಿ ತೋರಿತು; ಆದರೂ ಶಕಟಾರನ ಹೆಂಡತಿ-ಮಕ್ಕಳು ಅನ್ನನೀರಿಲ್ಲದೆ ಕೊರಗಿ-ಕೊರಗಿ ಸತ್ತದ್ದನ್ನೂ, ಶಕಟಾರನೂ ಸಹ ಅದೇ ಪರಿಯಿಂದ ಕೊರಗಿ ನಿರ್ಜೀವವಾದದ್ದನ್ನೂ ಆತನು ಕಣ್ಣಾರೆ ನೋಡಿದ್ದನು; ಇಷ್ಟೇ ಅಲ್ಲ, ಯಾವ ದಿವಸ ಶಕಟಾರನು ತೀರಿಕೊಂಡನೋ, ಆ ದಿನ ಪೂರ್ವ ರಾತ್ರಿಯಲ್ಲಿ ಪ್ರಮುಖ ಕಾರಾರಕ್ಷಕನು ಹೇಳಿ ಕಳಿಸಿದ ಮೇರೆಗೆ ರಾಕ್ಷಸನು ಸ್ವತಃ ಕಾರಾಗೃಹಕ್ಕೆ ಹೋಗಿ ಶಕಟಾರನ ಶರೀರವನ್ನು ಪರೀಕ್ಷಿಸಿ, ಆತನು ಇನ್ನು ಎರಡು ಗಳಿಗೆಯವನೇ, ಎಂದು ನಿಶ್ಚಯಿಸಿದ್ದನು. ಹಾಗು ಆತನ ಮರಣವಾದ ಮೇಲೆ ಆತನ ದೇಹವನ್ನು ಆಪ್ತರಾರಾದರೂ ಬೇಡಲು ಬಂದರೆ ಅವರಿಗೆ ಕೊಡಿರೆಂದೂ, ಇಲ್ಲದಿದ್ದರೆ ಸರಕಾರೀ ಖರ್ಚಿನಿಂದ ಸುಟ್ಟು ಬಿಡಿರೆಂದೂ ಹೇಳಿದ್ದನು. ಮರು ದಿವಸ ಮುಂಜಾನೆ ಶಕಟಾರನು ನಿಧನ ಹೊಂದಿದನೆಂದೂ, ಆತನ ದೇಹವನ್ನು ಸ್ಮಶಾನದೊಳಗಿನ ಇಂಥ ವೃಕ್ಷದ ಕೆಳಗೆ ದಹನ ಮಾಡಿಸಿದೆನೆಂದೂ ಚಂಡಾಲನು ಬಂದು ಹೇಳಲು, ರಾಕ್ಷಸನು ತಾನು ಸ್ವತಃ ಹೋಗಿ ಆತನ

ದೇಹವು ಭಸ್ಮೀಭೂತವಾದ ಸ್ಥಳವನ್ನು ಕಣ್ಣುಟ್ಟ್ವ ನೋಡಿ ಬಂದಿದ್ದನು!

ಹಾಗಾದರೆ ಈ ಮುದ್ರೆಯು ಛಾಪು ಎಲ್ಲಿಂದ ಬಂತು? ಶಕಟಾರನ್ ಹೊರತು ಇಂಥ ಸಾಹಸೀ ಮುತ್ಸದ್ದಿಯು ಈ ಮಗಧ ರಾಜ್ಯದಲ್ಲಿ ಬೇರೆ ಯಾವನಿರಬೇಕು? ಎಂದು ರಾಕ್ಷಸನು ಮತ್ತೆ ತಲೆ ಕೆಳಗೆ ಹಾಕಿ ಎಷ್ಟೋ ವೇಳೆ ಆಲೋಚಿಸಿದನು. ಆದರೂ ಅವನಿಗೆ ಸಮಾಧಾನಕರವಾದ ವಿಚಾರವು ಬಗೆ ಹರಿಯಲಿಲ್ಲ ಕಡೆಗೆ ಅವನಿಗೊಂದು ಯುಕ್ತಿಯು ಹೊಳೆಯಿತು. ಕೂಡಲೆ ಅವನು ಗೊಗ್ಗರ ದನಿಯಿಂದ:—ಶಿಪಾಯ್-ಶಿಪಾಯ್, ಎಂದು ಕೂಗಿದನು. ಉತ್ತರ ಕ್ಷಣದಲ್ಲಿಯೇ ಬಾಗಿಲ ಬಳಿಯಲ್ಲಿ ಕುಳಿತಿದ್ದ ಜವಾನನು ಓಡುತ್ತೋಡುತ್ತ ಬಂದು ಅವನೆದುರಿಗೆ ಸಲಾಮು ಮಾಡಿ:—ಅಪ್ಪಣೆಯೇನೆಂದು ಕೇಳಿದನು.

ಈಗಲೆ ಹೋಗಿ ಪ್ರಧಾನ-ಕಾರಾರಕ್ಷಕನಾದ ಚಂದ್ರಪಾಲನನ್ನು ಕರೆಕೊಂಡು ಬಾ, ಎಂದು ಸಚಿವನು ಅಪ್ಪಣೆ ಮಾಡಿದನು.

ಕೂಡಲೆ ಆ ಶಿಪಾಯಿಯು ಕಾರಾಗೃಹದ ಕಡೆಗೆ ಧಾವಿಸುತ್ತ ಸಾಗಿದನು; ಹಾಗು ಸ್ವಲ್ಪ ಹೊತ್ತಿನಲ್ಲಿಯೇ ಚಂದ್ರಪಾಲನೊಡನೆ ಬಂದು ರಾಕ್ಷಸನಿಗೆ ಆ ವರ್ತಮಾನವನ್ನು ಹೇಳಿದನು ಒಳಗೆ ಕಳಿಸೆಂದು ಅಪ್ಪಣೆಯಾಗಲು, ಚಂದ್ರಪಾಲನು ಒಳಗೆ ಹೋಗಿ, ಪದ್ಧತಿಯ ಪ್ರಕಾರ ಸಚಿವಶ್ರೇಷ್ಠನಿಗೆ ಪ್ರಣಿಪಾತವಂ ಗೆಯ್ದು:—ಅಮಾತ್ಯವರ್ಯಾ ನನ್ನನ್ನು ಕರೆಸಿದುದರ ಕಾರಣವೇನು? ಎಂದು ಪ್ರಶ್ನೆ ಮಾಡಿದನು.

ರಾಕ್ಷಸನು ಏನೂ ಉತ್ತರ ಕೊಡದೆ, ಚಂದ್ರಪಾಲನ ಮುಖದ ಕಡೆಗೆ ಭೇದಕ ದೃಷ್ಟಿಯಿಂದ ಎಷ್ಟೋ ಹೊತ್ತು ಟಕಮಕವಾಗಿ ನೋಡಿದನು; ಆದರೂ ಆತನ ಮುಖದ ಮೇಲೆ ಕಪಟತನದ ಒಂದು ರೇಷೆಯೂ ಕೂಡ ರಾಕ್ಷಸನಿಗೆ ಕಾಣಿಸಲಿಲ್ಲ. ಚಂದ್ರಪಾಲನು ತೇಜಃಪುಂಜ ಪುರುಷನಾಗಿದ್ದನು; ಆತನ ಮುಖಭಾವದಲ್ಲಿ ಕಾಪಟ್ಯದ ಯಾವ ಲಕ್ಷಣವೂ ಇರಲಿಲ್ಲ.

ಸಚಿವನು ಗಂಭೀರನಾಗಿ ಆಲೋಚಿಸುವದನ್ನು ನೋಡಿ, ಚಂದ್ರಪಾಲನು ಆತನನ್ನು ಕುರಿತು:—ತಾವು ನನ್ನನ್ನು ಇಲ್ಲಿಗೆ ಕರೆಯಿಸಿದ್ದರ ಕಾರಣವೇನು? ಎಂದು ಪುನಃ ಕೇಳಿದನು.

ಅಮಾತ್ಯನು ಮತ್ತೆ ಆತನ ಕಡೆಗೆ ತೀಕ್ಷ್ಣವಾದ ಭೇದಕ ದೃಷ್ಟಿಯಿಂದ ನಿರೀಕ್ಷಿಸುತ್ತ:—ಚಂದು, ನಾನು ನಿನಗೊಂದು ಮಹತ್ವದ ಪ್ರಶ್ನೆಯನ್ನು ಮಾಡುವೆನು ತಲೆಯ ಮೇಲೆ ಸರ್ವಾಂತರ್ಯಾಮಿಯಾದ ಭಗ

ವಂತನಿರುತ್ತಾನೆ. ಚಂದ್ರ-ಸೂರ್ಯರು ಇದುವರೆಗೂ ನಿಯಮಿತವಾಗಿ ಉಪಯಾಸ್ತಗಳನ್ನು ಹೊಂದುತಲಿದ್ದಾರೆ. ವೇದಪಾಠಕರಾದ ಬ್ರಾಹ್ಮಣರು ಈಗಲೂ ಸರ್ವಶಕ್ತಿವಂತರಾದ ಭೂಸುರರಾಗಿರುತ್ತಾರೆ. ಸರ್ವಾಂತರ್ಯಾಮಿಯಾದ ಭಗವಂತನೂ, ನಿಯಮಿತವಾಗಿ ನಡೆಯುವ ಚಂದ್ರ-ಸೂರ್ಯರೂ ಹಾಗು ಸರ್ವ ಶಕ್ತಿವಂತರಾದ ಭೂಸುರರೂ ಇವರೆಲ್ಲರ ಆಣೆಯಾಗಿ ನೀನು ನನ್ನ ಪ್ರಶ್ನೆಗೆ ಉತ್ತರ ಹೇಳಬೇಕಾಗಿರುತ್ತದೆ ಆದ್ದರಿಂದ ಈಗ ನೀನು ಅವರೆಲ್ಲರ ಆಣೆ ಮಾಡಿ ನನ್ನ ಪ್ರಶ್ನೆಗೆ ಉತ್ತರ ಕೊಡುತ್ತೇನೆಂದು ಪ್ರಮಾಣ ಮಾಡು. ನಾನು ಇದೀಗ ಮಹಾ ಪೇಚಿನಲ್ಲಿ ಸಿಕ್ಕಿರುತ್ತೇನೆ. ನಿನ್ನ ಉತ್ತರದಿಂದ ನನ್ನ ಮೇಲಿನ ಆ ದಾರುಣ ಸಂಕಟವು ನಿವಾರಣವಾಗುವ ಸಂಭವವಿದೆ, ಎಂದಂದನು.

ಸಚಿವ ಶ್ರೇಷ್ಠನ ಈ ನ ಭೂತಪೂರ್ವ ಪ್ರಸ್ತಾವನೆಯ ಭಾಷಣವನ್ನು ಕೇಳಿ ಚಂದ್ರಪಾಲನಿಗೆ ಬಹು ಅನುಮಾನವಾಯಿತು. ಯಾಕಂದರೆ, ಯಾವ ರಾಕ್ಷಸನು ಒಳ್ಳೆ ಗರ್ವಿಷ್ಠನೂ, ಒಳ್ಳೇ ಗಂಭೀರ ಭಾವದವನೂ, ಮಿತ ಭಾಷಿಯೂ ಎಂದು ಮಗಧ ರಾಜ್ಯದಲ್ಲೆಲ್ಲ ಪ್ರಸಿದ್ಧಿ ಪಡೆದಿದ್ದನೋ ಅದೇ ಆ ಅಮಾತ್ಯನು ಇಂದು ಇಷ್ಟು ಲಘು ಚಿತ್ತನೂ, ಬಹು ಭಾಷಿಯೂ ಆದುದನ್ನು ಕಂಡು ಅವನಿಗೆ ಆಶ್ಚರ್ಯವೆನಿಸಿತು. ಆಗ ಆತನು:—ಅಮಾತ್ಯವರ್ಯಾ, ನಾನು ಮೊದಲಿನಿಂದಲೂ ತಮ್ಮ ಅನುಚರನೇ. ತಮ್ಮ ಅನುಗ್ರಹದಿಂದಲೇ ಈಗ ನಾನು ಈ ಉಚ್ಚ ವೇತನ ಪಡೆಯುವ ರಾಜ ಕರ್ಮಚಾರಿಯಾಗಿದ್ದೇನೆ. ಇದುವರೆಗೆ ನಾನು ತಮಗೂ ಈ ಮಗಧ ರಾಜ್ಯಕ್ಕೂ ನನ್ನ ಯಾವ ಹೇಯ ಕೃತಿಯಿಂದಲೂ ಕೇಡು ಬಗೆದಿರುವದಿಲ್ಲ; ಹಾಗು ಕೇಡು ಬಗೆಯಲಿಕ್ಕೆ ಪ್ರಯತ್ನಿಸಿಲ್ಲ. ನಾನು ತಮ್ಮ ದಾಸಾನುದಾಸನು. ಹೀಗಿದ್ದು, ನನ್ನನ್ನು ಯಾವುದೊಂದು ಪ್ರಶ್ನೆ ಕೇಳಿಕೊಳ್ಳುವ ಸಲುವಾಗಿ ಈ ಪರಿ ಅನುಮಾನಿಸುವದೇಕೆ? ಕೇಳಿರಿ, ತಮ್ಮ ಪಾದ ಸಾಕ್ಷಿಯಾಗಿ ನಾನು ಸತ್ಯ ಸತ್ಯವಾಗಿ ಹೇಳುವೆನು, ಎಂದು ನುಡಿದನು.

ಚಂದ್ರಪಾಲನ ಈ ಉತ್ತರದಿಂದ ರಾಕ್ಷಸನು ಶಾಂತನಾಗಿ:—ತಮ್ಮಾ, ಚಂದ್ರಪಾಲಾ, ಪದಚ್ಯುತ ಶಕಟಾರ ಮಂತ್ರಿಯು ಸತ್ಯ-ಸತ್ಯವಾಗಿಯೂ ಮೃತನಾದನೇನು? ಆತನ ಮೃತ ದೇಹವನ್ನು ನೀನು ಚನ್ನಾಗಿ ಪರೀಕ್ಷಿಸಿ ನೋಡಿದ್ದೆಯಾ?

ರಾಕ್ಷಸನ ಈ ಪ್ರಶ್ನೆಯನ್ನು ಕೇಳಿ ಚಂದ್ರಪಾಲನು ಅಂತರಂಗದಲ್ಲಿ ಗದಗುಟ್ಟಿ ನಡುಗಿದನು!! ಆದರೆ ಆತನು ಆ ಭಾವವನ್ನು ತನ್ನ ಮುಖದ

ಮೇಲೆ ಸ್ವಲ್ಪವೂ ತೋರ್ಪಡಿಸುವಂತಿರಲಿಲ್ಲ ಯಾಕಂದರೆ ತನ್ನ ಪ್ರಶ್ನೆಯಿಂದ ಈತನ ಮುಖದ ಮೇಲೆ ಏನೇನು ಹೆಚ್ಚು-ಕಡಿಮೆಯಾಗುವದೆಂಬದನ್ನು ರಾಕ್ಷಸನು ತನ್ನ ತೀಕ್ಷ್ಣದೃಷ್ಟಿಯಿಂದ ಪಹರೆ ಮಾಡುತ್ತಿದ್ದನು. ಆದ್ದರಿಂದ ಚಂದ್ರಪಾಲನು ತನ್ನ ಮುಖಭಾವವನ್ನು ಕೊಂಚವೂ ಬದಲಿಸದೆ, ಅಂತರಂಗದಲ್ಲಿ ಆಲೋಚಿಸಿದುದೇನಂದರೆ, ಈ ರಾಕ್ಷಸನಿಗೆ ಶಕಟಾರನ ಯಾವುದೋ ವಿಷಯದ ಬಗ್ಗೆ ಮತ್ತೆ ಸಂದೇಹವುಂಟಾಗಿದೆ. ಆದುದರಿಂದಲೇ ಈತನು ನನಗೆ ಈ ಪ್ರಶ್ನೆ ಮಾಡಿದ್ದಾನೆ. ಆದರೆ ನಾನು ಇವನಿಗೆ ಇದೇ ಬಗೆಯ ಹೊರ ದಾರಿಯ ಉತ್ತರವನ್ನು ಕೊಟ್ಟು ಈತನ ಆ ಸಂದೇಹವನ್ನು ಛೇದಿಸಬೇಕು. ಬಳಿಕ ಆತನು ಸಚಿವನನ್ನುದ್ದೇಶಿಸಿ:—ಅಮಾತ್ಯರೇ, ಈ ಬಗ್ಗೆ ತಮಗೆ ಇಷ್ಟು ಅನುಮಾನವೇಕಾಗಿದೆ?

ರಾಕ್ಷಸ:—ಅಂಥ ಸಂಶಯವುಂಟಾದ್ದರಿಂದಲೇ ನಿನಗೆ ಹೀಗೆ ಕೇಳುತ್ತಿರುವೆನು. ನೀನು ನಿಜ ಸಂಗತಿ ತಿಳಿಸಿದರೆ, ನಾನು ಈ ಪ್ರಶ್ನೆ ಮಾಡುವ ಕಾರಣವನ್ನು ಹೇಳುವೆನು.

ಚಂದ್ರಪಾಲ:—ನಾನು ಧರ್ಮಸಾಕ್ಷಿಯಾಗಿ ಹೇಳುತ್ತೇನೆ. ಆಕಾಶದಲ್ಲಿ ಯಾವ ದೇವರಿರುವನೆಂದು ನಾವೆಲ್ಲರೂ ತಿಳಿಯುತ್ತಿರುವೆವೋ, ಆತನಿಗೆ ಅರಿಯದ ಯಾವ ವಿಷಯವೂ ಇರುವದಿಲ್ಲ. ಶಕಟಾರನು ಇನ್ನು ಸ್ವಲ್ಪ ಹೊತ್ತಿಗೆ ಸಾಯುವನೆಂಬದು ನನ್ನ ನಿದರ್ಶನಕ್ಕೆ ಬರಲು, ನಾನು ಆಗಲೇ ಆ ವರ್ತಮಾನವನ್ನು ನಿಮಗೆ ತಿಳಿಸಿದೆನು. ತಾವು ಬಂದು ನೋಡಿ ಖಾತ್ರಿ ಮಾಡಿಕೊಂಡು ಹೋದ ಮೇಲೆ ಆತನು ತೀರಿಹೋದನು. ಬಳಿಕ ಆತನ ಉತ್ತರಾಧಿಕಾರಿಗಳಾರಾದರೂ ಬರುವರೇನೆಂದು ನಾನು ರಾತ್ರಿಯ ತೃತೀಯ ಪ್ರಹರದ ವರೆಗೂ ದಾರಿ ಕಾಯ್ದೆನು. ಯಾರೂ ಬಾರದಾಗಲು, ನಾನೇ ನನ್ನ ಅನುಚರರೊಡಗೂಡಿ ಆತನ ಶವಕ್ಕೆ ಅಗ್ನಿಸಂಸ್ಕಾರ ಮಾಡಿದೆನು; ಹಾಗು ಮರು ದಿವಸ ಆ ಸುದ್ದಿಯನ್ನು ನಾನೇ ಖುದ್ದಾಗಿ ಬಂದು ತಮಗೆ ನಿವೇದಿಸಿದ್ದೆನು.

ರಾಕ್ಷಸ:—ಶಕಟಾರನು ನಿನ್ನ ಆಪ್ತನೆಂದು ಕೇಳಿದ್ದೇನೆ; ನಿಜವೇ?

ಚಂದ್ರಪಾಲನು ಸಿಟ್ಟಿನಿಂದ:-ಅಮಾತ್ಯರೇ, ಆ ಮಾತನ್ನು ನಾನು ಅಲ್ಲಗಳೆಯುವದಿಲ್ಲ. ನನ್ನ ದೂರಿನ ಅಜಚಿಯ ಮಗಳಾದ ಲಲಿತೆಯನ್ನು ಆತನಿಗೆ ಕೊಟ್ಟಿತ್ತೆಂಬದನ್ನಾದರೂ ನಾನು ಬಚ್ಚುವದಿಲ್ಲ; ಆದರೆ ತಮಗೆ ಗೊತ್ತಿರದು, ನನ್ನ ಆ ಅಜಚಿಯ ಮಗಳನ್ನು-ಲಲಿತೆಯನ್ನು ಶಕಟಾರನು ಸುಮ್ಮನೆ ತ್ಯಜಿಸಿದ್ದನೆಂಬದು. ಲಲಿತೆಯು ಬದುಕಿರುವ ವರೆಗೂ ಅವನು

ಅವಳನ್ನು ಬಹು ಪರಿಯಾಗಿ ಗೋಳಾಡಿಸಿದನು. ಆ ಕ್ಲೇಶದಿಂದಲೇ ಆ ನನ್ನ ಭಗಿನಿಯು ವಿಷ ಪ್ರಾಶನ ಮಾಡಿ ಆತ್ಮಹತ್ಯೆಯನ್ನು ಮಾಡಿಕೊಂಡಳು ಲಲಿತೆಯು ಕುಲಕಲಂಕಿನಿಯಾದ್ದರಿಂದಲೇ ಆತನು ಅವಳನ್ನು ತ್ಯಜಿಸಿದ್ದನೆಂದು ಜನರು ಆಡಿಕೊಳ್ಳುತ್ತಿರುವರು; ಆದರೆ ಆ ಮಾತು ಸಂಪೂರ್ಣ ಸುಳ್ಳಿರುತ್ತದೆ. ನನ್ನ ತಂಗಿಯು ತೀರಿಕೊಂಡ ನಂತರ ಶಕಟಾರನು ತನ್ನ ಎರಡನೇ ಹೆಂಡತಿಯೊಡನೆ ಸಂಸಾರ ಮಾಡುತ್ತಿದ್ದನೆಂಬುದು ತಮಗೂ ತಿಳಿದಿರುತ್ತದೆ. ಯಾಕಂದರೆ ಸೆರೆಮನೆಯೊಳಗೆ ಆತನು ತನ್ನ ಆ ಎರಡನೆಯ ಸಂಬಂಧಿಕಳೊಡನೆಯೇ ಸೆರೆಯಿರಿಸಲ್ಪಟ್ಟಿದ್ದನು ನನ್ನ ತಂಗಿಯ ಸೇಡು ತೀರಿಸಿಕೊಳ್ಳುವದಕ್ಕೆಂನು ಕಾರಾ ಗೃಹದಲ್ಲಿ ನಾನು ಆತನೊಡನೆ ಹೇಗೆ ವ್ಯವಹರಿಸುತ್ತಿದ್ದೆನೆಂಬುದು ತಮಗೂ ಕೂಡ ಗೊತ್ತಿರುತ್ತದೆ. ತಾವು ಆತನಿಗೆ ಚಲೋ ಹಾಸಿಗೆ-ಹುಪ್ಪಡಿಗಳನ್ನು ಕೊಡಲಿಕ್ಕೆ ತಿಳಿಸಿದ್ದಿರಷ್ಟೇ? ಆದರೆ ನಾನು ಆತನನ್ನು ಒಣಗಿದ ಎಲೆ ಮತ್ತು ಹುಲ್ಲುಗಳ ಮೇಲೆ ಬೀಳಗೆಡವಿದ್ದೆನು. ಆತನಿಗೆ ರುಚಿಕರವಾದ ಆಹಾರ ಕೊಡುತ್ತಿರಬೇಕೆಂದು ತಾವು ಸೂಚಿಸಿದ್ದಿರಿ; ಆದರೆ ನಾನವನಿಗೆ ಕದನ್ನವನ್ನೇ ತಿನ್ನ ಹಚ್ಚಿ, ಆತನನ್ನು ಕೇವಲ ಎಲುವು-ತೊಗಲುಗಳ ಪಂಜರವನ್ನಾಗಿ ಮಾಡಿದ್ದೆನು. ತಮಗೆ ಈಗ ಸಂದೇಹವುಂಟಾಗಿರುವಂತೆ ನಾನು ಅವನನ್ನು ಸೆರೆಮನೆಯಿಂದ ಗೌಪ್ಯವಾಗಿ ಹೊರಹೊರಡಿಸಬೇಕೆಂದಿದ್ದರೆ, ತಮ್ಮ ಆಜ್ಞೆಯ ವಿರುದ್ಧವಾಗಿ ಆತನನ್ನು ನಾನು ಅಷ್ಟು ಗೋಳಾಡಿಸುತ್ತಿದ್ದುದೇಕೆ? ಅವನು ನಮ್ಮ ಸೆರೆಮನೆಯಲ್ಲಿರುವಾಗ ಒಮ್ಮೆ ನನಗೆ ಬಹಳ ಜಡ್ಡಾಗಿತ್ತು. ನನ್ನ ಅಂಥ ಬೇನೆಯಲ್ಲಿಯೇ ಶಕಟಾರನು ತುರಂಗದೊಳಗಿಂದ ಓಡಿಹೋಗಬಾರದೆಂದು ನಾನು ಪ್ರತಿದಿನವೂ ಶಕ್ತಿಮೀರಿ ಚಿಂತಿಸಿ-ಕಾಯುತ್ತಿದ್ದೆನು. ಒಂದು ವೇಳೆ ನಾನು ಆಗ ತುಸ ಗೈರ ಸಾವಧನಾಗಿದ್ದರೆ, ಆತನು ಆಗಲೇ ಪಲಾಯನ ಸೂಕ್ತವನ್ನು ಪಠಿಸತಕ್ಕವನೇ ಸರಿ. ಅವನ ಮೇಲೆ ನಾನು ಅಂಥ ಕಠಿಣ ಪಹರೆ ಇಡಲಿಕ್ಕೆ, ಆತನು ನನ್ನ ಭಗಿನಿಯನ್ನು ಗೋಳಾಡಿಸಿದ್ದರ ಪ್ರತಿಶೋಧವೇ-ಸೇಡೇ-ಕಾರಣವು. ಈ ಸಂಗತಿಯನ್ನು ನಾನು ಇದುವರೆಗೆ ತಮಗೂ ಕೂಡ ತಿಳಿಸಿದ್ದಿಲ್ಲ; ತಮ್ಮಂತಹರ ಬಳಿ ಸಹಜವಾಗಿ ತಿಳಿಸತಕ್ಕಂತಹ ಮಾತೂ ಅದಾಗಿರಲಿಲ್ಲ

ಅಮಾತ್ಯ ರಾಕ್ಷಸನು ಚಂದ್ರಪಾಲನು ಹೇಳಿದ ಆ ಸಮಸ್ತ ವೃತ್ತಾಂತವನ್ನೂ ಸಾವಧಾನ ಚಿತ್ತದಿಂದ ಕೇಳಿಕೊಂಡನು. ಆದರಿಂದ ಈ ಮೊದಲು ಆತನಿಗೆ ಉಂಟಾಗಿದ್ದ ಸಂದೇಹವು ಕೆಲಮಟ್ಟಿಗೆ ಕಡಿಮೆಯಾಯಿತು. ಬಳಿಕ ಮಂತ್ರಿವರ್ಯನು ಪ್ರಸನ್ನವದನದಿಂದ:—ಚಂದ್ರಪಾಲಾ, ತಪ್ಪು ತಿಳುವಳಿಕೆ

ಯಿಂದ ಈ ವಿಷಯವಾಗಿ ನಾನು ನಿನ್ನಲ್ಲಿ ಸಂದೇಹ ತಾಳಿದೆನು; ಆದರೆ ಈಗ ಅದೆಲ್ಲ ಬಯಲಾಯಿತು ನೀನು ನನ್ನ ಹಿತಕಾಂಕ್ಷಿಯಾದ ವಿಶ್ವಾಸಿಗ ಸೇವಕನೆಂಬದನ್ನು ನಾನು ಮರೆಯಲಾರೆನು ಹೋಗು, ಇನ್ನು ನೀನು ನಿನ್ನ ಕೆಲಸಕ್ಕೆ, ಎಂದು ಹೇಳಿದನು

"ಬಾಯಿ ಇದ್ದವನೇ ಬದುಕುವನು" ಎಂಬ ಮಾತು ಸಕಲ ದೇಶಗಳಲ್ಲಿಯೂ ಸಕಲ ಕಾಲದಲ್ಲಿಯೂ ಅಬಾಧಿತ ಸತ್ಯವಾಗಿರುತ್ತಗೆ; ಹಾಗು ಅದು ಹಾಗೆ ಇರತಕ್ಕುದೇ. ಕಳ್ಳತನ, ಕೊಲೆಗಡಕತನ, ಪರದ್ರವ್ಯಾಪಹರಣ, ಪರಸ್ತ್ರೀರತ ಮೊದಲಾದ ನೀಚ ಗುಣಗಳು ತ್ರಿಕಾಲಾಬಾಧಿತವಾಗಲಿಕ್ಕೆ ಬಾಯ್ಬಡಕತನವೇ ಮುಖ್ಯ ಸಾಧನವು ಮಗಧರಾಜ್ಯದ ಪ್ರಮುಖ ಕಾರಾ ರಕ್ಷಕನಾದ ಚಂದ್ರಪಾಲನು ಈ ಬಾಯ್ಬಡಕ ಶಾಸ್ತ್ರದಲ್ಲಿ ಚೆನ್ನಾಗಿ ಪಾರಂಗತನಿದ್ದುದರಿಂದಲೇ, ಆತನು ಮಗಧ ರಾಜ್ಯದಲ್ಲೆಲ್ಲ ಕೂಟ ಬುದ್ಧಿಯವನೆಂದು ಪ್ರಖ್ಯಾತನಾದ ಅಮಾತ್ಯ ರಾಕ್ಷಸನನ್ನೂ ಕೂಡ ಸಹಜವಾಗಿ ಸುಂಕು ಗೊಳಿಸಿಬಿಟ್ಟನು!

ಚಂದ್ರಪಾಲನು ಹೊರಟು ಹೋದ ಬಳಿಕ ರಾಕ್ಷಸನು ಮತ್ತೆ ಆಲೋಚನೆಗೊಳಗಾದನು ಈ ಚಂದ್ರಪಾಲನು ಸುಳ್ಳು ಹೇಳತಕ್ಕವನಲ್ಲೆಂಬಬಗ್ಗೆ ನನ್ನ ಖಾತ್ರಿಯಾಯಿತು; ಆದರೆ ಮಹಾರಾಜನ ಹೆಸರಿನ ಆ ಎರಡನೇ ಮುದ್ರೆ ಎಲ್ಲಿಂದ ಬಂತು? ಅದು ಶಕಟಾರನ ಹಿತಕಾಂಕ್ಷಿಯಾದ ಯಾವನೊಬ್ಬ ಕುತಾಂತ್ರಿಕನಲ್ಲಿ ಉಳಿದಿರಬಹುದೇನು? ಹಾಗು ಆತನೇ ಈ ತರದ್ದ ಅನಾಹುತಗಳನ್ನು ಮಾಡುತ್ತಿರಬಹುದೇನು? ಅದುದರಿಂದ ಎಲ್ಲಕ್ಕೂ ಮೊದಲು ನಾನು ಶಕಟಾರನ ಆ ಹಿತಕಾಂಕ್ಷಿಯ ಪತ್ತೆಯನ್ನು ಹಚ್ಚಲಿಕ್ಕೇ ಬೇಕು; ಇಲ್ಲದಿದ್ದರೆ ಆ ದುಷ್ಟನು ಆ ಮುದ್ರೆಯ ಸಹಾಯದಿಂದ ನನ್ನ ಮೇಲೆ ಮತ್ತು ಈ ಮಗಧ ರಾಜ್ಯದ ಮೇಲೆ ಯಾವ ಯಾವ ಅನರ್ಥಗಳನ್ನು ತಂದೊಡ್ಡುವನೋ? ಎಂದು ಯೋಚಿಸ ಹತ್ತಿದನು.



# ಚಾಣಾಕ್ಯನ ಸಹಾಯ.

ಮಹಾ ಪದ್ಮನಂದನ ಶ್ರಾದ್ಧವಾದ ಎಳೆಂಟು ದಿನಗಳಿಗೆ ಪರ್ವತರಾಜನಾದ ಮಲಯಕೇತುವಿಗೆ ಮಗಧೇಶನಾದ ಧನನಂದನಿಂದ ಒಂದು ಪತ್ರವು ಕಳಿಸಲ್ಪಟ್ಟಿತು. ಆತನು ಆ ಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ಚಂದ್ರಗುಪ್ತನೊಡನೆ ಆಲೋಚಿಸ ಹತ್ತಿದ್ದನು. ಅಷ್ಟರಲ್ಲಿ ಶಕಟಾರ ಮಂತ್ರಿಯೂ ಅಲ್ಲಿಗೆ ಬಂದನು. ಮಗಧೇಶ್ವರನಿಂದ ಬಂದಿದ್ದ ಆ ಪತ್ರದಲ್ಲಿ ಈ ರೀತಿ ಬರೆದಿತ್ತು:—

"ಪರ್ವತೇಶಾ, ಈ ಪತ್ರ ಮುಟ್ಟಿದ ಬಳಿಕ ಈ ಬಗ್ಗೆ ವಿಚಾರ ಮಾಡಿ ಉತ್ತರವನ್ನು ಕೊಡಲಿಕ್ಕೆ ನಿನಗೆ ಇಪ್ಪತ್ನಾಲ್ಕು ತಾಸುಗಳ ಅವಕಾಶವನ್ನು ಕೊಟ್ಟಿರುತ್ತೇನೆ ನೀನು ಈ ಕಾಗದ ತಂದಿರುವ ನಮ್ಮ ಹೇರನನ್ನು ಅಲ್ಲಿಯವರೆಗೆ ತಡೆಯ ಹೇಳಲಿಕ್ಕೆ ಮಾತ್ರ ಬಾಧ್ಯಸ್ಥನು. ಮಗಧೇಶ್ವರನಾದ ಧನನಂದನ ಕೂಡ ಮಿತ್ರಭಾವದಿಂದಲೇ ನಡೆಯಬೇಕೆಂದು ನೀನು ಇಚ್ಛಿಸುವದಾದರೆ, ಈ ಪತ್ರವನ್ನು ಓದಿದೊಡನೆ ನಿನ್ನ ಆಶ್ರಯದಲ್ಲಿರುವ ನಮ್ಮ ಚಂದ್ರಗುಪ್ತನನ್ನು ನಮ್ಮ ಸ್ವಾಧೀನ ಪಡಿಸು. ಇದಕ್ಕೆ ನೀನು ತಪ್ಪಿದರೆ, ನಾವು ನಿನ್ನನ್ನು ನಮ್ಮ ಶತ್ರುವೆಂದು ಭಾವಿಸಿ, ನಿನ್ನ ಕ್ಷುದ್ರ ರಾಜ್ಯವು ಇದ್ದಿತೋ-ಇಲ್ಲವೋ ಎನ್ನುವ ಹಾಗೆ ಮಾಡಿಬಿಡುತ್ತೇವೆ. ನಮ್ಮ ಪ್ರಚಂಡ ದಂಡಿನ ಮುಂದೆ ನಿನ್ನ ಆಟವು ಕೊಂಚವೂ ನಡೆಯಲಾರದೆಂಬದನ್ನು ಲಕ್ಷ್ಯದಲ್ಲಿಟ್ಟು ಯೋಗ್ಯ ಉತ್ತರವನ್ನು ತೀವ್ರ ಕಳಿಸು."

ಈ ಪತ್ರದ ಸಂಗತಿಯನ್ನು ಆ ಮೂವರೂ ಮನನ ಮಾಡಿಕೊಂಡರು. ಮೂವರೂ ಆ ಬಗ್ಗೆ ಬಗೆ ಬಗೆಯಾಗಿ ಆಲೋಚಿಸಿದರು. ಬಹಳ ಹೊತ್ತು ಯೋಚಿಸಿದ ತರುವಾಯ ಮಲಯಕೇತುವು:—"ಈಗ ಮಗಧೇಶನೊಡನೆ ಯುದ್ಧ ಮಾಡದಿದ್ದರೆ, ರಣಹೇಡಿಯೆಂಬ ತುಚ್ಛ ಕಲಂಕವು ನನಗುಂಟಾಗುತ್ತದೆ. ಆ ಲಾಂಛನವು ಎಂದೂ ಯಾವ ಕೃತಿಯಿಂದಲೂ ತೊಳೆದು ಹೋಗಲಾರದು. ಈ ನನ್ನ ಪರ್ವತ ರಾಜ್ಯವು ವೀರರೇ ಜನಿಸತಕ್ಕ ಪ್ರದೇಶವು ಈ ದೇಶದ ಸ್ವಾತಂತ್ರ್ಯವು ಪೃಥ್ವಿಯ ಅಂತ್ಯದ ವರೆಗೂ ನಿಶ್ಚಲವಾಗಿರತಕ್ಕದ್ದು. ಇಂಥ ಈ ಪುಣ್ಯಭೂಮಿಯು, ಪರಸ್ವಾಧೀನತೆಯ ಶೃಂಖಲೆಗಳನ್ನು ತೊಟ್ಟುಕೊಂಡಿತೆಂದು ಸಕಲ ಭರತಭೂಮಿಯಿಂದಲೂ ಉಪೇಕ್ಷೆ ಹೊಂದುವದು ಕಲ್ಪನಾ ರಾಜ್ಯದಲ್ಲೂ ಕೂಡ ನನಗೆ ಅಸಹ್ಯವೆನಿಸುತ್ತದೆ. ಒಂದು ವೇಳೆ ಈ ನಮ್ಮ ಕ್ಷುದ್ರ ರಾಜ್ಯವು ಲುಪ್ತವಾಗಿಬಿಟ್ಟರೂ ಅಡ್ಡಿಯಿಲ್ಲ;

ಪರ್ವತೇಶನ ಹೆಸರು ಜನರ ಸ್ಮೃತಿಪಟಲದಿಂದ ಮರೆತು ಹೋದರೂ ಹೋಗಲಿ. ಆದರೂ ನಾನು ನನ್ನ ದೇಹದಲ್ಲಿ ಜೀವವಿರುವ ವರೆಗೂ ಈ ಚಂದ್ರಗುಪ್ತನನ್ನು ಅವನ ವೈರಿಗಳಿಗೆ ಒಪ್ಪಿಸಲಾರೆನು.

ಪರ್ವತೇಶನಾದ ಮಲಯಕೇತುವಿನ ಉದಾರತೆಯು ಈ ಮೊದಲು ಎಷ್ಟೋ ಸಾರೆ ಶಕಟಾರನ ನಿದರ್ಶನಕ್ಕೆ ಒಂದಿದ್ದಿತು; ಆದರೆ ಶೌರ್ಯ, ವೀರ್ಯ ಹಾಗು ಆಶ್ರಿತರ ಪರಿಪಾಲನ ಗುಣಗಳು ಮಗಧ ದೇಶದ ಅಧಿಪತಿಯಾದ ಧನನಂದನಿಗಿಂತಲೂ ಈ ಕ್ಷುದ್ರ ಪರ್ವತ ರಾಜ್ಯದ ಅಧಿಪತಿಯಲ್ಲಿ ಎಷ್ಟೋ ಪಾಲು ಅಧಿಕವಾಗಿರುವವೆಂಬುದು ಇಂದು ಆತನಿಗೆ ಚೆನ್ನಾಗಿ ತಿಳಿದುಬಂತು. ಪರ್ವತೇಶನ ಆಗಿನ ಮುಖಭಾವ, ವೀರಾವೇಶ ಮತ್ತು ಕೃತಸಂಕಲ್ಪ ಇವುಗಳನ್ನು ನೋಡುತ್ತಿರಲು ಈತನು ತನ್ನ ಈ ಹಟವನ್ನು ಬಿಡತಕ್ಕವನಲ್ಲೆಂದು ಯೋಚಿಸಿ, ಶಕಟಾರನು ಆಗ ಆತನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ.

ತನ್ನನ್ನು ಸ್ವಾಧೀನಪಡಿಸಬೇಕೆಂದು ಪ್ರತ್ಯಕ್ಷ ಮಗಧಾಧಿಪನೇ ಕೇಳುತ್ತಿದ್ದರೂ ಚಂದ್ರಗುಪ್ತನ ಅಂತರಂಗದಲ್ಲಿ ಆ ವಾರ್ತೆಯಿಂದ ಎಳ್ಳಷ್ಟು ಚಂಚಲತೆಯುಂಟಾಗಲಿಲ್ಲ. ಆತನು ಮಹಾ ಸಾಗರದಂತೆ ಅಚಲನೂ ಗಂಭೀರನೂ ಆಗಿ ತೋರುತ್ತಿದ್ದನು. ಮಲಯಕೇತುವಿನ ಆ ದೃಢ ಸಂಕಲ್ಪವನ್ನೂ, ಅನುಪಮ ಸಾಹಸವನ್ನೂ ತಿಳಿದು ಚಂದ್ರಗುಪ್ತನು ಮನಸ್ಸಿನಲ್ಲಿ ನಿಶ್ಚಯಿಸಿದನೇನಂದರೆ, ಇನ್ನು ನಾನಾಗಿ ಹೋಗಿ ಧನನಂದನ ಸೆರೆಯಾಳಾಗಲಿಕ್ಕಿಲ್ಲ. ನನ್ನ ಶೌರ್ಯ-ವೀರ್ಯಗಳನ್ನು ಜಗತ್ತಿನ ನಿದರ್ಶನಕ್ಕೆ ತಂದುಕೊಡಲಿಕ್ಕೆ ಪ್ರಾಪ್ತವಾಗಿರುವ ಈ ಸುಸಂಧಿಯನ್ನು ನಾನು ವ್ಯರ್ಥವಾಗಗೊಡಲಿಕ್ಕಿಲ್ಲ. ದೈವವಶಾತ್ ನಮಗೆ ಶಕಟಾರನಂಥ ಪ್ರವೀಣ ಮಂತ್ರಿಯೂ ಚಾಣಕ್ಯನಂಥ ಕುಟಿಲ ಶಾಸ್ತ್ರ ನಿಪುಣನೂ ಲಭಿಸಿರುವರು. ನಾವೆಲ್ಲರೂ ಕೂಡಿ ಐಕ್ಯಮತದಿಂದ ಆಲೋಚನೆಯನ್ನು ಮಾಡಿ ಕಾದಿದರೆ, ಧನನಂದನಿಗೆ ಎಂದಿಗೂ ಜಯವಾಗಲಿಕ್ಕಿಲ್ಲ ಆದ್ದರಿಂದ ನಾನು ಈ ಯುದ್ಧದಲ್ಲಿ ಪರ್ವತೇಶನ ಮುಖ್ಯ ಸೇನಾನಿಯಾಗಿ ಕಾದುತ್ತೇನೆ

ಕೆಲ ಹೊತ್ತಿನ ಮೇಲೆ ಅವರು ಮೂವರೂ ಒಮ್ಮತದಿಂದ 'ಚಂದ್ರಗುಪ್ತನನ್ನು ಕಳಿಸುವದಿಲ್ಲ ಯುದ್ಧಕ್ಕೆ ಸಿದ್ಧರಿರುತ್ತೇವೆ' ಎಂಬ ಸಂಕ್ಷಿಪ್ತ ಹಾಗು ಅರ್ಥಪೂರ್ಣ ಉತ್ತರ ಬರೆದು ಕಳಿಸಿದರು.

ಮರು ದಿನ ಬೆಳಗಾಗುವಷ್ಟರಲ್ಲಿ ಪಾರ್ವತ್ಯಸೈನ್ಯದಲ್ಲಿ ಎರಡು ತಂಡಗಳನ್ನು ಮಾಡಿ ಒಂದನ್ನು ಚಂದ್ರಗುಪ್ತನ ಸ್ವಾಧೀನ ಪಡಿಸಿ, ಮತ್ತೊಂ

ದಕ್ಕೆ ಮಲಯಕೇತುವು ತಾನೇ ಸೇನಾಪತಿಯಾಗಿ ವ್ಯೂಹವನ್ನು ರಚಿಸಿಕೊಂಡು ಕುಳಿತನು. ತಮ್ಮ ರಾಜ್ಯವು ಇನ್ನು ಬಲಿಷ್ಠವಾದ ಮಗಧ ದೇಶದೊಡನೆ ಕಾದಬೇಕಾದೀತೆಂಬ ಇಂಗಿತವನ್ನು ತನ್ನ ಅಣ್ಣನಂತೆ ಮಂದಾಕಿನಿಯೂ ತಿಳಿದಿದ್ದಳು. ಆದ್ದರಿಂದಲೇ ಅವಳು ಪಾರ್ವತೇಶನ ವೇತನ ಭೋಗಿ ಸೈನ್ಯವಲ್ಲದೆ, ತನ್ನ ದಯೆ, ಕ್ಷಮೆ ಹಾಗು ಪ್ರಜಾವಾತ್ಸಲ್ಯ ಮುಂತಾದ ಉಚ್ಚ ಗುಣಗಳಿಂದ ಒಂದು ಸಾವಿರ ಸ್ವಯಂ ಸೇವಕರನ್ನು ಸಜ್ಜುಗೊಳಿಸಿದ್ದಳು. ಆ ಸೈನ್ಯಕ್ಕೆ ಕವಾಯತು ಕಲಿಸಿ ತಯಾರ ಮಾಡಲಿಕ್ಕೆ ಅವಳು ತಮ್ಮದೇಶದ ಮಾಜಿ ಸೇನಾಪತಿಯಾದ ಭೈರವನೆಂಬ ವೃದ್ಧ ದಳಪತಿಯನ್ನು ನಿಯೋಜಿಸಿದ್ದಳು; ಆದರೆ ಇದೆಲ್ಲ ಸಂಗತಿಯನ್ನು ಅವಳು ಮಲಯಕೇತುವಿಗಾಗಲಿ, ಚಂದ್ರಗುಪ್ತನಿಗಾಗಲಿ ಮಗಧದೊಡನೆ ಪ್ರತ್ಯಕ್ಷ ಕಾಳಗ ಪ್ರಾರಂಭವಾಗುವವರೆಗೂ ತಿಳಿಸಿರಲಿಲ್ಲ. ಅವಳು ತನ್ನ ಈ ಕಾರ್ಯಕ್ಕಾಗಿ ಪ್ರತಿ ದಿನವೂ ಅಶ್ವಾರೋಹಿಯಾಗಿ ಹೋಗುತ್ತಿದ್ದಳು. ಇವಳು ಬೇಟೆ-ಗೀಟೆಗೆ ಹೋಗುತ್ತಿರಬಹುದೆಂದು ತಿಳಿದು, ಮಲಯಕೇತು-ಚಂದ್ರಗುಪ್ತರು ಅತ್ತ ಕಡೆಗೆ ವಿಶೇಷ ಲಕ್ಷ್ಯಗೊಟ್ಟಿರಲಿಲ್ಲ.

ಪರ್ವತ ರಾಜ್ಯದ ಪ್ರಜೆಗಳು ಸ್ವಾಭಾವಿಕವಾಗಿಯೇ ಬಹು ಸಮರಪ್ರಿಯರು. ಬಾಣಗಳನ್ನು ಹೊಡೆಯುವದರಲ್ಲಂತೂ ಅವರಿಗೆ ಸಮಾನರಾದ ಯೋದ್ಧರು ಆ ಕಾಲದಲ್ಲಿ ಭರತ ಖಂಡದಲ್ಲಿ ಯಾರೂ ಇರಲಿಲ್ಲ. ದಾಂಭಿಕರಾದ ಮಾಗಧೀಯರೊಡನೆ ಅವರಲ್ಲಿ ಚಿರ ಶತ್ರುಭಾವವು ನೆಲೆಗೊಂಡಿತ್ತು ಆದ್ದರಿಂದ ಅಲ್ಲಿಯ ಆ ಯುದ್ಧೋತ್ಸಾಹೀ ಪ್ರಜೆಗಳು ಮಂದಾಕಿನಿಯ ಆಜ್ಞೆಯ ಮೇರೆಗೆ ಸಿದ್ಧರಾದರು. ಯುದ್ಧವು ನಿಶ್ಚಿತವಾದ ಮೇಲೆ ಒಂದು ದಿನ ಮಂದಾಕಿನಿಯು ತನ್ನ ಸ್ವಯಂ ಸೇವಕ ಸೈನ್ಯದ ಸಂಗತಿಯನ್ನು ಚಂದ್ರಗುಪ್ತನಿಗೆ ನಿವೇದಿಸಿದಳು; ಆದರೆ ಅವಳ ಆ ಮಾತನ್ನು ಕೇಳಿ ಆತನು ನಕ್ಕುಬಿಟ್ಟನು! ಅದರಿಂದ ಮಂದಾಕಿನಿಯು ಮರ್ಮಾಹತಳಾದಂತಾಗಿ ಆತನೆದುರಿಗೆ ಮತ್ತೆ ಆ ವಿಷಯವನ್ನೇ ಎತ್ತಲಿಲ್ಲ ತನ್ನ ಅಣ್ಣನೆದುರಿಗೆ ಹೇಳಿದರೆ ಆತನೂ ಹೀಗೆಯೇ ಉಪಹಾಸ ಮಾಡಬಹುದೆಂದು ಊಹಿಸಿ, ಆಕೆ ಅದನ್ನು ಆತನಿಗೆ ತಿಳಿಸಲಿಲ್ಲ. ತಾನು ಹುಟ್ಟಾ ಹೆಂಗುಸು ಎಷ್ಟು ಪೌರುಷವನ್ನು ತೋರಿಸ ಹೋದರೂ. ಸಮರಾಂಗಣದ ಪಡಿಕಟ್ಟು ತನಗೆ ಗೊತ್ತಿರುವದಿಲ್ಲ. ಗೊತಿದ್ದ ತನ್ನ ಬಂಧು ಮುಂತಾದವರಿಗೆ ಕೇರಬೇಕೆಂದರೆ ಅವರು ಉಪಹಾಸ ಮಾಡುತ್ತಾರೆ ಅಂದ ಬಳಿಕ ಈ ಬಗ್ಗೆ ಏನು ಮಾಡಬೇಕೆಂಬುದೇ ಅವಳಿಗೆ ತಿಳಿಯದಾಯಿತು.

ಒಂದು ದಿನ ಅವಳು ಹೀಗೆ ಆಲೋಚನಾ ತತ್ಪರಳಾಗಿ ಕುಳಿತಿರಲು, ಶಕಟಾರನು ಅವಳ ಬಳಿಗೆ ಹೋದನು. ಶಕಟಾರನು ಅವರಲ್ಲಿರಹತ್ತಿ ಕೆಲವು ತಿಂಗಳುಗಳಾಗಿದ್ದು, ಮಂದಾಕಿನಿಯನ್ನು ಅವನು ತನ್ನ ಹೊಟ್ಟೆಯ ಮಗಳಂತೆ ನೋಡುತ್ತಿದ್ದನು. ಅದರಿಂದ ಅವಳು ಸಂಕೋಚವಿಲ್ಲದೆ ಆತನೊಡನೆ ಮಾತು-ಕಥೆಗಳನ್ನಾಡುತ್ತಿದ್ದಳು. ಆಗ ಅವಳು ಶಕಟಾರನನ್ನು ಕುರಿತು:- ಮಂತ್ರಿವರ್ಯ, ಪ್ರಸ್ತುತದ ಯುದ್ಧದಲ್ಲಿ ಜಯಾಪಜಯಗಳು ಯಾರ ಪಾಲಿಗೇ ಬರಲೊಲ್ಲವೇಕೆ; ಆದರೆ ಅತುಲ ಮಾಗಧೀ ಸೈನ್ಯದೊಡನೆ ಕಾಳಗ ಮಾಡಲಿಕ್ಕೆ ನಮ್ಮಲ್ಲಿ ಕೆಲವು ಸೈನ್ಯವಾದರೂ ಬೇಡವೇ?

ಶಕಟಾರ:—ತಂಗೀ, ದಂಡಿಲ್ಲದಿದ್ದರೆ ಕಾಳಗವೆಂಥದು?

ಮಂದಾಕಿನಿ:—ನಮ್ಮ ರಾಜ್ಯದಲ್ಲಿರುವ ಅಲ್ಪ ಸ್ವಲ್ಪ ಸೈನ್ಯವನ್ನು ಮಲಯಕೇತು-ಚಂದ್ರಗುಪ್ತರು ಸ್ವಾಧೀನಪಡಿಸಿಕೊಂಡು ಯುದ್ಧಕ್ಕೆ ತೆರಳುವರು; ಆದರೆ ಸದ್ಯದ ಈ ಯುದ್ಧದಲ್ಲಿ ನನಗೇನೂ ಕೆಲಸವಿಲ್ಲವೆ?

ಶಕಟಾರ:—ಅದೇಕಿಲ್ಲ? ಮಾತೃರೂಪದಿಂದಲೂ ಭಗಿನೀರೂಪದಿಂದಲೂ ನೀನು ಗಾಯಹೊಂದುವ ನಮ್ಮ ದಂಡಾಳುಗಳ ಶುಶ್ರೂಷೆಮಾಡುವ ನಿನ್ನ ಮೆಚ್ಚಿನ ಉದ್ಯೋಗದಲ್ಲಿ ತೊಡಗು.

ಮಂದಾಕಿನಿ:—ಅದಂತೂ ನಮ್ಮ ಪರ್ವತರಾಜ್ಯದ ಸಕಲ ಸ್ತ್ರೀಯರೂ ಮಾಡುವ ಕರ್ತವ್ಯ; ಮತ್ತು ಅದನ್ನು ನಾವೆಲ್ಲರೂ ಕೂಡಿಯೇ ಮಾಡುವೆವು. ಅದರ ಹೊರ್ತು ಮತ್ತಾವ ವಿಶೇಷ ಕೆಲಸವೂ ನನ್ನಿಂದ ಆಗಲಾರದೇ?

ಮಂದಾಕಿನಿಯ ವಿಶೇಷ ಕಾರ್ಯವಾವುದೆಂಬುದು ಶಕಟಾರನಿಗೆ ತಿಳಿಯಲಿಲ್ಲ. ವಿಸ್ಮಯ-ವಿಸ್ಫೂರಿತ ನೇತ್ರಗಳಿಂದ ಆತನು ಮಂದಾಕಿನಿಯತ್ತ ನೋಡಹತ್ತಿದನು, ಕೆಲಹೊತ್ತಿನ ನಂತರ ಆತನು:—ಮಂದಾಕಿನೀ, ನಿನ್ನ ಅಭಿಪ್ರಾಯ ನನಗೆ ತಿಳಿಯಲೊಲ್ಲದು.

ಹೇಳಲೋ-ಬೇಡವೋ? ಎಂದು ಕೆಲವು ವೇಳೆ ಯೋಚಿಸಿ, ಕೊನೆಗೆ ಅವಳು:—ತಮಗೆ ಹೆಚ್ಚು ದಂಡು ಬೇಕಿಲ್ಲವೇ?

ಶಕಟಾರ:—ಈ ಮಹಾ ಯುದ್ಧಕ್ಕೆ ಎಷ್ಟು ಸೈನ್ಯ ಸಿಕ್ಕರೂ ನನಗೆ ಕಡಿಮೆಯೆ ಸರಿ; ಆದರೆ ಅದನ್ನು ನೀನು ತರುವದೆಲ್ಲಿಂದ?

ಮಂದಾಕಿನಿ:—ಒಂದು ಸಾವಿರ ಸಂಖ್ಯೆಯುಳ್ಳ, ಉತ್ತಮ ಗುರಿಯ ಹೊಡೆಯುವ ಪಾರ್ವತೇಯ ಸ್ವಯಂ ಸೇವಕರ ತಂಡವೊಂದನ್ನು ನಾನು ನಿರ್ಮಿಸಿರುತ್ತೇನೆ. ಅದನ್ನು ನಾನು ಸನ್ಯದ ಕಾಳಗದಲ್ಲಿ ಕಾದಾಡಲಿ ಅಣಿ ಮಾಡುವೆನು.

ಹೀಗೆಂದು ನುಡಿದು ತಾನು ಆ ಸೈನ್ಯವನ್ನು ಹೇಗೆ ಕೂಡಿಸಿದೆನು. ಅದಕ್ಕೆ ಕವಾಯಿತು ಮೊದಲಾದ ಯುದ್ಧೋಪಯುಕ್ತ ಶಿಕ್ಷಣವನ್ನು ಹೇಗೆ ಕೊಡಿಸಿದೆನು; ಅದರ ದಳಪತಿ ಯಾರು? ಇತ್ಯಾದಿ ಸಂಗತಿಗಳನ್ನು ಅವಳು ಶಕಟಾರನಿಗೆ ತಿಳಿಸಿದಳು ಶಕಟಾರನು ಆವೀರ್ಯವತೀ ಕ್ಷತ್ರೀಯ ರಮಣಿಯ ಸಾಹಸ, ಶಕ್ತಿ, ಬುದ್ಧಿ ಹಾಗು ಕರ್ತವ್ಯತತ್ಪರತೆ ಇವುಗಳ ವಿಷಯವಾಗಿ ಮನಸ್ಸಿನಲ್ಲಿ ಯೋಚಿಸಿ, ಅವಳನ್ನು ಬಹು ಪರಿಯಾಗಿ ಕೊಂಡಾಡಿ, ಬಳಿಕ:—ಮಂದಾಕಿನೀ, ನಿನ್ನಂಥ ಶಕ್ತಿರೂಪಿಣಿಯ ಶಕ್ತಿಯಿಂದ ಪ್ರತಿಷ್ಠಾಪಿಸಲ್ಪಟ್ಟ ಆ ಸೇನಾದಲವು ಒಂದಿಲ್ಲೊಂದು ದಿನ ನಮಗೆ ಸಹಾಯಕಾರಿಯಾಗದೆ ಇರದು. ರಮಣಿಯರ ಶಕ್ತಿಯ ಬಗ್ಗೆ ನನ್ನಲ್ಲಿ ಚೆನ್ನಾಗಿ ವಿಶ್ವಾಸವಿದೆ. ನನ್ನ ಪತ್ನಿಯಾದ ಲಲಿತೆಯ ಸಾಹಸದಿಂದ ನಾನು ಪುನಃ ಬದುಕಿ ಉಳಿದದ್ದೇ ಇದಕ್ಕೆ ಉದಾಹರಣೆಯು. ರಮಣಿಯು ಮಾತೃರೂಪದಿಂದ ವೀರಪುತ್ರರನ್ನು ಪಡೆಯುವಳು; ಪತ್ನೀರೂಪದಿಂದ ವೀರಪತಿಯ ಹೃದಯದ ಕ್ಲೈಬ್ಯವನ್ನು ಹೋಗಲಾಡಿಸುವಳು; ಭಗಿನೀ ರೂಪದಿಂದ ವೀರರ ಪರಿಚರ್ಯವನ್ನು ಮಾಡಿ ಅದರ ಮೇಲೆ ಸ್ನಿಗ್ಧ ಸ್ನೇಹ ಧಾರೆಯನ್ನು ಎರಚುವಳು. ಪ್ರತ್ಯಕ್ಷ ಶಕ್ತಿರೂಪಿಣಿಯಾದ ರಮಣಿಗೆ ಅಸಂಭವವಾದ ಕೆಲಸವಾವದೂ ಇರುವದಿಲ್ಲ.

ತಾನು ಸೈನ್ಯದೊಡನೆ ಯುದ್ಧದಲ್ಲಿ ನಿಮಗೆ ಸಹಾಯ ಮಾಡುವವಳಿದ್ದೇನೆಂದು ಹೇಳಿದ ಅವಳ ಮಾತಿಗೆ ಇದುವರೆಗೆ ಯಾರೂ ಪ್ರೋತ್ಸಾಹವ ಕೊಟ್ಟಿರಲಿಲ್ಲ. ಶಕಟಾರನೇ ಹಾಗೆ ಮಾಡಿದವರಲ್ಲಿ ಮೊದಲನೆಯವನು. ಆತನ ಮಾತನ್ನು ಕೇಳಿ ಮಂದಾಕಿನಿಗೆ ಮತ್ತಿಷ್ಟು ಹುರುಪು ಬಂದಿತು. ಆಗ ಅವಳು:—ಮಂತ್ರಿವರಾ, ನೀವು ಪೂಜ್ಯರೂ, ಅನುಭವಸ್ಥರೂ ಇರುತ್ತೀರಿ ಪ್ರಸ್ತುತದ ಯುದ್ಧದಲ್ಲಿ ನಮ್ಮ ಸೈನ್ಯಕ್ಕೆ ಜಯವಾಗಲೆಂದೂ, ನಮ್ಮ ಸನ್ಮಾನವು ಮೊದಲಿಗಿಂತ ಇಮ್ಮಡಿಸಲೆಂದೂ ನೀವು ಆಶೀರ್ವದಿಸಿರಿ, ಎಂದು ಕೇಳಿಕೊಂಡಳು.

ಶಕ್ತಿರೂಪಿಣಿಯಾದ ಮಂದಾಕಿನೀ, ನಿನ್ನ ಮನೋವಾಂಛಿತವು ಶ್ರೀ ಮಹಾಕಾಳಭೈರವನ ಕೃಪೆಯಿಂದ ಈಡೇರಲಿ! ಎಂದು ಶಕಟಾರನು ನುಡಿದನು.

o o o o o o o o

"ತಂಗೀ, ಮಂದಾಕಿನಿ, ಇನ್ನು ನಾವು ಬದುಕಲಾರೆವು."

"ಭೈರವಾ, ಅದೇಕೆ?"

ಅಸಂಖ್ಯ ಮಾಗಧೀ ಸೇನೆಯು ಅತಿ ಶೀಘ್ರವಾಗಿ ನಮ್ಮ ನಾಲ್ಕೂ ಕಡೆಯಿಂದ ಪರ್ವತ ರಾಜ್ಯವನ್ನು ಪರಿವೇಷ್ಟಿಸುವದೆಂದು ತಿಳಿದಿರುವದು.

ಹಾಗೆ ಸುತ್ತಗಟ್ಟಿದ ಮಾತ್ರದಿಂದ ಭೈರವಾ, ಇಷ್ಟು ಅಂಜಲಿಕ್ಕೆ ಕಾರಣವೇನು?

ಆ ಮಾಗಧೀ ಸೈನ್ಯದ ಮಾನದಿಂದ ನಮ್ಮ ಸೈನ್ಯವು ಅದರ ಕಾಲ್ಕು ಪಾಲಷ್ಟು ಕೂಡ ಇರುವದಿಲ್ಲ.

ಕಡಿಮೆಯಿದ್ದ ಮಾತ್ರಕ್ಕೆ?

ಮುಂದಿನ ವಿಚಾರವನ್ನು ಅರಿಯದ ಬಾಲಿಕೆಯು ನೀನು, ನಾನು ಈ ಸಮರಾಂಗಣದ ಕಾರ್ಯದಲ್ಲಿ ಮುಪ್ಪಾದ ಮುದುಕನು ಅದುದರಿಂದ ಪ್ರಸ್ತುತದಲ್ಲಿ ನನ್ನ ಅನುಭವಪೂರ್ಣ ಮಾತೇ ಗ್ರಹಿಸತಕ್ಕಂಥಾದ್ದು.

ಅದೇನೂ ಸುಳ್ಳಲ್ಲ; ಆದರೆ ಬಾಲಿಕೆಯು ಕಡೆತನಕ ಬಾಲಿಕೆ ಯಾಗಿಯೇ ಉಳಿಯುವದಿಲ್ಲವಷ್ಟೇ? ಭೈರವಾ, ನೀನು ನಮ್ಮ ತಂದೆಯ್ಯ ಕಾಲಕ್ಕೆ, ನಮ್ಮ ರಾಜ್ಯದ ದಳಪತಿಯಿದ್ದಾಗ ಹೀಗೆಯೇ ಮಗಧ ದೇಶ ದೊಡನೆ ಕಾಳಗ ಮಾಡಿ ಜಯ ಸಂಪಾದಿಸಿದ್ದೆಯಲ್ಲವೇ? ಆಗಲಾದರೂ ನೀನು ನಿನ್ನ ಅಲ್ಪ ಸೈನ್ಯದಿಂದಲೇ ಮಾಗಧೀಯರ ಪ್ರಚಂಡ ಸೈನ್ಯವನ್ನು ಹೊಡೆದೋಡಿಸಿದ್ದಿಯಷ್ಟೆ?

ಮಂದಾಕಿನಿಯ ಈ ಉದಾಹರಣೆಯಿಂದ ಭೈರವನು ಲಜ್ಜಿತನಾ ದನು; ಆದರೂ ಆತನು ನಿರಾಶಾಪೂರ್ಣ ದನಿಯಿಂದ:—ಆಗಿನ ಮಾತೇ ಬೇರೆ. ಆಗ ಮಗಧ ಸೈನ್ಯವು ಇಷ್ಟು ಅತುಲವಾಗಿರಲಿಲ್ಲ.

ಆಗಲೊಲ್ಲದೇಕೆ, ಅದರಿಂದ ಇಷ್ಟು ಅಂಜುವದೇಕೆ? ಪರ್ವತ ದೇಶವಂತೂ ನಮ್ಮನ್ನು ಕೈಲಾಗದವರೆಂದು ಹುಟ್ಟಿಸಿರುವದಿಲ್ಲವಷ್ಟೇ? ನಾವು ದುರ್ಬಲ ಹಸ್ತಗಳಿಂದ ಶಸ್ತ್ರಿಗೆ ಕೈಹಾಕಬಾರದು; ಅಂದರೆ ಮಾಗಧೀ ದಳವು ನಮ್ಮ ನಾಲ್ಕರಷ್ಟೇಕೆ, ಎಂಟರಷ್ಟು ಇರಲೊಲ್ಲದೇಕೆ! ಭೈರವಾ, ನಮ್ಮ ಕಡೆಗೆ ಮಗಧದೇಶದ ಸೇನಾನಿಯಾದ ಯುವರಾಜ ಚಂದ್ರಗುಪ್ತ ನಿರುವನೆಂಬದನ್ನು ಮರೆತೆಯೇನು?

ಅದೆಲ್ಲವೂ ನನಗೆ ಗೊತ್ತಿದೆ; ಆದರೂ ಈ ಸಾರೆಯ ಯುದ್ಧವು ತುಸ ಗಡಚಾದದ್ದೇ!

ಭೈರವನ ಈ ಅಂಜುಬುರಕ ನುಡಿಯನ್ನು ಕೇಳಿ ಮಂದಾಕಿನಿಯು ಸ್ವಲ್ಪವೂ ಉತ್ಸಾಹ ಭಂಗವಾಗಲಿಲ್ಲ. ಮಾನವನ ಶಕ್ತಿಗಿಂತ ಭಗವಂತನ ಶಕ್ತಿಯಲ್ಲೇ ಅವಳಿಗೆ ಹೆಚ್ಚು ವಿಶ್ವಾಸವಿತ್ತು. ಮಾಡುವವನೂ ಮಾಡಿಸು

ವನನೂ ಶ್ರೀ ಭಗವಂತನೆಂದೇ ಅವಳ ಗ್ರಹಿಕೆಯು. ಮನುಷ್ಯನಲ್ಲಿಯ ಸತ್-ಅಸತ್ ಇಚ್ಛೆಗಳಿಗೂ ಆ ಭಗವಂತನೇ ಕಾರಣನೆಂದು ಆಕೆಯ ದೃಢ ವಿಶ್ವಾಸವು. ಮನುಷ್ಯನು ಆ ಭಗವಂತನ ಅಂಶದ ನೆಳಲೆಂದೂ, ಭಗವಂತ ನಲ್ಲಿಯ ಅತಿ ಸೂಕ್ಷ್ಮ ಜ್ಞಾನಕಲೆಯಿಂದಲೇ ಈ ಮಾನವನ ಜ್ಞಾನ ವಿಕಾಸವಾಗಿದೆಯೆಂದೂ, ಮನುಷ್ಯನು ಪ್ರಯತ್ನ ಮಾಡಿದರೆ, ಯಾವದೂ ಅಶಕ್ಯವಿಲ್ಲೆಂದೂ ಅವಳ ಮತವಾಗಿತ್ತು. ಆದ್ದರಿಂದ ಯಾವದೊಂದು ನಿರಪರಾಧಿ ಹಾಗು ಸ್ವತಂತ್ರ ರಾಷ್ಟ್ರವು ಎಷ್ಟೇ ಕ್ಷುಲ್ಲಕವಿದ್ದರೂ ಪಾಪ ರಹಿತವಾದ ಅದು ಎಂಥ ಬಲಾಢ್ಯ ಶತ್ರುವಿನಿಂದಲೂ ಆಕ್ರಮಿಸಲ್ಪಡಲಾರ ದೆಂಬದು ಅವಳ ನಿಶ್ಚಿತ ಮತವಾಗಿತ್ತು. ಮತ್ತವಾದ ಆನೆಯು ಶಕ್ತಿ ಯಿಂದಲೂ, ಶರೀರ ಯಷ್ಟಿಯಿಂದಲೂ ಪ್ರಚಂಡವಾದ ಮಾತ್ರಕ್ಕೆ ಒಂದು ಪುಟ್ಟ ಇರುವೆಯ ದಂಶದಿಂದ ಅದೂ ಕಿರಗುಟ್ಟಿ ಒದರುವದಿಲ್ಲವೇ? ಹಾಗೆಯೇ ನಮ್ಮ ಪರ್ವತ ರಾಜ್ಯದ ಸೈನ್ಯವು ಸಣ್ಣದಾದರೂ ಮಗಧ ರಾಜ್ಯದ ಪ್ರಚಂಡ ದಳವನ್ನು ಪ್ರಸ್ತುತದ ಕಾಳಗದಲ್ಲಿ ಪರಾಜಯಗೊಳ ಸದೆ ಬಿಡದೆಂದು ಅವಳ ಹೃದಯಸ್ಫೂರ್ತಿಯಾಗಿತ್ತು.

ಭೈರವನು ಎಷ್ಟು ನಿರುತ್ಸಾಹಗೊಳಿಸಿದರೂ ಅವಳು ಅಂತರಂಗದಲ್ಲಿ ಅಂಜದೆ, ಕೃತಸಂಕಲ್ಪದ ವಿಷಯವಾಗಿ ದೃಢಪ್ರತಿಜ್ಞಳಾದಳು. ಆಗಲವಳು ಭೈರವನನ್ನು ಕುರಿತು ಗಟ್ಟಿಯಾಗಿ:— ಭೈರವಾ, ಈಗ ನಾನು ನಿನ್ನ ಸಹಾ ಯವನ್ನು ಮಾತ್ರ ಕೋರುತ್ತೇನೆ; ನಿನ್ನ ಉಪದೇಶವನ್ನು ಬಯಸುವದಿಲ್ಲ ಈ ವಿಪತ್ತಿನಲ್ಲಿ ಹೇಗೆ ನಡೆಯಬೇಕೆಂಬದನ್ನು ಶ್ರೀ ಮಹಾಕಾಳನು ನನಗೆ ಪ್ರೇರಿಸಿರುತ್ತಾನೆ. ಬಾಲ್ಯಕಾಲದಿಂದಲೂ ನಾನು ಆ ಮಹಾದೇವನನ್ನು ಆರಾಧಿಸುತ್ತಿರುವೆನು. ನಾನು ಏನೇನು ಮಾಡುವೆನೋ ಅದೆಲ್ಲವೂ ಆತನ ಆದೇಶದಿಂದಲೇ, ಸಂಕಟ ಕಾಲದಲ್ಲಿ ಆತನು ನನ್ನ ಅಂತರಂಗದಲ್ಲಿ ಹೇಗೆ ಪ್ರೇರಿಸುವನೋ, ಹಾಗೆಯೇ ನಾನು ನಡೆಯುತಕ್ಕವಳು. ನಿನಗೆ ನಾನು ಯಾವ ಕೆಲಸವನ್ನು ಒಪ್ಪಿಸಿರುವೆನೋ, ನೀನು ಅದನ್ನಷ್ಟು ಮಾಡು. ನೀನು ಯಾವಾಗಲೂ ನೆನಪಿಡತಕ್ಕ ಮಾತೆಂದರೆ, ಅಂಥ ಇಕ್ಕಟ್ಟಿನ ಪ್ರಸಂಗ ಬಂದ ಹೊರತು, ನಾನು ನನ್ನ ಸಾವಿರ ಜನ ದಂಡಾಳುಗಳನ್ನು ರಣರಂಗಕ್ಕೆ ತರಲಿಚ್ಛಿಸುವದಿಲ್ಲೆಂಬದು. ಆದ್ದರಿಂದ ನೀನು ನಿನ್ನ ಕ್ಲೈಬ್ಯ ವೃತ್ತಿಯ ಲವಲೇಶವು ಕೂಡ ಆ ನನ್ನ ಪ್ರಿಯ ಸ್ವಯಂ ಸೇವಕರಿಗೆ ಸ್ಪರ್ಶ ಗೊಳಿಸದ ಹಾಗೆ ಎಚ್ಚರಪಡು.

ಹೀಗೆಂದು ಆಪ್ಪಣೆ ಮಾಡುವಾಗ ಮಂದಾಕಿನಿಯ ಕಣ್ಣುಗಳೊಳ

ಗಿಂದ ಕಿಡಿಗಳು ಹಾರುತ್ತವೆಯೋ-ಏನೋ ಎಂಬಂತೆ ಭಾಸವಾಗುತ್ತಿತ್ತು' ಭೈರವನು ಅದನ್ನು ನೋಡಿದನು ಮಾತ್ರ! ಅವನು ಮತ್ತೆ ಏನನ್ನೂ ಹೇಳದೆ, ಅವಳ ಆಜ್ಞೆಯ ಪ್ರಕಾರ ತನ್ನ ಕೆಲಸಕ್ಕೆ ತೆರಳಿದನು.

ಆ ಮಟಮಟ ಮಧ್ಯಾಹ್ನ ಕಾಲದಲ್ಲಿ ಚಿಂತಾಕ್ರಾಂತಳಾದ ಮಂದಾಕಿನಿಯು ಸಮೀಪದ ಗಭೀರ ಅರಣ್ಯವನ್ನು ಪ್ರವೇಶಿಸಿದಳು. ಒತ್ತಟ್ಟಿಗೆ ದುರ್ಭೇದ್ಯವಾದ ಕಟ್ಟೆಡವಿಯು; ಮತ್ತೊತ್ತಟ್ಟಿಗೆ ಗಗನಚುಂಬಿತವಾದ ಪರ್ವತವು ಆ ಪರ್ವತದ ಕಂಕುಳದೊಳಗೆ ಉಗಮವಾಗಿದ್ದ ಒಂದು ಪುಟ್ಟ ಜೀವಂತ ನೀರಿನ ಹಳ್ಳವು ಆ ಭೀಕರವಾದ ಅರಣ್ಯ ಮಧ್ಯದಲ್ಲಿ ಕುಲು ಕುಲು ಶಬ್ದ ಮಾಡುತ್ತ ಹರಿಯುತ್ತಿತ್ತು. ಆ ಸ್ಥಾನವು ಕೇವಲ ಜನ ಶೂನ್ಯವಾಗಿದ್ದರೂ, ಆ ಹಳ್ಳದ ಪ್ರವಾಹದ ಸಪ್ಪಳದ ಮೂಲಕ ಅಲ್ಲಿಯ ಶಾಂತತೆಗೆ ತುಸ ಭಂಗವುಂಟಾಗುತ್ತಿತ್ತು.

ಆ ಜನಶೂನ್ಯ ಹಾಗು ಪ್ರಶಾಂತ ಸ್ಥಳದಲ್ಲಿ ಮಂದಾಕಿನಿಯು ಒಂದು ಬಂಡೆಗಲ್ಲಿನ ಮೇಲೆ ಕುಳಿತಳು. ಬಳಿಕ ನಂತರ ಕಣ್ಣುಗಳಿಂದ ಅಶ್ರುಗಳು ಧಾರೆಗಟ್ಟಿ ಸುರಿಯುಹತ್ತಿದವು, ಬಳಿಕ ಅವಳು ಕೈಜೋಡಿಸಿ, ಆಕಾಶದ ಕಡೆಗೆ ನೋಡುತ್ತ, ಕರುಣಾವಾಣಿಯಿಂದ:—ದೇವಾಧಿದೇವನಾದ ಮಹಾ ಕಾಲನೇ, ಈ ಬಾಲಿಕೆಯು ಇದುವರೆಗೆ ಸ್ವಂತದ ವಿಷಯವಾಗಿ ನಿನ್ನನ್ನು ಎಂದೂ ಪ್ರಾರ್ಥಿಸಿರುವದಿಲ್ಲ. ನಿನ್ನ ಕೃಪೆಯಿಂದ ರಾಜಕನ್ಯೆಯಾಗಿ ಹುಟ್ಟಿ, ಎಲ್ಲ ಸುಖೋಪಭೋಗಗಳನ್ನೂ ಭೋಗಿಸಿದೆನು. ಆದುದರಿಂದ ದೇವಾ! ನಿನ್ನ ಬಳಿಯಲ್ಲಿ ನಾನು ಕೇಳಿಕೊಳ್ಳತಕ್ಕದ್ದೇನೂ ಉಳಿದಿರುವದಿಲ್ಲ; ಆದರೆ ಈಗ ಇದೊಂದು ಆಕಸ್ಮಿಕ ಸಂಕಟವು ನನಗೆ ಪ್ರಾಪ್ತವಾಗಿರುತ್ತದೆ. ಈ ನಿರ್ಜನ ಪರ್ವತದ ತಲೆಯ ಮೇಲೆ ಸುಖ ಶಾಂತಿಗಳಿಂದ ಕೂಡಿದ ಪ್ರಜೆಗಳ ಪ್ರೀತಿ, ಶ್ರದ್ಧೆ ಹಾಗು ಭಕ್ತಿಗಳನ್ನು ಆಕರ್ಷಿಸಿಕೊಂಡು, ಧನ-ಧಾನ್ಯಗಳಿಂದ ಸಮೃದ್ಧವಾದ ರಾಜ್ಯವು ಇದುವರೆಗೂ ನೆಲೆಗೊಂಡಿರುತ್ತದೆ. ದೇವಾ! ನಿನಗೆ ಈಗ ಪ್ರಾರ್ಥನೆ ಮಾಡಿಕೊಳ್ಳುವದಿಷ್ಟೇ; ಈ ನಮ್ಮ ಸುಖ-ಶಾಂತಿ ಗಳು ನಷ್ಟವಾಗದಿರಲಿ. ನಿಷ್ಠುರನೂ, ಪರಶ್ರೀಕಾಂಕ್ಷಿಯೂ ಆದ ಒಬ್ಬ ವ್ಯಾಧನು ನಮ್ಮ ಈ ಶಾಂತಿಮಯ ಗುಡಿಸಿಲವನ್ನು ತನ್ನ ಶೋಣಿತಪೂರ್ಣ ವಾದ ಅಸ್ತ್ರದಿಂದ ನಾಶಗೊಳಿಸಲಿಕ್ಕೆ ಹವಣಿಸತೊಡಗಿರುತ್ತಾನೆ. ಮಹಾ ದೇವಾ, ನಮ್ಮನ್ನು ಆತನ ಉಪಟಳದಿಂದ ಪಾರು ಮಾಡು. ಆ ಅತ್ಯಾ ಚಾರಪ್ರೇರಕ ಧನನಂದನ ತಲೆಯ ಮೇಲೆ ವಜ್ರವನ್ನು ಕೆಡಹು. ಆತನ ಸಂಪೂರ್ಣ ಮಗಧ ದೇಶವು ಆ ವಜ್ರಾಘಾತದಿಂದ ಪುಡಿ ಪುಡಿಯಾಗಿ

ಹೋಗಲಿ. ನಾನು ಸಹಸ್ರ ಸ್ವಯಂ ಸೇವಕರ ಮಾತೆಯು. ಭಗವಂತಾ, ಈ ನನ್ನ ಇಚ್ಛೆಯು ನಿನ್ನ ಕೃಪೆಯಿಂದ ಪರಿಪೂರ್ಣವಾಗಲಾರದೇ?

ಇದೇ ಕಾಲಕ್ಕೆ ಆ ವನಪ್ರದೇಶದ ಸಮೀಪಭಾಗದಿಂದ ಮಂದಾಕಿನಿಯು ನುಡಿದಂತೆಯೇ ನುಡಿದು, ಉಚ್ಚ ಕಂಠದಿಂದ:—"ಆಗುವದು, ನಿನ್ನ ಬಯಕೆಯು ಸಂಪೂರ್ಣವಾಗುವದು. ಮಗಧ ರಾಜ್ಯವು ಎಷ್ಟೇ ವಿಸ್ತೃತವಾಗಿದ್ದರೂ ಆದರ ಆ ಮದಾಂಧ ಸಾಮ್ರಾಟನು ಭಯಂಕರವಾದ ಪ್ರಲಯಾಗ್ನಿಗೆ ಆಹುತಿಯಾಗುವದರಲ್ಲಿರುತ್ತಾನೆ. ನಾವು ಅವನ ಆಹುತಿಯನ್ನು ಕೊಡದಿದ್ದರೆ, ದೇವತೆಗಳು ಅಸಂತುಷ್ಟರಾಗುವರು" ಎಂದು ಯಾರೋ ಉಚ್ಚರಿಸಿದರು

ಆ ಧ್ವನಿಯು ಅಡಗುವಷ್ಟರಲ್ಲಿ ಒಂದು ಸತೇಜ ಶರೀರದ. ಜುಟ್ಟಿಗಳನ್ನು ಕಟ್ಟಿದಿದ್ದ, ಪ್ರಸ್ಪಂದನಗಳಿಂದ ಶೋಭಿಪ ಲಲಾಟಪ್ರದೇಶದ ಸೌಮ್ಯದರ್ಶೀ ಬ್ರಾಹ್ಮಣ ಮೂರ್ತಿಯು ಅಲ್ಲಿಗೆ ಬಂದು ತಲುಪಿತು. ಅವನು ಮಂದಾಕಿನಿಯನ್ನು ಕುರಿತು:—"ಪ್ರತ್ಯಕ್ಷ ಭಗವತಿಯಂತೆ ರೂಪ-ಕಾಂತಿಗಳಿಂದ ಯುಕ್ತಳಾದ ನೀನು ಯಾರು? ಆದ್ಯಶಕ್ತಿಯಾದ ಮಹೇಶಮೋಹಿನೀ ರೂಪಿಣಿಯು ನೀನೇ ಏನು? ಕುಮಾರಿಯು ರೂಪ ತಾಳಿ, ನಿನ್ನ ಈ ಆಶಾಜನಕ ವಾಣಿಯಿಂದ ನನ್ನನ್ನು ಸಮಾಧಾನಗೊಳಿಸಲಿಕ್ಕೆ ಬಂದಿರುವೆಯಾ?" ಎಂದು ಪ್ರಶ್ನೆ ಮಾಡಿದನು.

ಕೂಡಲೆ ಹುಟ್ಟಾ ದೇವ-ಬ್ರಾಹ್ಮಣರ ಆದರಾತಿಥ್ಯದಲ್ಲಿ ವ್ಯೆಯುಂಡವಳಾದ ಮಂದಾಕಿನಿಯು ಆ ಬ್ರಾಹ್ಮಣನಿಗೆ ಸಾಷ್ಟಾಂಗ ಪ್ರಣಿಪಾತವಂಗೆಯ್ದಳು. ಆಗ ಆ ಆಗಂತುಕ ವಿಪ್ರನು ಆಕೆಯನ್ನು ಆಶೀರ್ವದಿಸಿ:—ಕಲ್ಯಾಣೀ, ನಿನ್ನ ಮನೋಬಯಕೆಯು ಪೂರ್ಣವಾಗಲೆಮ್ಮಾ! ರಾಜಕುಮಾರಿಯಾದ ನೀನು ಒಬ್ಬೊಂಟಿಗಳಾಗಿ ಈ ಅರಣ್ಯಮಧ್ಯದಲ್ಲಿ ಕುಳಿತಿರುವದನ್ನು ನೋಡಿ ನನಗೆ ಪರಮ ವಿಸ್ಮಯವಾಗುತ್ತದೆ.

ಮಂದಾಕಿನಿ:—ನಾನು ರಾಜಕುಲೋದ್ಭೂತಳೆಂಬದನ್ನು ತಾವು ತಿಳಿದ ಬಗೆ ಹೇಗೆ?

ಆಗಂತುಕ ವಿಪ್ರ:—ಸರ್ವಾಂತರ್ಯಾಮಿಯಾದ ಹೃಷೀಕೇಶನೇ ಅದನ್ನು ನನಗೆ ತಿಳಿಸಿದವನು; ಹಾಗು ಯಾವ ವಿಷಯವಾಗಿ ನೀನು ಈ ನಿರ್ಜನಾರಣ್ಯದಲ್ಲಿ ಆಲೋಚಿಸುತ್ತ ಕುಳಿತಿರುವೆಯೆಂಬದು ಆತನ ಪ್ರೇರಣೆಯಿಂದಲೇ ನನಗೆ ವಿದಿತವಾಯಿತು.

ಮಂದಾಕಿನಿ:—ಮಹಾತ್ಮನ್, ಇದುವರೆಗೆ ನಾನು ಯಾವ ವಿಷಯ

ವಾಗಿ ಆಲೋಚಿಸುತ್ತಿದ್ದೆನು.

ಆಗುಂತಕ ವಿಪ್ರ:— ಮಾತೆಯೇ, ಕೇಳು; ನನ್ನಂತೆ ನೀನೂ ಮಗಧ ರಾಜನಾದ ಧನನಂದನ ಧ್ವಂಸಕಾಮನೆಯನ್ನು ಮಾಡುತ್ತಿದ್ದೆ. ನಿನ್ನ ಹಾಗೂ ನನ್ನ ಉದ್ದೇಶಗಳು ಒಂದೇವರ್ಗದವು. ಜನನೀ, ಈ ಕಾರ್ಯದಲ್ಲಿ ನಿನಗೆ ಶಕ್ತಿಮೀರಿ ಸಹಾಯ ಮಾಡುತ್ತೇನೆ. ಬ್ರಾಹ್ಮಣನ ಅಭಿಶಾಪದೊಡನೆ ಸತಿಯ ದೀರ್ಘನಿಶ್ವಾಸವು ಮಿಶ್ರವಾಯಿತೆಂದರೆ, ಅದರಿಂದ ಯಾವ ಪ್ರಚಂಡ ಪ್ರಲಯಾಗ್ನಿಯು ಉತ್ಪನ್ನವಾಗುವದೋ, ಅದರಲ್ಲಿ ಆ ನಂದರಾಜ್ಯವು ಸಮೂಲ ಧ್ವಂಸವಾಗಿ ಹೋಗುವದು.

ಮಂದಾಕಿನಿ:- ತಮ್ಮ ಈ ಚಂದನ ಚರ್ಚಿತ, ತ್ರಿನಾಮಧಾರಿ, ವಿಶಾಲ ವಾದ ಭಾಲಪ್ರದೇಶವನ್ನು ನೋಡಿದೊಡನೆ ತಾವು ಪ್ರತಿಭಾಸಂಪನ್ನರೆಂಬದು ತಟ್ಟನೆ ಹೊಳೆಯುತ್ತದೆ. ತಮ್ಮ ಸುತೀಕ್ಷ್ಣ ದೃಷ್ಟಿಯಿಂದಲೇ ತಾವು ತತ್ವದರ್ಶಿಗಳೆಂದು ಗೊತ್ತಾಗುತ್ತದೆ. ಮಾನವರ ಹೃದಯದ ಅಂತಸ್ಥಳದ ವರೆಗೂ ತಮ್ಮ ಈ ಮರ್ಮಭೇದಕ ದೃಷ್ಟಿಯು ಪಸರಿಸುತ್ತದೆ. ಹಾಗಿ ಲ್ಲದಿದ್ದರೆ ತಮಗೆ ನನ್ನ ಅಂತರಂಗದ ವಿಷಯವು ಗೊತ್ತಾಗುವ ಬಗೆ ಹೇಗೆ? ಭೂಸುರರೇ, ಈ ಅಭಾಗಿನಿಗೆ ತಾವು ಯಾರೆಂಬದನ್ನು ತಿಳಕೊಳ್ಳುವ ಅಧಿ ಕಾರವಿಲ್ಲವೆ?

ಆಗಂತುಕನು:—ತಾಯಿ, ನನ್ನ ಹೆಸರು ಚಾಣಕ್ಯನು. ನಾನು ಅತ್ಯಂತ ದರಿದ್ರನು; ಆದರೆ ಶಾಸ್ತ್ರಾಧ್ಯಯನ ಮಾಡಿದ ಬ್ರಾಹ್ಮಣನು. ಬಲ ದರ್ಪಗಳಿಂದ ದರ್ಪಿತನೂ, ಐಶ್ವರ್ಯದಿಂದ ಮದೋನ್ಮತ್ತನೂ ಆಗಿರುವ ಮಗಧ ದೇಶದ ಸಮ್ರಾಟ್ ಧನನಂದನು ತನ್ನ ಮೂರ್ಖತನದಿಂದ ತನ್ನ ತಂದೆಯ ಶ್ರಾದ್ಧದ ದಿವಸ ತುಂಬಿದ ರಾಜಸಭೆಯಲ್ಲಿ ವಿನಃಕಾರಣ ನನ್ನನ್ನು ಅಪಮಾನಗೊಳಿಸಿದನು. ಅದಕ್ಕೋಸ್ಕರ ನಾನು ಆ ಧನನಂದನನ್ನೂ ಆತನ ಮಗಧ ರಾಜ್ಯವನ್ನೂ ಧ್ವಂಸಗೊಳಿಸಲು ದೃಢಪ್ರತಿಜ್ಞೆ ಮಾಡಿರು ತ್ತೇನೆ. ಕಠೋರವಾದ ಪ್ರತಿಜ್ಞಾಪಾಶದಿಂದ ಬಿಗಿಯಲ್ಪಟ್ಟ ನಾನು, ಕೂಡಿದ ಆ ಸಭೆಯಲ್ಲಿ ಈ ಧನನಂದನನ್ನು ಧ್ವಂಸಗೊಳಿಸಿದ ವಿನಃ ನಾನು ಮಗಧ ರಾಜ್ಯದಲ್ಲಿ ಪುನಃ ಕಾಲಿಡಲಿಕ್ಕಿಲ್ಲೆಂದು, ಪ್ರತಿಜ್ಞೆ ಮಾಡಿರುತ್ತೇನೆ. ಗಾಯತ್ರೀ ಜಪ-ತಪದಿಂದಲೂ, ಹೋಮಾದಿ ಅನುಷ್ಠಾನಗಳಿಂದಲೂ, ಮಂತ್ರ-ತಂತ್ರಗಳ(ಅಭಿಚಾರ)ವಿಧಿಯಿಂದಲೂ ನಾನು ಆ ನೃಪಕುಲಕಲಂಕ ನನ್ನು ಕೂಡಲೆ ಕೊಲ್ಲಲು ಯತ್ನಿಸಬಹುದಾಗಿತ್ತು; ಅಲ್ಲದೆ ಚಾಟ ಮಾಟ ಮೊದಲಾದ ಸಾಂಘಾತಿಕ ತಂತ್ರಗಳಿಂದಲೂ ನಾನು ಅವನನ್ನು ಕೊಲ್ಲಬಹು

ದಾಗಿತ್ತು; ಆದರೆ ಆ ರೀತಿಯು ಬಲು ಕಠೋರವಾಗಿದ್ದು, ಹಾಗೆ ಮಾಡ ಲಿಕ್ಕೆ ನನ್ನ ಇಚ್ಛೆಯಿಲ್ಲ; ಮತ್ತು ಕೇವಲ ಅವನೊಬ್ಬನನ್ನೇ ಕೊಲ್ಲುವದು ನನ್ನ ಅಭಿಪ್ರಾಯವಿರುವದಿಲ್ಲ ಸಮಗ್ರ ಮಗಧ ರಾಜ್ಯವನ್ನೂ ಆತನಿಂದ ಚ್ಯುತಗೊಳಿಸಿ, ಅದನ್ನು ಬೇರೊಬ್ಬ ಯೋಗ್ಯನಾದವನಿಗೆ ಸಮರ್ಪಿಸಬೇ ಕೆಂಬುವದೇ ನನ್ನ ಇಚ್ಛೆಯು. ಆದ್ದರಿಂದ ಕ್ಷಣಕ್ಷಣಕ್ಕೆ, ಮಾತುಮಾತಿಗೆ ಅಧರ್ಮರತ ಹಾಗು ಅತ್ಯಾಚಾರಪ್ರೇರಕನಾದ ಆ ಧನನಂದನ ಶಕ್ತಿ ಪಾತಗೊಳಿಸಲಿಕ್ಕೆ ನಾನು ಬಯಸುತ್ತೇನೆ ನನ್ನ ಈ ಪ್ರತಿಜ್ಞೆಯು ಈಡೇ ರುವದೋ-ಇಲ್ಲವೋ ಎಂಬದನ್ನು ತಾಯೇ, ನಾನರಿಯೆನು

ಆ ಆಗಂತುಕ ವಿಪ್ರನಾರೆಂಬದನ್ನು ತಿಳಿದ ಬಳಿಕ ಮಂದಾಕಿನಿಯು ಪುನಃ ಆ ಚಾಣಕ್ಯನ ಅಡಿದಾವರೆಗೆರಗಿದಳು. ನಂತರ ಅವಳು ಆನಂದೋ ಜ್ವಲ ಮುಖದಿಂದಲೂ ಆಶಾಪೂರ್ಣ ಚಿತ್ತದಿಂದಲೂ:—ಕುಮಾರಿಯರ ಹೃದಯಪೂರ್ವಕ ಪ್ರಾರ್ಥನೆಯನ್ನು ಭಗವಂತನು ಪರಿಪೂರ್ಣ ಮಾಡು ತ್ತಿರುತ್ತಾನೆಂದು ಶಾಸ್ತ್ರವಚನಗಳಲ್ಲಿ ಹೇಳಿದೆಯೆಂದು ಕೇಳಿದ್ದೇನೆ. ಅದರ ಪ್ರತ್ಯಕ್ಷ ಪ್ರಮಾಣವು ಇಂದು ನನಗೆ ಗೋಚರವಾದಂತಾಯಿತು.

ಚಾಣಕ್ಯ:—ಅದು ಹೇಗೆ?

ಮಂದಾಕಿನಿ:–ಈ ನಿರ್ಜನವಾದ ಘೋರಾರಣ್ಯದಲ್ಲಿ ಶಕ್ತಿಸಂಪನ್ನ ರೂ, ಪ್ರತಿಭಾವಾನರೂ, ರಾಜನೀತಿ ವಿಶಾರದರೂ, ಬ್ರಾಹ್ಮಣರೂ, ಪಂಡಿ ತರೂ ಆಗಿರುವ ತಮ್ಮಂಥವರ ದರ್ಶನವಾದದ್ದೇ ಅದಕ್ಕೆ ಮೊದಲನೇ ಪ್ರಮಾಣವು ಮಗಧ ರಾಜ್ಯವನ್ನು ಧ್ವಂಸಗೊಳಿಸುವ ಸಂಬಂಧದಲ್ಲಿ ನನ್ನ ಹಾಗು ತಮ್ಮ ವಿಚಾರಗಳು ಒಂದೇ ಆಗಿರುವದು ಎರಡನೇ ಪ್ರಮಾಣವು. ತಮ್ಮ ವಿಚಕ್ಷಣ ರಾಜನೀತಿಯು ಹಾಗು ಅಗಾಧವಾದ ಶಾಸ್ತ್ರಜ್ಞಾನದ ಸಂಗತಿಯನ್ನು ಈ ಮೊದಲೇ ನಾನು ನಮ್ಮ ಶಕಟಾರ ಮಂತ್ರಿಯಿಂದ ಎಷ್ಟೋ ಸಾರೆ ಕೇಳಿ ತಿಳಿದಿದ್ದೇನೆ. ಇಂದು ಆ ತಮ್ಮ ಪಾದ-ಕಮಲಗಳನ್ನು ಸಂದರ್ಶಿಸಿ ಧನ್ಯಳಾದೆನು.

ಚಾಣಕ್ಯ:—ಶಕಟಾರನು ನಿಮ್ಮಲ್ಲಿರುವದು ಇನ್ನೂ ಆ ಧನನಂದನಿಗೆ ಗೊತ್ತಾಗಿರುವದಿಲ್ಲ. ಗೊತ್ತಾಗಿದ್ದರೆ, ಆತನು ಆಕಾಶ-ಪಾತಾಳಗಳು ಕಲಕುವ ಹಾಗೆ ಗರ್ಜಿಸುತ್ತಿದ್ದನು. ನಿಮ್ಮಲ್ಲಿರುವ ಚಂದ್ರಗುಪ್ತನ ಸಲು ವಾಗಿಯೇ ಈಗ ಆತನು ನಿಮ್ಮ ರಾಜ್ಯದ ಮೇಲೆ ದಂಡೆತ್ತಿ ಬರುವನು.

ಮಂದಾಕಿನಿ:—ತಾವು ಊಹಿಸಿದ್ದು ಸತ್ಯವು ನಮ್ಮ ಆಶ್ರಯ ವನ್ನು ಪಡೆದಿರುವ ಚಂದ್ರಗುಪ್ತನನ್ನು ನಾವು ಆತನಿಗೆ ಒಪ್ಪಿಸದಿರುವದೇ

ಮಹದಪರಾಧವಾಗಿದೆ; ಮತ್ತು ಈ ಸಾಮಾನ್ಯ ಮಾತಿಗಾಗಿಯೇ ಆತನು ನಮ್ಮ ರಾಜ್ಯವನ್ನು ಮಣ್ಣುಗೂಡಿಸುವ ಸಂಕಲ್ಪವನ್ನು ಮಾಡಿರುವನಂತೆ! ನಮ್ಮ ವೃದ್ಧ ಸೇನಾಪತಿಯಾದ ಭೈರವನು ನನಗೆ ತಿಳಿಸಿದ್ದೇನಂದರೆ, ಮಾಗಧೀ ಸೇನೆಯು ತಂಡ-ತಂಡಾಗಿ ಈ ನಮ್ಮ ಪರ್ವತರಾಜ್ಯದ ಸುತ್ತು ವರೆಯಲು ಮುಂದೊರೆಯುತ್ತಿರುವದಂತೆ; ಇನ್ನೊಂದು ವಾರದೊಳಗಾಗಿ ಅವರು ನಮ್ಮ ರಾಷ್ಟ್ರವನ್ನು ಆಕ್ರಮಿಸಿ, ಉಚ್ಛೇದಗೊಳಿಸುವವರಿದ್ದಾರಂತೆ

ಚಾಣಕ್ಯ:—ತಾಯಿ, ಯಾರ ನಾಶವನ್ನು ಯಾರು ಮಾಡತಕ್ಕವರು? ಉಚ್ಛೇದ ಮಾಡುವವನು ಆ ಭಗವಂತನೊಬ್ಬನೇ. ಆತನ ಸಾಮಾನ್ಯ ಇಚ್ಛೆಯಿಂದ ಈ ವಿರಾಟ್‌ಸ್ವರೂಪವಾದ ವಿಶ್ವವು ಮುಹೂರ್ತ ಮಾತ್ರದಲ್ಲಿ ಮಹಾಪ್ರಲಯದಲ್ಲಿ ಲಯವಾಗಿ ಹೋಗುವದು. ಧರ್ಮ ಹಾಗು ಅಧ ರ್ಮಗಳಿಗೆ ಯುದ್ಧವಾದರೆ, ಆ ಯುದ್ಧದಲ್ಲಿ ಧರ್ಮವೇ ಜಯವಾಗುವ ದೆಂಬ ಮಾತನ್ನು ಎಂದೂ ಮರೆಯಬೇಡ. ಸಮನೆಲದ ಮೇಲೆ ಎದುರು ಬದರಾಗಿ ನಿಂತು ಯುದ್ಧ ಮಾಡುವದಕ್ಕೂ, ಸಮನೆಲದ ಮೇಲೆ ನಿಂತು ಯುದ್ಧಮಾಡುವವರನ್ನು ಗುಡ್ಡ-ಗಿರಿಗಳ ಮರೆಯಲ್ಲಿ ನಿಂತು ಎದುರಾಗುವ ದಕ್ಕೂ ಎಷ್ಟೋ ಅಂತರವಿದೆ. ಮಗಧಾಧಿಪನು ಸೈನ್ಯದಿಂದ ಬೇಕಾದಷ್ಟು ಪ್ರಬಲನಿರಲಿ, ನಮ್ಮ "ಗನೀಮೀ ಕಾವಾ" (ಮರೆಗೆ ನಿಂತು ಯುದ್ಧ ಮಾಡುವ) ಪದ್ಧತಿಯು ಮುಂದೆ ಆತನ ದಂಡು ನಿಂತರೆ ಕೇಳು; ಬಹಳ ಮಾತಾಡುವದರಲ್ಲೇನು ಅರ್ಥವಿದೆ? ಧರ್ಮವೆಂಬುದು ಸತ್ಯವಾಗಿದ್ದರೆ ತಾಯಿ, ಈ ಯುದ್ಧದಲ್ಲಿ ನಿಮಗೆ ನಿಶ್ಚಯವಾಗಿ ಜಯವಾಗುವದು.

ಮಂದಾಕಿನಿಯು ಹರ್ಷದಿಂದ:—ಸ್ವಸ್ತಿ! ಭೂದೇವ, ತಮ್ಮ ವಚನ ದಂತೆಯೇ ಆಗಲಿ. ತಾವು ಯೋಗಾಚಾರ ಸಿದ್ಧಪುರುಷರೆಂದು ನಾನು ನನ್ನ ಅಣ್ಣನಿಂದ ತಿಳಿದಿರುವೆನು. ತಮ್ಮಂಥ ಶಕ್ತಿವಂತ ಬ್ರಾಹ್ಮಣರಿಂದ ಅರ್ಪಿಸಲ್ಪಟ್ಟ ಹವಿರ್ಭಾಗದಿಂದ ದೇವತೆಗಳು ಕೂಡ ತೃಪ್ತಿಯನ್ನು ಪಡೆ ಯುತ್ತಾರೆ. ತಮ್ಮ ಶ್ರೀಮುಖದಿಂದ ಹೊರಟ ವಾಣಿಯು ಎಂದಿಗೂ ವ್ಯರ್ಥವಾಗಲಾರದು, ಎಂದು ನುಡಿದು, ಆಶಾಪ್ರಫುಲ್ಲಿತ ಚಿತ್ತದಿಂದ ಮಂದಾಕಿನಿಯು ಕೃತಜ್ಞತಾವಶಳಾಗಿ, ಮತ್ತೆ ಚಾಣಕ್ಯನ ಅಡಿದಾವರೆಗೆ ಪೊಡಮಟ್ಟಳು. ಚಾಣಕ್ಯನು ಅವಳನ್ನು ಆಶೀರ್ವದಿಸಿ;—ನೀನು ಕುಮಾ ರಿಯು. ನಿನ್ನ ಸಹೋದರನು ನಿಷ್ಠಾವಂತನೂ, ಧರ್ಮ ಪರಾಯಣನೂ ಆದ ಕ್ಷತ್ರಿಯ ಭೂಪತಿಯು. ತಾಯಿ, ನಿನ್ನ ವಿಷಯವಾಗಿ ಈಗ ನನಗುಂಟಾ ಗಿರುವ ಸಂಶಯವನ್ನು ಆಡಿ ತೋರಿಸಿದರೆ, ನಿನಗೆ ಸಿಟ್ಟು ಬಂದೀತಲ್ಲವೆ?

ಚಾಣಕ್ಯನ ಈ ಬಹು ಮಾರ್ಮಿಕ ವಾಕ್ಯವನ್ನು ಕೇಳಿ, ಮಂದಾಕಿನಿಯಿಂದ ಅವನಿಗೆ ಉತ್ತರ ಕೊಡುವ ಸಾಹಸವೂ ಕೂಡ ಆಗದಾಯಿತು. ಕ್ಷಣ ಕಾಲ ವಿಚಾರಗ್ರಸ್ತಳಾದ ನಂತರ, ಇಂಥ ನಿಸ್ಪೃಹ ಬ್ರಾಹ್ಮಣನಿಗೆ ನನ್ನ ವಿಷಯಕವಾದ ಯಾವ ಆಶಂಕೆಯು ಪ್ರಾಪ್ತವಾಗಿರಬಹುದು? ಈತನನ್ನೇ ಕೇಳಿ ತಿಳಿಯಬೇಕೆಂದು ಯೋಚಿಸಿ, ಮುಗುಳುನಗೆಯಿಂದ:—ತಾವು ನನ್ನನ್ನು ತಾಯಿ ಎಂದು ಸಂಬೋಧಿಸಿರುವಿರಾದುದರಿಂದ ನನ್ನ ಬಳಿಯಲ್ಲಿ ತಮ್ಮ ಸಂಶಯಗಳನ್ನು ತಿಳಿಸಲಿಕ್ಕೆ ಅನುಮಾನವೇಕೆ? ತಮ್ಮಂಥ ದಿಗ್ವಿಜಯಿ ಪಂಡಿತರ ಮಾತೃರೂಪಿಣಿಯಾದ ನನ್ನ ಬಳಿಯಲ್ಲಿ ಯಾವ ಸಂದೇಹವನ್ನೂ ವಹಿಸಬೇಡಿರಿ. ತಾಯಿಗೆ ತಿಳಿಸದೆ ಇದ್ದಂಥ ಅದಾವ ಸಂಶಯವು ಮಗನಿಗೆ ಬಡಿಕೊಳ್ಳುವುದು? ಭಗವತ್ ಕೃಪೆಯಿಂದ ತಮ್ಮಂತಹ ವಿಚಕ್ಷಣರನ್ನು ಅನಾಯಾಸವಾಗಿ ಪಡೆದು, ನಾನು ಪರಮ ಧನ್ಯಳಾಗಿರುವೆನು ತಮ್ಮ ಸಂಶಯ ನಿವಾರಣವಾದ ನಂತರ ತಾವು ಒಮ್ಮೆ ನಮ್ಮ ಬೀಡಾರಕ್ಕೆ-ಪರ್ವತೇಶನ ಅರಮನೆಗೆ-ಬರಬೇಕೆಂದೂ, ತಮ್ಮ ಬ್ರಾಹ್ಮಣರ ಪಾದ ಧೂಳಿಯಿಂದ ನಮ್ಮನ್ನೂ ನಮ್ಮ ನಿವಾಸ ಸ್ಥಾನವನ್ನೂ ಪವಿತ್ರವನ್ನಾಗ ಮಾಡಬೇಕೆಂದೂ ನಾನು ಬಯಸುತ್ತೇನೆ. ತಮ್ಮ ಆಗಮನದಿಂದ ನಮ್ಮಗಳ ವಿಜಯಾಕಾಂಕ್ಷೆಯು ಮತ್ತಿಷ್ಟು ಫಲದ್ರೂಪವಾಗುವದೆಂದು ನನ್ನ ದೃಢ ನಂಬಿಗೆಯಾಗಿದೆ.

ಚಾಣಕ್ಯ: –ನೀನನ್ನುವದೆಲ್ಲವೂ ಸತ್ಯವು; ಆದರೆ ತಾಯಿ, ನಾನು ಮೊದಲು ಒಂದು ಸಂಗತಿ ತಿಳಿಯಬೇಕಾಗಿದೆ.

ಮಂದಾ: —ಅದಾವ ಸಂಗತಿ?

ಚಾಣಕ್ಯ:—ನೀನು ಈ ಬಂಡೆಗಲ್ಲ ಮೇಲೆ ಕುಳಿತು ಈ ಮೊದಲು ಏನೇನು ಮಾತಾಡಿದೆಯೋ ಅದೆಲ್ಲವನ್ನೂ ನಾನು ಮರೆಗೆ ನಿಂತು ಕೇಳಿರುತ್ತೇನೆ. ಅದರಲ್ಲ ನೀಡು "ನಾನು ಸಹಸ್ರ ಜನ ಸ್ವಯಂ ಸೇವಕರ ಜನನಿ" ಎಂದು ಅಂದೆ. ಈ ಮಾತಿನ ಅರ್ಥವು ನನಗೆ ಇದುವರೆಗೂ ತಿಳಿಯಲಿಲ್ಲ. ಪರ್ವತ ರಾಜನಾದ ಮಲಯಕೇತುವಿನ ದಂಡು ಒಂದೇ ಒಂದು ಸಾವಿರ ಇರುವದೇನು?

ಮಂದಾಕಿನಿ:—ಅಲ್ಲಪ್ಪಾ— ಹಾಗಲ್ಲ. ಇಪ್ಪತ್ತೈದು ಸಾವಿರ ಮಂದಿ ವೇತನ ಭೋಗಿ ದಂಡಾಳುಗಳನ್ನು ರಾಜ್ಯ ರಕ್ಷಣೆಗಾಗಿ ನಮ್ಮ ಅಣ್ಣನು ನಿಯಮಿಸಿರುತ್ತಾನೆ. ನಾನು ಉಚ್ಚರಿಸಿದ ಆ ಸಹಸ್ರ ಸಂಖ್ಯಾಕ ಸ್ವಯಂ ಸೇವಕರ ವಿಷಯವು ಬೇರೆಯೇ ಇದೆ. ನಮ್ಮಣ್ಣನಿಗೆ ತಿಳಿಯದ ಹಾಗೆ ಪ್ರಸ್ತು

ತದ ಯುದ್ಧಪ್ರಸಕ್ತಿ ಅಡಚಣಿಯ ಸಮಯಕ್ಕೆ ಉಪಯೋಗಬೀಳಲಿಕ್ಕೆಂದು ಒಂದು ಸಹಸ್ರಮಂದಿ ಸ್ವಯಂ ಸೇವಕರ ತಂಡವೊಂದನ್ನು ನಾನು ನಿರ್ಮಿಸಿರುವೆನು. ಅವರು ಸಂಬಳದ ಆಳುಗಳಲ್ಲ; ತಮ್ಮ ಮನೆಗೆಲಸಗಳನ್ನು ಮಾಡಿಕೊಂಡಿರುವ ಗ್ರಾಮ ನಿವಾಸಿಗಳು. ಅವರಿಗೆ ಕವಾಯಿತು ಮೊದಲಾದ ದಂಡಿನ ಶಿಕ್ಷಣವನ್ನು ಕೊಡಿಸಿ ಸಿದ್ಧಗೊಳಿಸಿರುತ್ತೇನೆ, ಅವರೆಲ್ಲರೂ ಗುರಿ ಹೊಡೆಯುವವರಲ್ಲಿ ಒಳ್ಳೇ ನಿಪುಣರಿರುತ್ತಾರೆ. ಪ್ರಸಂಗ ಒದಗಿದಾಗ ನಾನು ಅವರನ್ನು ಕಾಳಗ ಮಾಡಲಿಕ್ಕೆ ನಿಯೋಜಿಸಬೇಕೆಂದು ನಿಶ್ಚಯಿಸಿರುತ್ತೇನೆ. ನನ್ನ ಅಣ್ಣನಿಗೆ ಈ ವಿಷಯವನ್ನು ತಿಳಿಸಿದರೆ, ಆತನು ಉಪಹಾಸ ಮಾಡಬಹುದೆಂದು ಊಹಿಸಿ, ಇದುವರೆಗೂ ನಾನು ಈ ಸಂಗತಿಯನ್ನು ಆತನಿಗೆ ತಿಳಿಸಿರುವದಿಲ್ಲ; ಆದರೆ ನಮ್ಮ ಪರಮ ಆಪ್ತನಾದ ಕುಮಾರ ಚಂದ್ರಗುಪ್ತನಿಗೆ ಈ ಬಗ್ಗೆ ಒಮ್ಮೆ ನಾನು ತಿಳಿಸಲಿಕ್ಕೆ ಹೋಗಲು, ಆತನು ನನ್ನ ಮಾತಿನ ಕಡೆಗೆ ಅಷ್ಟೊಂದು ಲಕ್ಷ್ಯಗೊಡಲಿಲ್ಲ. ಆದರಿಂದ ನನಗೆ ಮಾನಭಂಗ ಹತವಾದಂತಾಯಿತು. ನನ್ನಂಥ ಅಬಲೆಯಿಂದ ರಚಿಸಲ್ಪಟ್ಟ ಈ ಸೇನಾದಳದ ಬಗ್ಗೆ ಅವನಿಗೆ ಮಹತ್ವವೆನಿಸದ್ದರಿಂದಲೇ ಆತನು ನನ್ನನ್ನು ಹಾಗೆ ಉಪೇಕ್ಷಿಸಿರಬಹುದೆಂದು ತಿಳಿದುಕೊಂಡಿದ್ದೇನೆ

ನಗೆ ಮೊಗದಿಂದ ಚಾಣಕ್ಯನು:—ಮಾತೃ ಗೌರವವನ್ನು ವೃದ್ಧಿಗೊಳಿಸಲು ಪ್ರಯತ್ನಿಸುವುದೇ ಪ್ರತಿಯೊಬ್ಬ ಪುತ್ರನ ಆದ್ಯ ಕರ್ತವ್ಯವಾಗಿರುತ್ತದೆ ನಾನು ಯಾವಾಗ ನಿನ್ನನ್ನು ತಾಯಿಯೆಂದು ಸಂಬೋಧಿಸಿರುವೆನೋ, ನನ್ನ ಯಾವ ಕೃತಿಯಿಂದ ನಿನಗೆ ಸಂತೋಷವಾಗುವದೋ ಅದೇ ಕೆಲಸವನ್ನೇ ನಾನು ಮಾಡತಕ್ಕವನು. ತಾಯಿ, ಈಗ ನಾನು ನಿನ್ನೆದುರಿಗೆ ಪ್ರಮಾಣ ಮಾಡಿ ಹೇಳುವದೇನಂದರೆ,--ನೀನು ಯಾವ ಸಹಸ್ರ ಸಂಖ್ಯಾಕ ಸ್ವಯಂ ಸೇವಕರನ್ನು ಕೂಡಿಸಿರುವೆಯೋ, ಅದೇ ಆ ಅಲ್ಪ ಸೈನ್ಯದ ಸಹಾಯದಿಂದಲೆ ನಾನು ಮಾಗಧೀಯರ ಆ ಪ್ರಚಂಡವಾದ ದಂಡನ್ನು ಮಹಾ ವಿಪತ್ತಿಗೊಳಪಡಿಸುವೆನು; ಆದರೆ ಯಾವ ಪ್ರಕಾರದಿಂದ ನಾನು ಅದನ್ನು ವಿಪತ್ತಿಗೆ ಒಳಪಡಿಸುವೆನೆಂಬದನ್ನು ಈಗಲೆ ನಿನಗೆ ತಿಳಿಸಲಾರೆನು, ಪ್ರತ್ಯಕ್ಷ ಕಾರ್ಯ ಮಾಡಹತ್ತಿದ ನಂತರ ಆದರ ಯೋಜನೆಯನ್ನು ಮಾಡಲಿಕ್ಕೆ ಶಕ್ಯವಾಗುವದು. ತಾಯಿ, ನಿನ್ನಂತಹ ಶಕ್ತಿರೂಪಿಣಿಯಾದ ರಮಣಿಯ ಶಕ್ತಿ ಎಂಥ ಪ್ರಚಂಡವಾಗಿರುವದೆಂಬದನ್ನು ಈಗ ನಿನ್ನನ್ನು ಉಪೇಕ್ಷಿಸಿದವರ ನಿದರ್ಶನಕ್ಕೆ ನಾನು ಚನ್ನಾಗಿ ತಂದುಕೊಡದಿರಲಾರೆನು.

ಚಾಣಕ್ಯನ ಈ ನುಡಿಗಳನ್ನು ಕೇಳಿ ಮಂದಾಕಿನಿಗೆ ಅತ್ಯಂತ ಹರುಷ

ವಾಯಿತು. ಆಗ ಅವಳು ಆತನನ್ನುದ್ದೇಶಿಸಿ:—ಹಾಗಾದರೆ ಇನ್ನು ನೀವು ನಮ್ಮ ಪಟ್ಟಣಕ್ಕೆ ನಡೆಯಿರಿ. ತಮ್ಮ ಚರಣರೇಣು ಸ್ಪರ್ಶದಿಂದ ನಮ್ಮಗಳ ನಗರವು ಪುನೀತವಾಗಲಿ! ಎಂದಂದಳು.

ಚಾಣಕ್ಯ:—ತಾಯಿ, ನಡೆ ಕೆಲವು ದಿವಸಗಳ ಮುಂಚೆ ಕಪಟಕನ ಸಲುವಾಗಿ ನಾನು ನಿಮ್ಮಲ್ಲಿಗೆ ಬಂದಾಗ, ಅಂದು ಇದ್ದು ಹೋಗಬೇಕೆಂದು ನಿಮ್ಮ ಅಣ್ಣನು ಅತ್ಯಂತ ಆಗ್ರಹ ಮಾಡಿದ್ದನು; ಆದರೆ ಆ ದಿವಸ ನನಗೆ ನನ್ನ ಬೇರೆ ಕಡೆಯ ಯಜಮಾನ ಕೃತ್ಯಕ್ಕೆ ತೆರಳಬೇಕಾಗಿದ್ದುದರಿಂದ ನಿಲ್ಲುವ ದಾಗಲಿಲ್ಲ. ಇನ್ನೊಮ್ಮೆ ಅಗತ್ಯವಾಗಿ ಬರುತ್ತೇನೆಂದು ನಿಮ್ಮ ಅಣ್ಣನೆದುರು ನಾನು ಆಗಲೇ ವಚನಬದ್ಧನಾಗಿರುತ್ತೇನೆ. ಇಂದು ಆ ಯೋಗವು ಅನಾಯಾಸವಾಗಿಯೇ ಬಂದಂತಾಯಿತೆನ್ನಬೇಕು.

ಚಾಣಕ್ಯನಿಗೆ ದಾರಿಯನ್ನು ತೋರಿಸಲು ಹೊರಟಿರುವ ತೆರದಿಂದ ಮಂದಾಕಿನಿ ಮುಂದೆ ಮುಂದೆ ನಡೆದಳು. ಚಾಣಕ್ಯ ಮುನಿಯು ಅವಳನ್ನನುಸರಿಸಿ ಸಾಗಿದನು. ಆಗಿನ ಅವರ ಆ ಪ್ರಯಾಣವನ್ನು ಕುರಿತು ಆಲೋಚಿಸಿದರೆ, ಪ್ರತಿಭೆಯು ಜ್ಞಾನಕ್ಕೆ ಮಾರ್ಗ ತೋರಿಸುತ್ತ ನಡೆದಿದೆಯೆಂಬಂತೆಯೂ, ಗಾಯಿತ್ರಿಯು ಬ್ರಹ್ಮತೇಜಸ್ಸನ್ನು ಆಕರ್ಷಿಸಿಕೊಂಡು ಹೋಗುತ್ತಿರುವಂತೆಯೂ ತೋರುತ್ತಿತ್ತು

ಚಾಣಕ್ಯನು ಆಕಸ್ಮಿಕವಾಗಿ ಹೋಗಿ ರಾಜಸಭೆಯಲ್ಲಿ ಕುಳಿತಿದ್ದ ಮಲಯಕೇತುವನ್ನುದ್ದೇಶಿಸಿ:—"ಪರ್ವತೇಶ ಮಲಯಕೇತು ಮಹಾರಾಜರಿಗೆ ಜಯವಾಗಲಿ" ಎಂದು ಹರಸಿದನು.

ಅಲ್ಲಿ ಆಗ ಚಂದ್ರಗುಪ್ತ, ಮಲಯಕೇತು ಮತ್ತು ಶಕಟಾರ ಈ ಮೂವರೂ ಕೂಡಿ ಯಾವುದೋ ಒಂದು ವಿಷಯವನ್ನು ಆಲೋಚಿಸುತ್ತಿದ್ದರು ತಮ್ಮೆದುರಿಗೆ ಆಕಸ್ಮಿಕವಾಗಿ ಬಂದು ನಿಂತ ಚಾಣಕ್ಯನನ್ನು ಕಂಡು ಅವರೆಲ್ಲ ಸ-ಸಂಭ್ರಮದಿಂದ ಎದ್ದು ನಿಂತರು; ಮತ್ತು ಭಕ್ತಿಪೂರ್ವಕವಾಗಿ ಆ ಮುನಿವರನ ಅಡಿದಾವರೆಗಳಿಗೆರಗಿದರು. ಚಾಣಕ್ಯನು ಸಿಂಹಾಸನಾಧಿಷ್ಠಿತನಾಗುವ ವರೆಗೆ ಅವರೆಲ್ಲರೂ ಕೈಜೋಡಿಸಿಕೊಂಡು ನಿಂತುಬಿಟ್ಟರು.

ಬಳಿಕ ಚಾಣಕ್ಯನು ಆಸನಾಧಿಷ್ಠಿತನಾಗಿ ಅವರೆಲ್ಲರಿಗೂ ಕೂಡ್ರಲಿಕ್ಕೆ ತಿಳಿಸಿ:—ನನ್ನನ್ನು ಹುಡುಕಿ ಸೆರೆಹಿಡಿಯುವ ಸಲುವಾಗಿ ಅಮಾತ್ಯ ರಾಕ್ಷಸನು ಮಹಾ ಸಾಹಸಪಡುತ್ತಿರುವನು; ಆದರೆ ನಾನು ಈ ಪರ್ವತ ರಾಜ್ಯದ ಗಭೀರವಾದ ಅಡವಿಯಲ್ಲಿ ಪ್ರವೇಶಿಸಿ, ಆತನ ಆ ಪ್ರಯತ್ನಕ್ಕೆ ನೀರು ಹಚ್ಚಿ ಕೂಡ್ರಿಸಿರುತ್ತೇನೆ. ಸಂಸಾರದಲ್ಲಿ ಬಾಲವಿಧವೆಯಾದ ಕಪಾಲಿನಿಯೆಂಬ

ಕನ್ಯೆಯು ಹೊರ್ತು ನನಗೆ ಬೇರೆ ಯಾರೂ ಇರುವದಿಲ್ಲ. ನಾನು ಆ ನನ್ನ ಕನ್ಯೆಯನ್ನು ಶ್ರೀ ಯೋಗಾನಂದ ಸ್ವಾಮಿಗಳೊಡನೆ ಹರಿದ್ವಾರಾದಿ ತೀರ್ಥಾಟನಕ್ಕೆ ಕಳಿಸಿ ಬಿಟ್ಟಿರುವೆನು. ಯಾವ ಪರ್ಣಕುಟೀರವು ಅರಮನೆಗಿಂತಲೂ ನನಗೆ ಹೆಚ್ಚು ಪ್ರಿಯಕರವಾಗಿದ್ದಿತೋ, ಯಾವ ಪರ್ಣಕುಟೀರದಲ್ಲಿಯೇ ಹಗಲೂ ಇರುಳೂ ಇದ್ದು, ಶಿಕ್ಷಾ-ದೀಕ್ಷಾದಿ ವ್ಯವಹಾರಗಳನ್ನು ವ್ಯವಹರಿಸುತ್ತಿದ್ದೆನೋ, ಅದನ್ನು ಸ್ವಹಸ್ತದಿಂದ ನಾನು ಭಸ್ಮ ಮಾಡಿರುವೆನು. ಇಷ್ಟೆಲ್ಲ ಖಟಾಟೋಪವನ್ನು ಮಾಡಿ, ನಾನು ಯಾವ ಪ್ರಚಂಡ ಧ್ವಂಸಾಗ್ನಿಯನ್ನು ಪ್ರಜ್ವಲಗೊಳಿಸಿರುವೆನೋ, ಅದರಲ್ಲಿ ಧನನಂದ ಸಹಿತವಾದ ಆ ಮಗಧ ರಾಜ್ಯವನ್ನು ಆಹುತಿ ಕೊಡುವದಕ್ಕಾಗಿ ನಾನು ಇಲ್ಲಿ ಕುಳಿತು, ಆ ಧ್ವಂಸ ಹೋಮವನ್ನು ಮಾಡತಕ್ಕವನಿದ್ದೇನೆ

ಚಾಣಕ್ಯನ ಈ ನುಡಿಯನ್ನು ಕೇಳಿ ಮಲಯಕೇತುವು ಪ್ರಸನ್ನಮುಖದಿಂದ:— ಯಾವ ಬಗೆಯಿಂದಲೇ ಯಾಕಾಗಲೊಲ್ಲದು, ತಾವು ನಮ್ಮನ್ನು ಬಂದು ಕೂಡಿಕೊಂಡದ್ದು ಕಬ್ಬಿನ ಮೇಲೆ ಜೇನು ಇಟ್ಟಂತಾಯಿತು. ಜ್ಞಾನವೃದ್ಧರಾದ ಶಕಟಾರ ಮಂತ್ರಿಗಳೂ, ಅಸೀಮ ಶಕ್ತಿಸಂಪನ್ನನಾದ ಮಗಧ ದೇಶದ ಯುವರಾಜ ಕುಮಾರ ಚಂದ್ರಗುಪ್ತನೂ ನಮಗೆ ಸಹಾಯ ಮಾಡಲಿಕ್ಕೆ ತತ್ಪರರಾಗಿರುತ್ತಾರೆ. ಅದುದರಿಂದ ಈ ಯುದ್ಧವನ್ನು ಹೇಗೆ ಹೇಗೆ ಮಾಡಬೇಕೆಂಬ ಬಗ್ಗೆ ನೀವು ತ್ರಿವರ್ಗರೂ ಕೂಡಿ ಆಲೋಚಿಸಿ ನಿಶ್ಚಯಿಸಿರಿ. ನಾನು ನಿಶ್ಶಂಕ ಚಿತ್ತದಿಂದ ತಮ್ಮಗಳ ಆಜ್ಞೆಯಂತೆ ನಡೆಯುವೆನು. ನಾನು ಮತ್ತು ನಮ್ಮ ಪೂರ್ವಜರು ಚಿರ ಕಾಲದಿಂದ ಯಾವ ನಮ್ಮ ಶ್ರೀ ಕಾಲಭೈರವನನ್ನು ಭಜಿಸುತ್ತಿರುವೆವೋ, ಆ ಮಹಾ ದೇವತೆಯ ಕೃಪೆಯಿಂದಲೇ ಈ ಸಂಕಟ ಸಮಯದಲ್ಲಿ ತಮ್ಮಂತಹರ ಸಹಾಯವು ನಮಗೆ ಆಕಸ್ಮಿಕವಾಗಿ ಲಭಿಸಿರುತ್ತದೆ. ಹಾಗಿರದಿದ್ದರೆ, ಈ ಪ್ರಕಾರ ಭಿನ್ನ ಭಿನ್ನ ವೃತ್ತಿಯ ಮನುಷ್ಯರು ಒಂದೇ ಕೆಲಸಕ್ಕಾಗಿ ಒತ್ತಟ್ಟಿಗೆ ಸೇರುವ ಸಂಭವವುಂಟೇ?

ಅಂದಿನಿಂದ ಚಾಣಕ್ಯನು ಆ ಮಲಯಪುರಿಯಲ್ಲೇ ವಾಸವಾಗಿದ್ದು, ಮಲಯಕೇತುವಿಗೂ ಧನನಂದನಿಗೂ ನಡೆದ ಆ ಘೋರ ಯುದ್ಧದಲ್ಲಿ ಮಲಯಕೇತುವಿಗೆ ಹಲವು ಬಗೆಯಿಂದ ಸಹಾಯ ಮಾಡಲುಪಕ್ರಮಿಸಿದನು



# ಹೆಂಗಸರೆಂದರೆ ಸಾಮಾನ್ಯರಲ್ಲ.

ಇಂದು ಅಮಾವಾಸ್ಯೆಯು. ಚಾಣಕ್ಯನು ಮಂತ್ರ-ತಂತ್ರಗಾರನಾದುದರಿಂದ, ಆತನು ಇಂದು ಬೆಳಗಿನಿಂದ ಉಪೋಷಣ ಮಾಡಿ ತನ್ನ ಜಪ-ತಪ ಪುರಶ್ಚರಣಗಳಲ್ಲಿ ನಿರತನಾಗಿದ್ದನು. ಮಧ್ಯಾಹ್ನ ಸಮಯಕ್ಕೆ ಅವನು ಮಲಯಕೇತುವನ್ನು ತನ್ನ ಬಳಿಗೆ ಕರೆದು:—ರಾಜ್ರ, ಇಂದು ಅಮಾವಾಸ್ಯೆಯಾದುದರಿಂದ ಶಿವ-ಶಕ್ತಿಯರ ಉಪಾಸನೆ ಮಾಡಲಿಕ್ಕೆ ತಕ್ಕ ಸಮಯವಾಗಿದೆ. ಇಂದಿನ ಮಧ್ಯರಾತ್ರಿಯಲ್ಲಿ ನಾನು ಏಕಾಕಿಯಾಗಿ ಆ ಉಪಾಸನೆಯನ್ನು ಮಾಡತಕ್ಕವನು. ನೀನು ನನಗೆ ಪೂಜಾಸಾಮಗ್ರಿಗಳನ್ನೆಲ್ಲ ಒದಗಿಸಿಕೊಡಬೇಕು. ಬ್ರಾಹ್ಮಣರಲ್ಲಿ ಗಾಯಿತ್ರೀ ಮಂತ್ರದ ಶಕ್ತಿಯಿದ್ದರೆ, ಮಂತ್ರತಂತ್ರಗಳಿಂದ ಸಿದ್ಧಿಯಾಗುವದು ನಿಶ್ಚಿತವಿದ್ದರೆ, ಷೋಢಶೋಪಚಾರ ಭಕ್ತಿ-ಅನುಷ್ಠಾನ ಯುಕ್ತವಾದ ಪೂಜೆಯಿಂದ ಏನಾದರೂ ಫಲಗಳುಂಟಾಗುತ್ತಿದ್ದರೆ, ಪ್ರಸ್ತುತದ ಕಾಳಗದಲ್ಲಿ ನಿನಗೆ ವಿಜಯವು ಉಂಟಾಗುವದೋ—ಇಲ್ಲವೋ ಎಂಬದನ್ನು ನಾನು ನಾಳೆ ಬೆಳಗ್ಗೆ ನಿನಗೆ ಖಂಡಿತವಾಗಿ ತಿಳಿಸಬಲ್ಲೆನು, ಎಂದಂದನು.

ಚಾಣಕ್ಯನು ಯಾವ ಪ್ರಕಾರದ ಪೂಜಾ ಸಾಮಗ್ರಿಗಳನ್ನು ಅಪೇಕ್ಷಿಸಿದನೋ, ಮಲಯಕೇತುವು ಆ ಬಗೆಯ ಸಿದ್ಧತೆ ಮಾಡಿಕೊಟ್ಟನು. ಅಂದು ಮಧ್ಯ ರಾತ್ರಿಯಲ್ಲಿ ಸ್ನಾನ ಮಾಡಿ, ಚಾಣಕ್ಯನು ಮಹಾ ಕಾಲಭೈರವನ ಮಂದಿರಕ್ಕೆ ಹೋಗಿ ಅನುಷ್ಠಾನ ಮಾಡತೊಡಗಿದನು. ಆ ಕಾಲದಲ್ಲಿ ಸಮಸ್ತ ಮಲಯಪುರಿಯೂ ಇಷ್ಟೇ ಅಲ್ಲ ಸಮಸ್ತ ಪರ್ವತ ರಾಜ್ಯವೂ, ಇಡೀ ದೃಶ್ಯ ವಿಶ್ವವೂ ವಿಶ್ರಾಂತಿ ಸುಖವನ್ನು ಅನುಭವಿಸ ತೊಡಗಿತ್ತು; ಆದರೆ ನಮ್ಮ ಚಾಣಕ್ಯ ಮುನಿಯು ಮಾತ್ರ ಮಹಾ ಕಾಲಭೈರವನ ಮಂದಿರದಲ್ಲಿ ಕುಳಿತು ಮಂತ್ರ-ತಂತ್ರಗಳನ್ನು ನಡೆಸಿದ್ದನು.

ರಾತ್ರಿಯ ಕತ್ತಲೆಯು ಹರಿದು ಬೆಳಗಾಗ ಬಂತು. ಅಂಧಕಾರದಿಂದ ಯುಕ್ತಳೂ ಖದ್ಯೋತ ಮಾಲಾ ಪರಿಭೂಷಿತಳೂ, ವಿರಾಟ್ ಗಾಂಭೀರ್ಯ ವಿಮಂಡಿತಳೂ ಆದ ಪ್ರಕೃತಿ ರಾಣಿಯು ಕೃಷ್ಣವಸನವನ್ನು ತ್ಯಾಗ ಮಾಡಿ, ಸ್ವರ್ಣಖಚಿತವಾದ ಉಜ್ವಲ ವಸನದಿಂದ ತನ್ನ ದೇಹಕ್ಕೆ ಆವರಣವನ್ನು ಮಾಡಿಕೊಂಡಳು. ಉಷಾ ಸುಂದರಿಯ ಸಮಾಗಮದಿಂದ ನೈಶಾಂಧಕಾರದ ಸದ್ದಡಗಿ, ಪ್ರಕೃತಿಯ ಎಲ್ಲ ಭಾಗದ ಮೇಲೂ ಬಾಲಾರ್ಕ ಕಿರಣಗಳು ಬೆಳಗ

ಲಾರಂಭಿಸಿತು. ಕಾಗೆ, ಗುಬ್ಬಿ ಮೊದಲಾದ ಸಮಸ್ತ ಖಗ-ಚರಗಳೂ ವೃಕ್ಷ-ಲತೆಗಳೊಳಗಿನ ತಮ್ಮ ಬೀಡಾರಗಳೊಳಗಿಂದ ಹೊರ ಹೊರಟು:—ಎಲೈ ಜಗತ್ತಿನ ಪ್ರಾಣಿಗಳೇ, ಎದ್ದೇಳಿರಿ; ನೀವು ನಿಮ್ಮ ನಿಮ್ಮ ಕೆಲಸಗಳಿಗೆ ತೊಡಗಿರಿ, ಎಂದು ಡಂಗುರ ಸಾರುವ ಓಲೇಕಾರರಂತೆ ಅತ್ತಿಂದ ಇತ್ತ ಇತ್ತಿಂದತ್ತ ಚೀತ್ಕಾರ ಮಾಡುತ್ತ ಹಾರಾಡ ಹತ್ತಿದವು. ಧ್ಯಾನಮಗ್ನನಾಗಿದ್ದ ಚಾಣಕ್ಯನು ಉಷಃಕಾಲಕ್ಕೆ ಚೆತರಿಸಿಕೊಂಡು, ಮಹಾಕಾಲನಿಗೆ ಪ್ರಣಾಮವನ್ ಮಾಡಿ, ಆಸನವನ್ನು ತ್ಯಜಿಸಿ ಎದ್ದು ನಿಂತನು ಆತನು ಆ ಮಂದಿರದ ಗರ್ಭಗುಡಿಯ ಬಾಗಿಲು ತೆರೆದು ಹೊರಗೆ ಇಣಿಕಿ ನೋಡುತ್ತಾನೆ, ಸಮಸ್ತ ಪ್ರಕೃತಿಯೂ ಉಷಾಲೋಕ ಮಂಡಿತವಾಗಿತ್ತು. ಆಗ ಆ ದೇವಸ್ಥಾನದ ಪಾವಟಿಗೆಗಳ ಬದಿಯಲ್ಲಿ ರತ್ನಖಚಿತ ಪೀತಾಂಬರವನ್ನುಟ್ಟಂಥ, ಅತುಲನೀಯ ಕಾಂತಿಯುಕ್ತಳಾದಂಥ ಒಬ್ಬ ಅಪೂರ್ವ ಸುಂದರಶಾಲಿನಿಯಾದ ಷೋಡಶ ವರುಷದ ಯುವತಿಯು ನಿಂತಿದ್ದಳು. ಅವಳ ಕೈಯೊಳಗೆ ಬೆಳ್ಳಿಯ ಪೂಜಾ ಪಾತ್ರವಿದ್ದು, ಅದು ಅರ್ಘ್ಯದ ಜಲ, ಪುಷ್ಪ, ಬಿಲ್ವಪತ್ರ, ಶುಭ್ರಾಕ್ಷತೆ ಮೊದಲಾದ ಪೂಜಾ ಸಾಮುಗ್ರಿಗಳಿಂದ ಪರಿಪೂರ್ಣವಾಗಿತ್ತು.

ತನ್ನ ನಿತ್ಯ ನಿಯಮದಂತೆ ಮಂದಾಕಿನಿಯು ಆ ದಿನವೂ ಉಷಃಕಾಲದಲ್ಲೆದ್ದು ಶ್ರೀ ಮಹಾಕಾಲಭೈರವನ ಪೂಜೆಗಾಗಿ ಬಂದಿದ್ದಳು; ಆದರೆ ಗುಡಿಯಲ್ಲಿ ಚಾಣಕ್ಯನು ಇನ್ನೂ ಪೂಜಾ ನಿಮಗ್ನನಾದುದನ್ನು ಕಂಡು ಆಕೆ ಹೊರಗಿನ ಪಾವಟಿಗೆಗಳ ಮೇಲೆಯೇ ಕುಳಿತುಕೊಂಡಿದ್ದಳು ಆಗ ಅವಳ ಮನಸ್ಸಿನಲ್ಲಿ ನಾನಾ ಬಗೆಯ ಕಲ್ಪನೆಯ ತೆರೆಗಳು ನಾ ಮುಂದೆ-ನಾ ಮುಂದೆ ಎಂದು ಏಳುತ್ತಿದ್ದವು ಅಷ್ಟರಲ್ಲಿ ಚಾಣಕ್ಯನು ಬಾಗಿಲು ತೆರೆದು ಹೊರಬಿದ್ದ ಕೂಡಲೆ ಮಂದಾಕಿನಿ ಎದ್ದು ನಿಂತಳು. ಇವಳನ್ನು ನೋಡಿ ಚಾಣಕ್ಯನು ನಗ ಮೊಗದಿಂದ:—ಇಂದು ನನ್ನ ಉಪಾಸನೆಯು ಸಂಪೂರ್ಣವಾಗಿ ಸಿದ್ಧಿಸಿತು. ಯಾಕಂದರೆ, ಮಹಾ ಕಾಲಭೈರವನ ಮಂದಿರದಿಂದ ಹೊರಬಿದ್ದಾಕ್ಷಣಕ್ಕೆ ಸಾಕ್ಷಾತ್ ಶಕ್ತಿರೂಪಿಣಿಯಾದ ನನ್ನ ತಾಯಿಯೇ ನನಗೆ ಸಮ್ಮುಖಳಾಗಿರುವಳು,

ಮಂದಾಕಿನಿಯು ಚಾಣಕ್ಯನ ಆ ಮಾತಿಗೆ ಏನೂ ಉತ್ತರ ಕೊಡದೆ:-ಬ್ರಾಹ್ಮಣ ಶ್ರೇಷ್ಠರೇ, ಮಹಾಕಾಲನು ನಮ್ಮ ಮೇಲೆ ಅನುಗ್ರಹ ಮಾಡಿರುವನೇ? ಎಂದಿಷ್ಟೇ ಪ್ರಶ್ನೆ ಮಾಡಿದಳು.

ಚಾಣಕ್ಯನು ಮತ್ತೆ:—-ದೇವರು ಅನುಗ್ರಹ ಮಾಡದಿರುವುದಕ್ಕೆ ಕಾರಣವೇ ಇರುವದಿಲ್ಲ. ಭಕ್ತರು ಮತ್ತು ದೇವರು ಇವರುಗಳ ಸಂಬಂಧವು

ಅತಿ ನಿಕಟವಾದುದು. ನಿನ್ನೆ ಇಡೀ ರಾತ್ರಿಯಲ್ಲಿ ಜಾಗರಣೆ ಮಾಡಿ ನಾನು ಮಹಾ ಕಾಲನ ಉಪಾಸನೆಯಿಂದ ಯಾವ ಅನುಗ್ರಹ ವಾಣಿಯನ್ನು ಹೊಂದಿರುವೆನೋ, ಅದನ್ನು ಯಥಾ ಸಮಯದಲ್ಲಿ ನಿಮ್ಮೆಲ್ಲರಿಗೆ ತಿಳಿಸುತ್ತೇನೆ. ಆದರೂ ತಾಯಿ, ನಿನಗೆ ಈಗ ಇಷ್ಟೇ ತಿಳಿಸಿಡುತ್ತೇನೆ, ದೇವರು ನಿಮ್ಮಗಳ ಮೇಲೆ ಅತ್ಯಂತ ಪ್ರಸನ್ನನಾಗಿರುತ್ತಾನೆ ನಿಮ್ಮ ಕುಲದೇವರ ಅನುಗ್ರಹದಿಂದಲೇ ವಿಜಯಶ್ರೀ ಪ್ರಸ್ತುತದ ಕಾಳಗದಲ್ಲಿ ನಿಮ್ಮ ಅಣ್ಣನಿಗೇ ಮಾಲೆ ಹಾಕುತ್ತಾಳೆ. ಹಿಂದೂ ಧರ್ಮವೂ, ಹಿಂದೂ ಕರ್ಮಕಾಂಡವೂ, ಹಿಂದೂ ಜನರ ಭಕ್ತಿಯುಕ್ತ ಪವಿತ್ರ ಉಪಾಸನೆಯೂ ಎಲ್ಲಿಯ ವರೆಗೆ ಈ ಲೋಕದಲ್ಲಿ ಅಸತ್ಯವಾಗಲಾರವೋ, ಅದು ವರೆಗೆ ನಾನು ನುಡಿಯುವ ಈ ನುಡಿ ತಿಲಮಾತ್ರಕ್ಕೂ ಸುಳ್ಳಾಗದು ಈ ಕಾರ್ಯದ- ನನ್ನ ಪ್ರತಿಷ್ಠೆಯು ಏನೂ ಇರುವದಿಲ್ಲಮ್ಮಾ. ನಾನು ಕೇವಲ ಶಿವ-ಶಕ್ತಿಯರ ಉಪಾಸನೆಯನ್ನು ಮಾತ್ರ ಮಾಡಿದವನು. ಅಷ್ಟೊಂದು ಏಕೋ ಭಾವದಿಂದ ನಾನು ಅವರ ಉಪಾಸನೆ ಮಾಡಿರದಿದ್ದರೂ, ಆ ಜಗನ್ನಿಯಂತನಾದ ಮಹಾ ಕಾಲಭೈರವನ ಇಚ್ಛೆಗೆ ಬಂದ ಬಳಿಕ ಯಾವ ಕಾರ್ಯವು ತಾನೆ ದುಸ್ತರವಾದೀತು? ಕಾಳಗಗಳಲ್ಲಿ ಜಯಾಪಜಯಗಳು ಮಹತ್ವದವಲ್ಲ ಸೈನ್ಯವನ್ನು ಕೌಶಲ್ಯದಿಂದ ನಡೆಸುವುದೇ ಮಹತ್ವದ್ದಾಗಿದೆ. ತಾಯಿ, ನಿಶ್ಚಿಂತಳಾಗಿರು. ನಾನು ನಿನ್ನೆ ರಾತ್ರಿ ಧ್ಯಾನಮಗ್ನನಾಗಿದ್ದಾಗ ಮಹಾ ಕಾಲನಿಂದ ದೈವಾದೇಶವನ್ನು ಪಡೆದಿರುತ್ತೇನೆ. ಪ್ರಸ್ತುತದ ಮಹಾ ಯುದ್ಧದಲ್ಲಿ ನಿಮಗೆ ಎಂದೂ ಅಪಜಯವಾಗಲಾರದು. ವಿಜಯ ಶ್ರೀ ನಿಮ್ಮ ಅಣ್ಣನನ್ನು ಖಂಡಿತವಾಗಿಯೂ ಆಲಿಂಗಿಸುತ್ತಾಳೆ.

ಮೊದಲೇ ಪ್ರಶಾಂತವಾಗಿದ್ದ ಆ ಸೂರ್ಯೋದಯದ ಸಮಯದಲ್ಲಿ ಚಾಣಕ್ಯನ ಆ ಅಭಯ ವಾಣಿಯನ್ನು ಕೇಳಿ ಮಂದಾಕಿನಿಯು ಸಂತೋಷ ಭರಿತಳಾದಳು. ಅವಳ ಮನಸ್ಸು ನವೋತ್ಸಾಹದಿಂದ ಪರಿಪುಷ್ಟವಾಯಿತು. ಆಗ ಅವಳು ಚಾಣಕ್ಯನನ್ನು ಕುರಿತು:— ತಮ್ಮೊಡನೆ ನಾನೂ ಅರಮನೆಯ ವರೆಗೆ ಬರಲಿಯಾ? ಎಂದು ಕೇಳಲು, ಬೇಡ-ಬೇಡವೆಂದು ಅನ್ನುತ್ತಾ ಚಾಣಕ್ಯನು ಮಂದಾಕಿನಿಯನ್ನು ಅಲ್ಲಿಯೇ ಬಿಟ್ಟು, ತಾನೊಬ್ಬನೇ ಮಲಯ ಪುರಿಗಭಿಮುಖವಾಗಿ ನಡೆದನು. ನಡು ದಾರಿಯಲ್ಲಿ ಪರ್ವತೇಶನಾದ ಮಲಯಕೇತುವೂ ಶಕಟಾರ ಮಂತ್ರಿಯೂ ಆತನಿಗೆ ಭೆಟ್ಟಿಯಾದರು.

ರಾಜನೂ ಮಂತ್ರಿಯೂ ಬ್ರಾಹ್ಮಣವರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಚಾಣಕ್ಯನು ಪ್ರಸನ್ನಾಂತಃಕರಣದಿಂದ ಅವರನ್ನು ಆಶೀರ್ವ

ದಿಸಿ:—ಮಹಾರಾಜಾ, ವಿಜಯಶ್ರೀ ನಿನ್ನನ್ನೇ ವರಿಸುತ್ತಾಳೆ.

ಮಲಯಕೇತು ಜಿಜ್ಞಾಸಾಯುಕ್ತನಾಗಿ:— ನಿನ್ನೆ ಇಡಿ ರಾತ್ರಿಯಲ್ಲಿ ತಾವು ಪೂಜಾ ರತರಾಗಿದ್ದಿರಷ್ಟೇ? ನಾವೂ ಮಧ್ಯ ರಾತ್ರಿ ಮೀರುವ ವರೆಗೆ ಎಚ್ಚತ್ತಿದ್ದು, ಯುದ್ಧದ ಬಗ್ಗೆ ಆಲೋಚನೆ ಮಾಡಿದೆವು; ಆದರೆ ಮಾನವರ ಆಲೋಚನೆಗಳು ದೇವರು ದಯಪಾಲಿಸಿದರೇ ಬಗೆಹರಿಯತಕ್ಕವುಗಳು. ತಾವು ದೇವರ ಪರಮ ಭಕ್ತರು. ಬ್ರಾಹ್ಮಣೋತ್ತಮರೇ, ದೇವರು ನಿನ್ನಿನ ದಿನ ತಮಗೆ ಯಾವ ದೃಷ್ಟಾಂತವನ್ನು ತೋರಿಸಿದನು?

ಹರ್ಷಪ್ರಫುಲ್ಲಿತ ದನಿಯಿಂದ ಚಾಣಕ್ಯನು:—ತಮ್ಮಾ ಮಲಯಕೇತು. ದೇವರಿಂದ ನಾನು ಯಾವ ಸಾಕ್ಷಾತ್ಕಾರವನ್ನು ಪಡೆದಿರುವೆನೋ ಅದು ನಿನಗೆ ಮಹಾ ಮಂಗಳಕರವಾದಂತಹದು ಸದ್ಯದ ಕಾಳಗದಲ್ಲಿ ನಿನಗೇ ವಿಜಯ ವಾಗುವದೆಂದು ಭವಾನಿಯ ಅಭಿವಚನವಾಗಿರುತ್ತದೆ.

ಚಾಣಕ್ಯನ ಮುಖದಿಂದ ಹೊರಟ ಆ ಅಭಯವಾಣಿಯನ್ನು ಕೇಳಿದ ಕೂಡಲೆ ಮಲಯಕೇತು ಮತ್ತು ಶಕಟಾರ ಇವರಿಬ್ಬರಿಗೂ ಪರಮ ಸಂತೋಷವೆನಿಸಿತು. ಚಾಣಕ್ಯನಂತಹ ನಿಷ್ಠಾವಂತ ಹಾಗು ತೇಜಸ್ವೀ ಬ್ರಾಹ್ಮಣನ ಆಶೀರ್ವಾದವಾಕ್ಯವು ಎಂದಿಗೂ ವಿಫಲವಾಗಲಾರದೆಂದು ಆ ಪರ್ವತರಾಜನು ತಿಳಕೊಂಡನು. ಆದರೂ ಮಗಧೇಶ್ವರನ ಅಪರಿಮಿತವಾದ ಸೇನಾ ಗಣದ ಸಂಗತಿಯು ಆತನ ಮವಸ್ಸಿನ ಚಂಚಲತೆಗೆ ಮತ್ತೆ ಮತ್ತೆ ಕಾರಣವಾಗುತ್ತಿತ್ತು ಆದ್ದರಿಂದ ಮಲಯಕೇತುವು ಆಗ ಚಾಣಕ್ಯನಿಗೆ ಏನೂ ಪ್ರತ್ಯುತ್ತರವ ಕೊಡಲಿಲ್ಲ; ಆದರೆ ಚಾಣಕ್ಯನಂತಹ ಕುಟಿಲ ನೀತಿಯ ಜನಕನಿಗೆ ಮಲಯಕೇತುವಿನ ಅಂತರಂಗಿಕ ಚಲನವಲನವು ತಿಳಿಯದೆ ಇದ್ದೀತೇ? ಆ ಕೂಡಲೆ ಅವನು ಪರ್ವತ ರಾಜನ ಕಡೆಗೆ ಒನ್ಮೆ ಮರ್ಮಭೇದಕ ದೃಷ್ಟಿಯಿಂದ ನಿರೀಕ್ಷಿಸಿದವನೇ ಲಘು ತಿರಸ್ಕಾರಪೂರ್ವಕವಾಗಿ ನುಡಿದನೇನಂದರೆ: ಮಹಾರಾಜ, ಮಾನವನ ಶಕ್ತಿಯ ವಿಷಯವಾಗಿ ತಾವು ಇಷ್ಟು ಆಸ್ಥೆ ಪಡುವದೇಕೆ? ದೇವರು ಎಂಥ ಪ್ರಬಲ ಶಕ್ತಿವಂತನಿರುವನೆಂಬದನ್ನು ತಿಳಿಯಲು ತಾವು ಸ್ವಲ್ಪಾದರೂ ಪ್ರಯತ್ನ ಮಾಡುವದಿಲ್ಲವೇ? ವಾಸ್ತವವಾಗಿ ಹೇಳುವದೆಂದರೆ, ತಮ್ಮ ರಾಜ್ಯವು ಮಗಧೇಶ್ವರನ ಪ್ರಚಂಡವಾದ ಪ್ರದೇಶದ ಮಾನದಿಂದ ತೀರ ಕ್ಷುದ್ರವಾದದ್ದು; ಆದರೆ ಆ ದರ್ಪಹಾರಿಯಾದ ಮಧುಸೂದನನ ಇಚ್ಛೆಯಿಂದಲೇ ಅತಿ ಕ್ಷುದ್ರನಿಂದ ಬಹು ಪ್ರಬಲನ ಅಹಂಕಾರವು ನಾಶವಾಗಬೇಕಾಗಿದೆ! ತಾವು ಪರಮ ಧಾರ್ಮಿಕರು; ದೇವ-ದ್ವಿಜರಲ್ಲಿ ಭಕ್ತಿಯುತರಾದವರು. ಆದುದರಿಂದಲೇ ತಮಗೆ ದೇವರೇ ಸಹಾಯಕರ್ತೃ

ವಾಗುವನು- ನಾನು ತಮ್ಮೆದುರಿಗೆ ಆತ್ಮಪ್ರೌಢಿಮೆಗಾಗಿ ಹೀಗೆ ನುಡಿಯುವದಿಲ್ಲ, ಕೇವಲ ನುಡಿಯಂತೆ ನಡೆದು ತೋರಿಸುವದೇ ಈ ಚಾಣಕ್ಯನ ಇತಿಕರ್ತವ್ಯವಾಗಿರುತ್ತದೆ. ಬ್ರಾಹ್ಮಣ ವರ್ಣದಲ್ಲಿ ದೇವರ ಸೂಕ್ಷ್ಮ ಅಂಶವಾದರೂ ಇದ್ದದ್ದಾದರೆ, ಗಾಯಿತ್ರೀಪರಾಯಣರೂ, ದೇವತಾನುಷ್ಠಾನ ಸಂಪನ್ನರೂ ಆದ ಬ್ರಾಹ್ಮಣರಲ್ಲಿ ದೈವಿಕ ಶಕ್ತಿಯು ಕೆಲವುಷ್ಟಾದರೂ ಇದ್ದದ್ದಾದರೆ. ಶಾಸ್ತ್ರಸಮ್ಮತವಾದ ನಿಷ್ಕಾಮಕರ್ಮಕ್ಕೆ ಕೊಂಚವಾದರೂ ಫಲವುಂಟಾಗುವದು ನಿಶ್ಚಿತವಾಗಿದ್ದರೆ, ಪರ್ವತೇಶನಾದ ಮಲಯಕೇತುವೇ, ಈ ಬ್ರಾಹ್ಮಣನ ಕಟ್ಟುನಿಟ್ಟಾದ ಮಾತನ್ನು ಕೇಳು:-ಮಹಾರಾಜ, ಪ್ರಸ್ತುತದ ಯುದ್ಧದಲ್ಲಿ ವಿಜಯಶ್ರೀಯು ನಿನ್ನನ್ನೇ ಆಲಿಂಗಿಸುವದು ಖಂಡಿತವು ನಿನ್ನಿಂದಲೇ ಆ ದುರಹಂಕಾರಿಯಾದ ನಂದರಾಜನ ಚಂದನವಾಗುವದು!

ಅಗ್ನಿಯ ಪ್ರಖರತೆಯಿಂದ ದಾರುಣವಾದ ಚಳಿಯು ನಿರ್ನಾಮವಾಗುವಂತೆಯೂ, ಸೂರ್ಯಕಿರಣಗಳ ಪ್ರಕಾಶದಿಂದ ಕಗ್ಗತ್ತಲೆಯು ನಾಶವಾಗುವಂತೆಯೂ, ಬಾಲಾರ್ಕನ ಆಗಮನದಿಂದ ಹುಲಿ-ಸಿಂಹ ಮೊದಲಾದ ಹಿಂಸ್ರಪಶುಗಳು ತಮ್ಮ ಸಂಚಾರವನ್ನು ಬಿಟ್ಟುಗೊಟ್ಟು, ಇತರ ಪ್ರಾಣಿಗಳ ರಹದಾರಿಗೆ ಆಸ್ಪದ ಕೊಡುವಂತೆಯೂ, ಚಾಣಕ್ಯಮುನಿಯ ಆ ಆಶಾಸೂಚಕ ವಾಕ್ಯಶ್ರವಣದಿಂದ ಈ ವೊದಲು ಮಲಯಕೇತುವಿನ ಮನಸ್ಸನ್ನು ಗ್ರಸ್ತ ಮಾಡಿದ್ದ ವಿಷಣ್ಣತೆಯು ಒಮ್ಮೆಲೆ ಬಯಲಾಯಿತು. ಅವನು ನವೋತ್ಸಾಹದಿಂದ ಹುರುಪುಗೊಂಡನು.

ಚಾಣಕ್ಯನೊಡಗೂಡಿ ಮಲಯಕೇತುವು ರಾಜಪ್ರಾಸಾದಕ್ಕೆ ಬಂದನು. ಚಾಣಕ್ಯನು ಪುನಃ ಸ್ನಾನವನ್ನು ಮಾಡಿ, ಶುಚಿರ್ಭೂತನಾಗಿ, ತನಗೋಸ್ಕರ ನಿರ್ದಿಷ್ಟವಾದ ಗೃಹದಲ್ಲಿ ಕುಳಿತು ನಿತ್ಯಾಹ್ನಿಕಗಳನ್ನು ಮಾಡುವದರಲ್ಲಿ ತೊಡಗಿದನು. ಪ್ರಥಮ ಪ್ರಹರವು ಮುಗಿಯುವ ಹೊತ್ತಿಗೆ ಆತನ ಆಹ್ನಿಕವು ಸಂಪೂರ್ಣವಾಯಿತು. ತದನಂತರ ಕಂದ-ಮೂಲಾದಿಗಳನ್ನು ಸವಿದು, ಅಮೃತೋಪಮ ಗಿರಿ ನದಿಯ ಜಲದಿಂದ ತೃಷೆಯನ್ನು ನೀಗಿಕೊಂಡು, ಪ್ರಶಸ್ಥವಾದ ಅಜಿನಾಸನದ ಮೇಲೆ ದೇಹವನ್ನು ಚೆಲ್ಲಿ ವಿಶ್ರಾಂತಿಯನ್ನು ಹೊಂದಹತ್ತಿದನು. ಆ ವಿಶ್ರಾಂತಿ ಕಾಲದಲ್ಲಿಯೂ ಚಾಣಕ್ಯನು ಏಕಾಕಿಯಾಗಿರಲಿಲ್ಲ. ಅವನ ಸಮೀಪದಲ್ಲಿಯೇ ಶಕಟಾರ ಮಂತ್ರಿಯು ಬಂದು ಕುಳಿತುಕೊಂಡಿದ್ದನು.

ಕೆಲ ಹೊತ್ತಿನ ಮೇಲೆ ಚಾಣಕ್ಯನು ಶಕಟಾರನನ್ನು ಕುರಿತು:— ಮಂತ್ರಿವರ್ಯ, ಆ ಕೌಟಿಲ್ಯಸೂತ್ರವು ನೆನಪಿನಲ್ಲಿದೆಯೇನು? ಹಿಂದಕ್ಕೆ ಒಮ್ಮೆ ನಾನು ಅದನ್ನು ಒತ್ತಾಯದಿಂದಲೇ ನಿನ್ನೆದುರಿಗೆ ಓದಿ ಹೇಳಿದ್ದೆ ನಲ್ಲವೇ?

ಶಕಟಾರ:—ನೆನಪಿರದೇನು ಮಾಡೀತು? ಆ ಸಂಗತಿಯು ನನಗೆ ನೆನಪಿದೆಯಷ್ಟೇ ಅಲ್ಲ, ನಿಮ್ಮ ಆ ಕೌಟಿಲ್ಯಸೂತ್ರ ಪುಸ್ತಕದ ನಕಲನ್ನು ಕೂಡ ನಾನು ಆಗಲೆ ಮಾಡಿಕೊಂಡಿಟ್ಟಿದ್ದೆನು. ಅದು ತಾವು ಮೊನ್ನೆ ನನಗೆ ತಿರುಗಿ ಕೊಟ್ಟ ಆ ನನ್ನ ಸಣ್ಣ ಪೆಟ್ಟಿಗೆಯಲ್ಲಿಯೇ ಇದ್ದದರಿಂದ, ಆ ಪ್ರತಿಯು ಈಗ ನನ್ನ ಬಳಿಯಲ್ಲಿಯೇ ಇರುತ್ತದೆ. ಇತ್ತೀಚೆಗೆ ಅದನ್ನು ನಾನು ಪ್ರತಿ ನಿತ್ಯ ಪಾರಾಯಣ ಮಾಡುತ್ತಿರುತ್ತೇನೆ.

ಚಾಣಕ್ಯ:—ಹಾಗಾದರೆ, ಅದರೊಳಗಿನ ವ್ಯೂಹ ರಚನೆಯ ಅಧ್ಯಾಯವನ್ನು ನೀನು ಚೆನ್ನಾಗಿ ಓದಿರುವೆಯಾ?

ಶಕಟಾರ:—ಓದಿರುತ್ತೇನಷ್ಟೇ, ಆದರೆ ಆ ಕೌಟಿಲ್ಯಸೂತ್ರ ಪುಸ್ತಕದೊಳಗಿನ ಎಷ್ಟೋ ಸೂತ್ರಗಳ ಅರ್ಥವು ಪ್ರಸ್ಫುಟವಾಗಿ ಗೊತ್ತಾಗದ್ದರಿಂದ, ಆ ಬಗ್ಗೆ ನಾನು ಕೇವಲ ನಿರಾಶೆಪಟ್ಟಿದ್ದೆನು; ದೈವವಶಾತ್ ತಾವು ಹೇಗೂ ಇಲ್ಲಿಗೇ ಬಂದಿರುವಿರಿ- ಅಂದಮೇಲೆ ಆ ವಿಷಯವಾಗಿ ನಾನು ಇನ್ನು ನಿರಾಶೆ ಪಡುವ ಕಾರಣವುಳಿದಿರುವದಿಲ್ಲ.

ಚಾಣಕ್ಯ:—ಶಕಟಾರ, ನನ್ನ ಮೂಲ ಗ್ರಂಥವು ನನ್ನೊಬ್ಬ ಶಿಷ್ಯನ ಬಳಿಯಲ್ಲಿಯೇ ಉಳಿಯಿತು. ನಿನ್ನಲ್ಲಿಯ ಆ ನಕಲನ್ನು ತಕ್ಕೊಂಡು ಬಾ, ನೋಡೋಣ, ಎಂದು ನುಡಿಯಲು, ಶಕಟಾರನು ಸುಮ್ಮನೆ ಅಲ್ಲಿಂದೆದ್ದು ತನ್ನ ಮನೆಗೆ ಹೋದನು. ಶಕಟಾರನ ಮನೆಯು ಆ ರಾಜಪ್ರಾಸಾದದಲ್ಲಿ ಚಾಣಕ್ಯನಿಳಿದುಕೊಂಡಿದ್ದ ಮನೆಯ ಪಕ್ಕದಲ್ಲಿಯೇ ಇತ್ತು. ಅದರಿಂದ ಅವನು ತುಸ ಹೊತ್ತಿನಲ್ಲಿಯೇ ಆ ಪ್ರತಿಯನ್ನು ತಕ್ಕೊಂಡು ಬಂದು ಚಾಣಕ್ಯಮುನಿಯ ಮುಂದೆ ಇಟ್ಟನು.

ಬಳಿಕ ಚಾಣಕ್ಯನು ಆ ಗ್ರಂಥವನ್ನು ಶಕಟಾರನಿಗೆ ಮರಳಿ ಕೊಟ್ಟು, ಇದರಲ್ಲಿಯ ಯಾವ ಯಾವ ಪ್ರಕರಣಗಳು ನಿನಗೆ ದುರ್ಬೋಧವಾಗಿರುವವೋ, ಅವನ್ನಿಷ್ಟು ಈಗ ಓದು. ನಾನು ಅವುಗಳ ಅರ್ಥವನ್ನು ನಿನಗೆ ಚೆನ್ನಾಗಿ ತಿಳಿಸುವೆನು, ಎನ್ನಲು, ಶಕಟಾರನು ಆ ಕೌಟಿಲ್ಯನೀತಿ ಪುಸ್ತಕದೊಳಗಿನ ತನಗೆ ಇದುವರೆಗೂ ಅರ್ಥವಾಗದಿದ್ದ ಭಾಗಗಳನ್ನು ಓದಲಾರಂಭಿಸಿದನು. ಚಾಣಕ್ಯನು ಅವುಗಳ ಅರ್ಥವನ್ನು ಚೆನ್ನಾಗಿ ವಿವರಿಸಿ ಹೇಳಿ

ಧನು. ಇದು ವರೆಗೆ ಯಾವ ಪ್ರಕರ್ಣಗಳ ಗರ್ಭಿತಾರ್ಥವು ತಿಳಿಯದ್ದರಿಂದ ಶಕಟಾರ ಮಂತ್ರಿಗೆ ಅವುಗಳ ವಿಷಯುವಾಗಿ ನೊಣ ತಿಂದಂತಾಗಿತ್ತೋ, ಅವುಗಳ ಇಂಗಿತವು ಕನ್ನಡಿಯೊಳಗಿನ ಪ್ರತಿಬಿಂಬದಂತೆ ಈಗ ಸ್ಪಷ್ಟವಾಗಿ ತೋರಹತ್ತಿತು ಈ ಗ್ರಂಥದೊಳಗಿನ ಬೇರೆ ಪ್ರಕರಣಗಳಾವವೂ ಈಗ ಬೇಕಿಲ್ಲ. ಕೇವಲ ವ್ಯೂಹರಚನೆಯ ವಿಷಯುವೊಂದನ್ನು ಚೆನ್ನಾಗಿ ಅವಗತ ಮಾಡಿಕೊಳ್ಳುವದು ಇಷ್ಟವಾಗಿದೆಯಾದುದರಿಂದ. ಅದನ್ನೇ ಇನ್ನೊಮ್ಮೆ ಓದು, ಎಂದು ಚಾಣಕ್ಯನು ಅನ್ನಲು, ಶಕಟಾರನು ಆ ಪ್ರಕರಣವನ್ನು ಮತ್ತೆ ಎರಡು-ಮೂರು ಸಾರೆ ಮನಸ್ಸುಗೊಟ್ಟು ಅವಲೋಕಿಸಿ, ಅದರ ಗರ್ಭಿತಾರ್ಥವನ್ನು ಮನನ ಮಾಡಿದನು. ಆದರೂ ಆ ಪ್ರಕಾರ ಕಾರ್ಯ ವನ್ನು ಮಾಡುವದು ಮಾತ್ರ ಅವನಿಗೆ ಒಮ್ಮೆಲೆ ತೋಚಲಿಲ್ಲ.

ಆ ಬಗ್ಗೆ ಎಷ್ಟೋ ಹೊತ್ತು ಆಲೋಚಿಸಿದ ಬಳಿಕ ಶಕಟಾರನು:— ಈ ಪಾರ್ವತ್ಯರಾಜ್ಯಕ್ಕೆ ನಾನು ಹೊಸಬನು. ಇದರ ಎಡಬಲದ ಪ್ರದೇಶ ಗಳು ನನಗೆ ಚೆನ್ನಾಗಿ ಪರಿಚಿತವಾದವುಗಳಲ್ಲ. ಆದುದರಿಂದ ಅವುಗಳ ಪರಿಜ್ಞಾನವುಳ್ಳ ಮಲಯಕೇತು ರಾಜನಾಗಲಿ, ಕುಮಾರ ಚಂದ್ರಗುಪ್ತ ನಾಗಲಿ ಇಲ್ಲಿ ಹೇಗೆ ವ್ಯೂಹ ರಚಿಸಿದರೆ, ಕಾರ್ಯ ಸಾಧಿಸೀತೆಂಬದನ್ನು ಹೇಳಲರ್ಹರಾಗಿದ್ದಾರೆ, ಎಂದನು.

ಚಾಣಕ್ಯಃ—ಮಂತ್ರಿನ್, ನೀನಿನ್ನು ತುಸ ವಿಶ್ರಾಂತಿ ಹೊಂದು. ಆ ವ್ಯೂಹರಚನೆಯ ಬಗ್ಗೆ ನಾನೂ ಆಲೋಚಿಸುವೆನು. ಇಂದು ಸಾಯಂ ಕಾಲಕ್ಕೆ ನಾನು, ನೀನು ಹಾಗು ಚಂದ್ರಗುಪ್ತರು ಕೂಡಿ ಮಲಯಕೇತು ವಿನೊಡನೆ ಈ ವಿಷಯುವಾಗಿ ಆಲೋಚಿಸಿ ನಿರ್ಧರಿಸೋಣ.

ಆ ವ್ಯೂಹರಚನೆಯ ವಿಷಯುವನ್ನೇ ಮನಸ್ಸಿನಲ್ಲಿ ನುರಿಸುತ್ತ ಶಕಟಾ ರನು ಅಲ್ಲಿಂದೆದ್ದು ಹೋದನು. ಚಾಣಕ್ಯಮುನಿಯು ಆ ಕೃಷ್ಣಾಜಿನದ ಮೇಲೆ ಪವಡಿಸಿದನು. ತುಸ ಹೊತ್ತಿನಲ್ಲಿಯೇ ಅವನನ್ನು ಗಾಢವಾದ ನಿದ್ರೆಯು ಆವರಿಸಿತು.

ಚಾಣಕ್ಯನಿಗೆ ನಿದ್ದೆ ಹತ್ತಿದ ಕೆಲ ಹೊತ್ತಿನ ಮೇಲೆ ಅಲ್ಲಿಗೊಬ್ಬ ವಿದ್ಯುತ್‌ವರ್ಣದ ನವ ತರುಣಿಯು ಸ್ವಲ್ಪವೂ ಕಾಲು ಸಪ್ಪಳ ಮಾಡದಂತೆ ಬಂದಳು. ಆ ಕೋಣೆಯಲ್ಲಿಯೇ ಒತ್ತಟ್ಟಿಗೆ ನವಿಲುಗರಿಗಳಿಂದ ನಿರ್ಮಿಸ ಲ್ಪಟ್ಟ ಒಂದು ಸುಂದರವಾದ ಬೀಸಣಿಕೆಯು ಇರಿಸಲ್ಪಟ್ಟಿತ್ತು. ಆ ಸುಂದ ರಿಯು ಆ ಬೀಸಣಿಕೆಯನ್ನು ತಕ್ಕೊಂಡು ಚಾಣಕ್ಯಮುನಿಯ ಪಾರ್ಶ್ವದಲ್ಲಿ ಕುಳಿತು, ಅದರಿಂದ ಆತನಿಗೆ ಮಂದ-ಮಂದವಾಗಿ ಗಾಳಿ ಬೀಸಹತ್ತಿದಳು.

ಆ ಮಧ್ಯಾಹ್ನ ಕಾಲದಲ್ಲಿಯು ಆ ಪ್ರಕಾರದ ಹಿತಕರವಾದ ಶುಶ್ರೂಷೆಯಿಂದ ಚಾಣಕ್ಯನ ತಂದ್ರಾವಸ್ಥೆಯು ಮತ್ತಿಷ್ಟು ಹೆಚ್ಚಿತು.

ಚಾಣಕ್ಯನಿಗೆ ಗಾಳಿ ಹಾಕುತ್ತಿದ್ದ ಆ ರಮಣಿಯು ಮತ್ತಾರೂ ಆಗಿರಲಿಲ್ಲ; ನಮ್ಮ ವಾಚಕರ ಚಿರಪರಿಚಿತಳಾದ ಮಂದಾಕಿನಿ ಸುಂದರಿಯು. ಮಂದಾಕಿನಿಯು ಬಾಲ್ಯದಿಂದಲೇ ದೇವ-ದ್ವಿಜರಲ್ಲಿ ಭಕ್ತಿಯುತಳು. ನಿನ್ನೆ ಚಾಣಕ್ಯಮುನಿಯು ಇಡಿ ರಾತ್ರಿಯಲ್ಲಿ ಜಾಗರಣೆ ಮಾಡಿ, ಉಪಾಸನಾ ತತ್ಪರನಾಗಿದ್ದನೆಂಬದು ಅವಳಿಗೆ ಗೊತ್ತಿತ್ತು. ಹಾಗು ಆಹಾರಾಂತ್ಯದಲ್ಲಿ ಇಂದು ಅವನು ನಿದ್ರಾಪರವಶನಾಗುವನೆಂಬದನ್ನು ಅವಳು ಮೊದಲೇ ತಿಳಿದಿದ್ದಳು ಾದರಿಂದ ಶಕಟಾರ ಮಂತ್ರಿಯು ಅಲ್ಲಿಂದ ಹೊರಟುಹೋದ ಕೆಲ ಕ್ಷಣಗಳಲ್ಲಿಯೇ ಚಾಣಕ್ಯನು ಗೊರಕೆ ಹೊಡೆಯಹತ್ತಿದ್ದನ್ನು ಮರೆಗೆ ನಿಂತ ಮಂದಾಕಿನಿಯು ನೋಡಿದಳು. ಕೂಡಲೆ ಸಂಧಿಸಾಧಿಸಿ ಅವಳು ಆ ಮುನಿವರನ ಸೇವಾತತ್ಪರಳಾದಳು

ಕೆಲಹೊತ್ತಿನ ಮೇಲೆ ಚಾಣಕ್ಯನಿಗೆ ಎಚ್ಚರವಾಯಿತು. ಆಗ ಅವನು ತನ್ನ ಬಳಿಯಲ್ಲಿ ಕುಳಿತು ತನಗೆ ಗಾಳಿಬೀಸುತ್ತಿದ್ದ ಮಂದಾಕಿನಿಯನ್ನು ನೋಡಿದನು. ಕೂಡಲೆ ಎದ್ದು ಕುಳಿತು ಆಕೆಯನ್ನು ಕುರಿತು:— ತಾಯಿ, ನೀನು ನನಗೆ ಒಂದು ವಿಷಯದ ಬಗ್ಗೆ ಆಲೋಚನೆ ಹೇಳಬೇಕಾಗಿದೆ; ಕೇಳಕೊಳ್ಳಲೋ? ಎಂದು ಪ್ರಶ್ನೆ ಮಾಡಿದನು.

ಮಂದಾಕಿನಿಯು:-ವಿಪ್ರಶ್ರೇಷ್ಠಾ. ನಾನು ಅಬಲೆಯಾದ ಸಾಮಾನ್ಯ ಹೆಂಗಸು; ಮೇಲಾಗಿ ಅಪ್ರಬುದ್ಧಳಾದ ಹುಡುಗೆಯು. ತಮ್ಮಂಥ ಮಹಾ ಪಂಡಿತರಿಗೆ ಆಲೋಚನೆ ಹೇಳುವ ಸಾಮರ್ಥ್ಯವು ನನಗೆಲ್ಲಿಂದ ಬರಬೇಕು?

ಚಾಣಕ್ಯ:—ಹೆಂಗಸರೆಂದರೆ ಸಾಮಾನ್ಯರಲ್ಲ. ಅವರು ವೀರ್ಯವಂತರಾದ ಮಕ್ಕಳನ್ನು ಪಡೆದು ವೀರಮಾತೆಯಾಗುವರು; ವೀರರ ಹೆಂಡತಿಯರಾಗಿ ಸಂಕಟ ಸಮಯದಲ್ಲಿ ಅವರಿಗೆ ಯೋಗ್ಯ ಪರಾಮರ್ಶವನ್ನು ಕೊಡುತ್ತ ವೀರಪತ್ನಿಯಾಗುವರು ಹೀಗಿದ್ದು, ತಾಯಿ. ನನ್ನಂಥ ಪುತ್ರನಿಗೆ ನೀನು ಯೋಗ್ಯ ಆಲೋಚನೆಯನ್ನು ಹೇಳಲಾರೆಯಾ? ಎಂದಂದು. ಚಾಣಕ್ಯನು ಮುಗುಳು ನಗೆ ನಕ್ಕನು.

# ಗುರುವಿನ ಸಂಪರ್ಕ ಅತಿ ಕಠೋರ

........................

ಚಾಣಕ್ಯ ಮುನಿಯ ಈ ಪ್ರಕಾರದ ವಿಷ್ಟಭಾಷಣದಿಂದ ಮಂದಾಕಿನಿಗೆ ತುಸ ನಾಚಿಕೆಯುಂಟಾಯಿತು. ಸ್ವಾಭಾವಿಕವಾಗಿದ್ದ ಅವಳ ಆರಕ್ತ ಗಲ್ಲಗಳು ಮತ್ತಿಷ್ಟು ಗುಲಾಬೀ ವರ್ಣವನ್ನು ಧರಿಸಿದವು. ಕೆಲ ನಿಮಿಷಗಳ ತರುವಾಯ ಅವಳು:—ಮುನಿವರಾ, ತಾವು ನನಗೆ ಯಾವ ಪ್ರಶ್ನೆಯನ್ನು ಮಾಡತಕ್ಕವರಿರುವಿರಿ? ಎಂದು ಕೇಳಿದಳು.

ಚಾಣಕ್ಯ:—ತಾಯಿ, ಕೇವಲ ಕೌಶಲ್ಯದಿಂದ ಶತ್ರುಗಳನ್ನು ಜೇರಿಗೆ ತರುವದೇ ನನ್ನ ಉದ್ದೇಶವು. ಆ ನನ್ನ ಉದ್ದೇಶ ಸಾಧನೆಗಾಗಿ ಯೋಗ್ಯ ಪ್ರಕಾರದ ವ್ಯೂಹವನ್ನು ರಚಿಸಿ, ಮರೆಗೆ ನಿಂತು ಯುದ್ಧ ಮಾಡುವ ಹಂಚಿಕೆ ಹಾಕಬೇಕೆನ್ನುತ್ತೇನೆ; ಅದಕ್ಕಾಗಿ ನಾನು ಕ್ಷುದ್ರ ಪರ್ವತರಾಜ್ಯದ ಸುತ್ತುಮುತ್ತಲಿನ ಇಕ್ಕಟ್ಟಿನ ಪ್ರದೇಶಗಳನ್ನು ಒಮ್ಮೆ ಕಣ್ಮುಟ್ಟಿ ನೋಡಿ ಬರಜೇಕೆನ್ನುತ್ತೇನೆ. ಈ ನನ್ನ ಉದ್ದೇಶವನ್ನು ನಿನ್ನ ಹೊರತು ಕೊನೆಗಾಣಿಸುವವರಾರು? ತಾಯಿ, ನನ್ನನ್ನು ಈಗಲೆ ಈ ಪರ್ವತರಾಜ್ಯದಲ್ಲಿಯ ಗಡಚಾದ ಗಿರಿ-ಗುಡ್ಡಗಳ ಪ್ರದೇಶಕ್ಕೆ ಕರೆಕೊಂಡು ನಡೆ, ಎಂದು ಹೇಳಲು, ಮಂದಾಕಿನಿಯು ಆಗಲೆ ಆ ಪ್ರಖರವಾದ ನಡುಹಗಲಿನ ಬಿಸಿಲಿನ ತಾಪದಲ್ಲೆ ಮುಂದುವರೆದಳು. ಚಾಣಕ್ಯನು ಅವಳನ್ನು ಹಿಂಬಾಲಿಸಿ ನಡೆದನು. ಅವರು ಒಂದು ಕಾಲುಹಾದಿಯನ್ನು ಹಿಡಿದು, ಸಮೀಪದ ಒಂದು ಎತ್ತರವಾದ ಗುಡ್ಡವನ್ನು ಹತ್ತಿದರು. ಅಲ್ಲಿ ನಿಂತುಕೊಂಡು ಚಾಣಕ್ಯನು ನೋಡಿಕೊಳ್ಳತಕ್ಕದ್ದನ್ನೆಲ್ಲ ನೋಡಿಕೊಂಡನು. ನಂತರ ಅವರು ಒಂದು ಇಕ್ಕಟ್ಟಾದ ಖಿಂಡಿಯೊಳಗಿಂದ ಹೊರಬಿದ್ದು, ಮತ್ತೊಂದು ಗುಡ್ಡವನ್ನೇರಿದರು. ಅಲ್ಲಿಂದ ಮಗಧದೇಶದ ರಾಜಧಾನಿಯಾದ ಪಾಟಲಿಪುತ್ರ ಪಟ್ಟಣವು ಸ್ಪಷ್ಟವಾಗಿ ಕಾಣಿಸುತ್ತಿತ್ತು. ಆ ಗುಡ್ಡದ ಕೆಳಭಾಗದಲ್ಲಿಯೇ ಬಹು ಆಳವಾದ ಪ್ರದೇಶದಲ್ಲಿ ಒಂದು ಗಿರಿನದಿಯು ಒಳ್ಳೇ ವೇಗದಿಂದ ಪ್ರವಹಿಸುತಲಿತ್ತು. ಚಾಣಕ್ಯನು ಮಂದಾಕಿನಿಯಿಂದ ಆ ನದಿಯ ಉಗಮವು ಪರ್ವತರಾಜ್ಯದ ಸೀಮೆಯಲ್ಲಿಯೇ ಇರುವದೆಂಬದನ್ನೂ, ಆ ನದಿಯ ನೀರನ್ನು ಕಡಿಮೆ ಮಾಡಲಿಕ್ಕೂ-ಹೆಚ್ಚಿಸಲಿಕ್ಕೂ ಬರುವ ಹಾಗೆ ಅದನ್ನು ತಮ್ಮ ಶ್ರೀ ಮಹಾಕಾಲಭೈರವನ ದೇವಾಲಯದ ಹಿಮ್ಮಗ್ಗಲಿನಲ್ಲಿ ಅಡ್ಡಕಟ್ಟಿ, ಅಲ್ಲಿಯೊಂದು ಸರೋವರವನ್ನು ಕಲ್ಪಿಸಿ, ಅದಕ್ಕೆ ತುಂಬುಗಳನ್ನು ಮಾಡಿರುವರೆಂಬದನ್ನೂ

ಕೇಳಿಕೊಂಡನು. ಬಳಿಕ ಆತನು ಅವಳೊಡನೆ ಆ ಸರೋವರಕ್ಕೆ ಬಂದು ಆ ತುಂಬಿನ ಬೆಣೆಯನ್ನು ಬೇಕಾದಾಗ ಎತ್ತುವ ಹಾಗು ಕೆಳಗೆ ಬಿಡುವ ಯುಕ್ತಿಯನ್ನು ಕಣ್ಮುಟ್ಟಿ ನೋಡಿ, ಬಳ್ಳೇ ಆನಂದಿತನಾಗಿ ಮಂದಾಕಿನಿಯನ್ನು ಕುರಿತು:—ತಾಯಿ, ಮಂದಾಕಿನೀ, ನನ್ನ ಉದ್ದೇಶವನ್ನಂತೂ ನಾನು ನಿನಗೆ ಈ ಮೊದಲೇ ತಿಳಿಸಿರುತ್ತೇನೆ. ನಾನು ತಾಯಿಯೆಂದು ನಿನ್ನನ್ನು ಎಲ್ಲಕ್ಕೂ ಮೊದಲು ನೋಡಿದಾಗಲೇ ಸಂಬೋಧಿಸಿರುವೆನು, ತಾಯಿಗೆ ಆನಂದವಾಗುವಂಥ ಕೃತಿಯನ್ನು ಮಾಡುವದೇ ಸತ್ಪುತ್ರನ ಪವಿತ್ರ ಕರ್ತವ್ಯವು. ಈ ಪ್ರಸ್ತುತ ಯುದ್ಧದಲ್ಲಿ ಯಾವ ಕಾರಣದಿಂದ ಮಗಧ ದೇಶದ ನಂದರಾಜನಿಗೆ ಅಪಜಯವಾಗಿ ಫಿಮುಗೆ ಜಯವಾಯಿತೆಂಬದು ಯಾರಿಗೂ ತಿಳಿಯದ ಹಾಗೆ ನಾನು ಒಂದು ಕೆಲಸ ಮಾಡುವೆನು ನೋಡು; ಆದರೆ ಆ ಕೀರ್ತಿಯೆಲ್ಲ ನಿನ್ನ ಪಾಲಿಗೇ ಬರುವದು. ನೀನು ಗುಪ್ತರೀತಿಯಿಂದ ಯಾವ ಸಹಸ್ರ ಸಂಖ್ಯಾಕ ಸೇನೆಯನ್ನು ನಿರ್ಮಿಸಿರುವೆಯೋ, ಆ ಅಲ್ಪ ಸೈನ್ಯದ ಬಲದಿಂದಲೇ ಈ ಕೆಲಸವಾಗುವ ಹಾಗೆ ಮಾಡುವೆನು. ತಾಯಿ, ಇದರಿಂದ ನಿನ್ನ ಕೀರ್ತಿಯು ದಿಗಂತದಲ್ಲಿ ವ್ಯಾಪಿಸುವದು.

ಚಾಣಕ್ಯನ ಆ ಮಾತನ್ನು ಕೇಳಿ ಮಂದಾಕಿನಿಯು ಸುಹಾಸ್ಯವದನದಿಂದ:—ತಾವು ನನ್ನನ್ನು ತಾಯಿಯೆಂದು ಸಂಬೋಧಿಸಿರುವದರಿಂದ, ನಾನು ಧನ್ಯಳಾಗಿರುತ್ತೇನೆ. ತಮ್ಮಂಥ ಸುಪಂಡಿತ ಸುಪುತ್ರರು ಎಷ್ಟು ಜನ ತಾಯಂದಿರಿಗೆ ದೊರೆಯುವರು? ವಿಪ್ರಶ್ರೇಷ್ಠರೇ, ನಡೆಯಿರಿ, ಇನ್ನು ಮನೆಗೆ ಹೋಗೋಣ, ಎಂದೆಂದು, ಚಾಣಕ್ಯನೊಡನೆ ಅವಳು ಅರಮನೆಗೆ ಬಂದಳು.

ಮನೆಗೆ ಬರುವಷ್ಟರಲ್ಲಿ ಶಕಟಾರನು ಚಾಣಕ್ಯನ ಕೋಣೆಯಲ್ಲಿಯೇ ಅವನ ದಾರೀ ಕಾಯುತ್ತ ಕುಳಿತಿದ್ದನು. ಇಂಥ ಪ್ರಖರವಾದ ಬಿಸಿಲಲ್ಲಿ ಚಾಣಕ್ಯನು ಎಲ್ಲಿಗೆ ಹೋದನೆಂಬದು ಯಾರಿಗೂ ಗೊತ್ತಿರಲಿಲ್ಲ. ಶಕಟಾರನು ದೃಷ್ಟಿಗೆ ಬಿದ್ದೊಡನೆ ಚಾಣಕ್ಯನು:—ಮತ್ತೇನಾದರೂ ಹೊಸ ಸುದ್ದಿ ತಿಳಿದಿದೆಯೇನು? ಎಂದು ಪ್ರಶ್ನೆ ಮಾಡಿದನು.

ಶಕಟಾರ:—ನಾವು ಈ ಮೊದಲು ಕಳಿಸಿದ್ದ ಹೇರನು ಬಂದಿರುವನು. ಅವನು ತಂದಿರುವ ಸುದ್ದಿಯು ಚಿಂತಾಜನಕವಾಗಿರುವದು. ಮಾಗಧೀ ಸೇನೆಯು ಇಬ್ಭಾಗವಾಗಿ ವಿಭಾಗಿಸಲ್ಪಟ್ಟಿದ್ದು, ಒಂದು ಭಾಗದ ಅಧಿಪತಿಯು ಸೇನಾಪತಿ ವಿಕ್ರಮಸಿಂಹನೆಂದೂ, ಇನ್ನೊಂದು ಭಾಗಕ್ಕೆ ಸ್ವತಃ ನಂದ

ಭೂಪತಿಯೇ ನಾಯಕನೆಂದೂ ಗೊತ್ತು ಮಾಡಿಕೊಂಡಿರುವರಂತೆ. ಆ ಸೇನೆಯು ಈ ಕ್ಷುದ್ರ ರಾಜ್ಯವನ್ನು ನಾಲ್ಕೂ ಕಡೆಯಿಂದ ಸುತ್ತುಗಟ್ಟಿ ಬರಲಾರಂಭಿಸಿದೆಯಂತೆ. ಅವರ ಆ ಸಿದ್ಧತೆಯಿಂದ ಊಹಿಸಿದರೆ, ಒಂದೆರಡು ದಿನಗಳಲ್ಲಿಯೇ ಅವರು ನಮ್ಮ ನಾಡಿನ ಗಡಿಗಳನ್ನೆಲ್ಲ ಕಟ್ಟು ಮಾಡುವರಾಗಿ ತಿಳಿಯುತ್ತದೆ.

ಚಾಣಕ್ಯನು ತುಸ ವಿಚಾರ ಮಾಡಿ ಮ್ಲಾನವದನದಿಂದ:— ಈ ಸುದ್ದಿಯು ಮಲಯಕೇತು ಮಹಾರಾಜನಿಗೆ ಗೊತ್ತಾಗಿದೆಯೇನು?

ಶಕಟಾರ:— ಈ ಸುದ್ದಿಯನ್ನು ನಾನು ಅವರ ಮುಖದಿಂದಲೇ ತಿಳಿದಿರುವೆನು, ಎನ್ನಲು, "ಹಾಗಾದರೆ ಈ ಬಗ್ಗೆ ಈಗಲೇ ಯೋಚಿಸಿ, ಮುಂದಿನ ಬೇತನ್ನು ನಿರ್ಧರಿಸಬೇಕಾಗಿದೆ; ಆದ್ದರಿಂದ ಮಂತ್ರಿವರಾ, ಮಲಯಕೇತು-ಚಂದ್ರಗುಪ್ತರಿದ್ದಲ್ಲಿಗೇ ಹೋಗೋಣ ನಡೆ" ಎಂದು ನುಡಿದು, ಚಾಣಕ್ಯನು ಅಲ್ಲಿಂದ ನಡೆದನು. ಶಕಟಾರನೂ ಅವನನ್ನನುಸರಿಸಿ ಸಾಗಿದನು. ಕೆಲ ಹೊತ್ತಿನಲ್ಲಿಯೇ ಅವರೀರ್ವರೂ ಮಲಯಕೇತುವಿನ ದಿವಾಣಖಾನೆಯನ್ನು ಪ್ರವೇಶಿಸಿದರು. ಮಲಯಕೇತು ಹಾಗು ಚಂದ್ರಗುಪ್ತರು ಅಲ್ಲಿ ಚಿಂತಾಮಗ್ನರಾಗಿ ಕುಳಿತುಕೊಂಡಿದ್ದರು. ಚಾಣಕ್ಯನು ಆಕಸ್ಮಿಕವಾಗಿ ಅಲ್ಲಿಗೆ ಹೋದುದರಿಂದ ಅವರು ಚಟ್ಟನೆ ಎದ್ದು ನಿಂತರು. ಚಾಣಕ್ಯನೂ, ಶಕಟಾರನೂ ಯೋಗ್ಯ ಆಸನಗಳ ಮೇಲೆ ಮಂಡಿಸಿದ ನಂತರ ಮಲಯಕೇತು-ಚಂದ್ರಗುಪ್ತರು ಚಾಣಕ್ಯನ ಪಾದ ಮುಟ್ಟಿ ನಮಸ್ಕಾರ ಮಾಡಿ ತಮ್ಮತಮ್ಮ ಸ್ಥಾನಗಳಲ್ಲಿ ಕುಳಿತರು.

ಬಳಿಕ ಚಾಣಕ್ಯನು:— ಮಹಾರಾಜ! ಮಗಧ ಸೇನೆಯು ನಿಮ್ಮ ರಾಜ್ಯವನ್ನು ಆಕ್ರಮಿಸಲಿಕ್ಕೆ ತತ್ಪರವಾಗಿರುವದನ್ನು ಶಕಟಾರನಿಂದ ಕೇಳಿರುವೆನು ನೀವು ನಿಮ್ಮ ಸೇನೆಯ ಬಗ್ಗೆ ಏನು ನಿಷ್ಕರ್ಷಿಸಿರುವಿರಿ?

ವಿಷಣ್ಣ ವದನದಿಂದ ಮಲಯಕೇತುವು:— ಮುನಿವರ್ಯರೇ, ನಿಷ್ಕರ್ಷಿಸುವದೇನು? ಸ್ವಾತಂತ್ರ್ಯ ರಕ್ಷಣೆಗಾಗಿ ಪ್ರಾಣವನ್ನು ಕೂಡಾ ತ್ಯಜಿಸಲಿಕ್ಕೆ ನಾವು ಸಿದ್ಧರಾಗಿರುತ್ತೇವೆ. ನಾವಿಬ್ಬರೂ ಸೇನಾನಾಯಕರಾಗಿ ಯುದ್ಧ ಮಾಡುತ್ತೇವೆ. ಇಂದಿನ ಮಿತಿಗೆ ನಮ್ಮ ಬಳಿಯಲ್ಲಿ ಇಪ್ಪತ್ತೈದು ಸಹಸ್ರ ಜನ ದಂಡಾಳುಗಳಿರುತ್ತಾರೆ. ಅವರು ಯುದ್ಧಕಲೆಯಲ್ಲಿ ನಿಪುಣರಾಗಿರುತ್ತಾರೆ. ನಾಳೆ ಬೆಳಗಾಗುವಷ್ಟರಲ್ಲಿ ನಾವೂ ನಮ್ಮ ಸೈನ್ಯದೊಡನೆ ನಮ್ಮ ಗಡಿಗಳಲ್ಲಿ ಠಾಣ್ಯಗಳನ್ನು ಕಲ್ಪಿಸಿಕೊಂಡು ಶತ್ರುಸೇನೆಯು ಮುಂದೆ ಬಾರದ ಹಾಗೆ ಅಡ್ಡಿ ಮಾಡುತ್ತೇವೆ.

ಚಾಣಕ್ಯ:— ಮಲಯಕೇತು ಮಹಾರಾಜ, ನಿಮ್ಮ ಯೋಜನೆಯಂತೆ ಯುದ್ಧಕ್ಕೆ ಸನ್ನದ್ಧರಾಗುವ ಸಮಯವಿದಲ್ಲ. ಯಾವ ಕಾಲಕ್ಕೆ ಧರ್ಮ ಯುದ್ಧವು ನಡೆಯುವದೋ, ಉಭಯತರ ಬಲಾಬಲಗಳು ಸರಿಯಾಗಿ ರುವವೋ, ಆ ಕಾಲಕ್ಕೇ ನಿಮ್ಮ ಯೋಜನೆಯು ಅನುಸರಿಸತಕ್ಕಂತಹದು; ಆದರೆ ಪ್ರಸ್ತುತದ ಯುದ್ಧವು ಅಸಮ ಬಲದ್ದು, ಅಧರ್ಮಕರವಾದದ್ದು. ಯಾವ ತಪ್ಪೂ ಇಲ್ಲದಂಥ ನಿಮ್ಮ ಕ್ಷುದ್ರರಾಜ್ಯವನ್ನು ಕೇವಲ ಹೆಮ್ಮೆಯಿಂದ ಆವೃತ್ತನಾದ ನಂದರಾಜನು ಆಕ್ರಮಿಸುವ ಉದ್ಯೋಗ ನಡೆಸಿರುವನು. ಆದುದರಿಂದ ಈ ಪ್ರಸಂಗದಲ್ಲಿ ನಾವಾದರೂ ಮರೆಗೆ ನಿಂತು ಯುದ್ಧ ಮಾಡಿಯೇ ಶತ್ರುಗಳನ್ನು ಹಣ್ಣಿಗೆ ತರುವ ಪ್ರಯತ್ನ ಮಾಡುವದು ವಿಹಿತ ಕರವಾದ ಮಾರ್ಗವು. ಮಹಾರಾಜ! ನೀವು ನಾಳೆಗೆ ನಮ್ಮ ಗಡಿಗಳನ್ನು ಸಂರಕ್ಷಿಸುವದಕ್ಕಾಗಿ ಬಹಿರಂಗವಾಗಿ ಅಲ್ಲಿ ಸೇನೆಯನ್ನು ಸಾಗಿಸಿಕೊಂಡು ಹೋಗಿ ಕೂಡ್ರುವದಕ್ಕಿಂತ, ನಮ್ಮ ಸೇನೆಯನ್ನು ಬೇರೆ ಬೇರೆ ತಂಡಗಳ ನ್ನಾಗಿ ಮಾಡಿ, ಗಿರಿ-ಗಂಹ್ವರಗಳಲ್ಲಿಯೂ, ಗಿಡ-ಗಂಟೆಗಳ ಮರೆಯಲ್ಲಿಯೂ ಹೊಂಚು ಹಾಕಿ ಕೂಡ್ರಿಸಿರಬೇಕು ಶತ್ರುಗಳು ನಮ್ಮ ಅಳವಿನಲ್ಲಿ ಬಂದ ಬಂದಂತೆ ನಾವು ಆ ಶತ್ರುಸೈನ್ಯವನು ಸಂಹರಿಸಿ, ಮತ್ತೆ ತಲೆ ತಪ್ಪಿಸಿ ಕೊಂಡು ಕೂಡ್ರಬೇಕು. ಶತ್ರುಸೇನೆಯನ್ನು ಹೀಗೆ ಹಣ್ಣಿಗೆ ತರಹತ್ತಲು, ಅವರು ಪಾಟಲಿಪುತ್ರದ ಕಡೆಗೆ ಪಲಾಯನ ಮಾಡಹತ್ತುವರು. ಆಗ ಅವ ರನ್ನು ಅತ್ತಲೂ ಹೋಗದ ಹಾಗೆ ನಾನು ನೋಡಿಕೊಳ್ಳುವೆನು; ನನ್ನ ಈ ಯುಕ್ತಿಯ ಫಲಾಫಲವನ್ನು ನೋಡಿಕೊಂಡು, ಆ ಮೇಲೆ ಮುಂದಿನ ವಿಚಾರವನ್ನು ಗೊತ್ತುಪಡಿಸೋಣ

ಆಗ ಚಂದ್ರಗುಪ್ತನು:—ಮುನಿವರರೇ, ತಮ್ಮ ಯುಕ್ತಿಯೇ ಸರಿ ಯಾದದ್ದೆಂದು ನನಗನಿಸುತ್ತದೆ ನಾವು ನಮ್ಮ ಬಾಹುಬಲದಿಂದಲೇ ಯುದ್ಧತತ್ಪರರಾಗಬೇಕೆಂದಿದ್ದೆವು; ಆದರೆ ತಾವು ನುಡಿದಂತೆ ಕೌಶಲ್ಯ ದಿಂದ ಯುದ್ಧ ಮಾಡುವದೇ ಯೋಗ್ಯವೆಂಬದು ನಮಗೆ ಈ ಮೊದಲು ತಿಳಿದಿರಲಿಲ್ಲ. ನಾವು ತಮ್ಮ ಉಪದೇಶದಂತೆಯೇ ನಡೆಯುವೆವು.

ಬಳಿಕ ಚಾಣಕ್ಯನು:— ನನಗೆ ಇನ್ನೆರಡು ಜನ ಕೇವಲ ವಿಶ್ವಾಸುಕ ರಾದಂಥ ಪ್ರಣಿಧಿಗಳನ್ನು ಕೊಡಿರಿ. ಅವರನ್ನು ನಾನು ಯಾವ ಕೆಲಸಕ್ಕೆ ನಿಯಮಿಸುವೆನೋ ಆ ವಿಷಯವಾಗಿ ನಿಮ್ಮಲ್ಲಿ ಯಾರೂ ಪೃಚ್ಛಾಪೃಚ್ಛ ಮಾಡಕೂಡದು ಯೋಗ್ಯ ಸಮಯದಲ್ಲಿ ಆ ಪ್ರಣಿಧಿಗಳ ದ್ವಾರದಿಂದ ನಾನು ಯಾವ ಮಹತ್ವದ ಕೆಲಸವನ್ನು ಸಾಧಿಸುವೆನೆಂಬದನ್ನು ತಿಳಿಸುತ್ತೇನೆ.

ಈ ಕೆಲಸವನ್ನು ಮಂತ್ರಿವರ ಶಕಟಾರರೇ ಮಾಡುವರು. ಯಾಕಂದರೆ, ನಮ್ಮ ರಾಜ್ಯದ ಪ್ರಣಿಧಿಗಳೆಲ್ಲರೂ ಸದ್ಯಕ್ಕೆ ಅವರ ಆಧೀನದಲ್ಲಿಯೇ ಇರುವರು, ಎಂದಂದು ಚಾಣಕ್ಯನಿಗೆ ಪುನಃ ನಮಸ್ಕರಿಸಿ ಮಲಯಕೇತುವು ಬೇರೆ ಕೆಲಸಕ್ಕಾಗಿ ಅಲ್ಲಿಂದ ಹೊರಟು ಹೋದನು. ಆ ದಿವಾಣಖಾನೆಯಲ್ಲಿ ಚಾಣಕ್ಯ, ಶಕಟಾರ ಹಾಗು ಚಂದ್ರಗುಪ್ತರು ಎಷ್ಟೋ ಹೊತ್ತಿನ ವರೆಗೆ ಕುಳಿತು ಆಲೋಚಿಸಿದರು. ನಂತರ ಚಾಣಕ್ಯನು ಶಕಟಾರನಿಗೆ:— ಮಂತ್ರಿನ್, ನೀನು ನನ್ನ ಕೋಣೆಗೆ ಹೋಗಿ ತುಸ ಹೊತ್ತು ಕಾದಿರು. ನಾನು ಈಗಲೇ ಚಂದ್ರಗುಪ್ತನೊಡನೆ ಕೆಲವು ಗುಪ್ತ ಸಂಗತಿಗಳ ನಿಷ್ಕರ್ಷ ಮಾಡಿಕೊಂಡು ಬರುವೆನು, ಎಂದು ಹೇಳಿದನು. ಕೂಡಲೆ ಶಕಟಾರನು ಅಲ್ಲಿಂದ ಹೊರಟು ಹೋದನು. ಬಳಿಕ ಚಾಣಕ್ಯನು ಚಂದ್ರಗುಪ್ತನ ತಲೆಯ ಮೇಲೆ ತನ್ನ ಅಭಯ ಕರವನ್ನಿಟ್ಟು:—ತಮ್ಮಾ, ಚಂದ್ರಗುಪ್ತಾ, ನಮ್ಮ ಗುರುಗಳಾದ ಸ್ವಾಮಿ ಯೋಗಾನಂದರು ನಿನ್ನ ಜಾತಕವನ್ನು ನೋಡಿ ಒಮ್ಮೆ ಒಂದು ಅದ್ಭುತ ಭವಿಷ್ಯವಾಣಿಯನ್ನು ನುಡಿದಿರುವರು. ಅವರು ನಿನ್ನ ಮುಖಮಂಡಲದ ಹಾಗು ಭಾಲಪ್ರದೇಶದ ಮೇಲಿರುವ ಎಷ್ಟೋ ಸುಚಿಹ್ನಗಳನ್ನು ನೋಡಿ ತಿಳಿಸಿರುವದೇನಂದರೆ:—"ಕುಮಾರ ಚಂದ್ರಗುಪ್ತನು ಮಗಧ ದೇಶದ ಸಾರ್ವಭೌಮಚಕ್ರವರ್ತಿಯಾಗುವನು" ಅವರ ಈ ಭವಿಷ್ಯದ್ವಾಣಿಯು ಎಂದಿಗಾದರೂ ಸುಳ್ಳಾದೀತೇ?

ಚಂದ್ರಗುಪ್ತ:—ಭೂಸುರರೇ, ಕೆಲವು ದಿನಗಳ ಹಿಂದೆ ಸ್ವಾಮಿಯವರು ಈ ಸಂಗತಿಯನ್ನು ನನ್ನೆದುರಿಗೆ ಕೂಡ ಆಡಿ ತೋರಿಸಿದ್ದರು. ಅವರಂಥ ಪ್ರಾಜ್ಞರ ಮುಖದಿಂದ ಹೊರಟ ಶಬ್ದಗಳಲ್ಲಿ ದುರ್ಭಾಗ್ಯದಿಂದ ಪೀಡಿತನಾದ ನಾನು ಅವಿಶ್ವಾಸ ತಾಳುವದಾದರೂ ಹೇಗೆ? ಅವರು ಸಾಕ್ಷಾತ್ ಯೋಗಾಚಾರ್ಯರು! ಆ ಮಹನೀಯರ ಮಾತಿನಲ್ಲಿ ನನ್ನ ಪೂರ್ಣವಿಶ್ವಾಸವೇನೋ ಇರುವದು; ಆದರೆ ನನ್ನ ಆ ಭಾಗ್ಯದ ವಿಷಯದಲ್ಲಿ ಮಾತ್ರ ನಾನು ಸಂಪೂರ್ಣವಾಗಿ ಅವಿಶ್ವಾಸವುಳ್ಳವನಾಗಿರುತ್ತೇನೆ ಆದರಿಂದ ಯಾವಾಗಾದರೊಮ್ಮೆ ನನ್ನ ಸ್ಮರಣಕ್ಕೆ ಬರುವ ಸ್ವಾಮಿಯವರ ಆ ವಾಣಿಯು, ನನ್ನ ಅಭಾಗ್ಯತನದ ಮುಂದೆ ಬಹಳ ಹೊತ್ತು ಕೂಡ ನನ್ನ ಸ್ಮರಣದಲ್ಲಿ ಉಳಿಯುವದಿಲ್ಲ.

ಆಗ ಚಾಣಕ್ಯನು ಉತ್ಸಾಹಪೂರ್ಣಸ್ವರದಿಂದ:—ದುರ್ಭಾಗ್ಯಕ್ಕೊಳಪಟ್ಟ ಮನುಷ್ಯನು ತಾನು ಪುನಃ ಅದೃಷ್ಟಬಲದಿಂದ ಸೌಭಾಗ್ಯವಂತನಾಗುವೆನೆಂಬ ಮಾತಿನಲ್ಲಿ ಅವಿಶ್ವಾಸಪಡುವದು ಸಹಜವೇ, ಆದರೆ ತಮ್ಮಾ ಭಗ

ವಂತನ ಈ ಸೃಷ್ಟಿಯಲ್ಲಿ ಯಾವ ಸನಾತನ ಧರ್ಮವು ಚಿರಪ್ರಚಲಿತವಾಗಿರುವದೋ, ಅದನ್ನು ನಷ್ಟವಾಗವಮಾಡುವದು ಯಾರಿಂದಲೂ ಸಾಧ್ಯವಿರುವದಿಲ್ಲ. ಚಂದ್ರಗುಪ್ತಾ, ನಿನ್ನ ಈ ಅವನತಾವಸ್ಥೆಯು ಚಿರ ದಿನಗಳ ವರೆಗೆ ಉಳಿಯಲಾರದು. ರಾತ್ರಿಯು ಮುಗಿದ ಮೇಲೆ ಸೂರ್ಯನುದಯಿಸುವದು ಹೇಗೆ ನಿಶ್ಚಿತವೋ, ಅಮಾವಾಸ್ಯೆಯಾದ ಮೇಲೆ ಚಂದ್ರನು ನವಕಲೆಗಳಿಂದ ಅಭಿವೃದ್ಧಿಯಾಗುವದು ಹೇಗೆ ನಿಶ್ಚಯವೋ ಹಾಗಯೇ ಕುಮಾರ, ನಿನ್ನ ದುರ್ಭಾಗ್ಯವು ತೀರಿದ ಕೂಡಲೆ ಸ್ವಾಮಿಯವರ ಭವಿಷ್ಯದಂತೆ ನೀನು ಮಗಧ ರಾಜ್ಯದ ಸಾರ್ವಭೌಮ ಸಾಮ್ರಾಟನಾಗುವದು ಖಂಡಿತವು. ಅದಿರಲಿ. ತಮ್ಮಾ, ಈಗ ನಾನು ನಿನಗೊಂದು ರಹಸ್ಯದ ವಿಷಯವಾಗಿ ಕೇಳಬೇಕೆಂದಿದ್ದೇನೆ. ಅದನ್ನು ನೀನು ನನ್ನಿಂದ ಗುಪ್ತವಾಗಿಡಲಿಕ್ಕೆ ಪ್ರಯತ್ನಿಸಬೇಡ.

ಚಾಣಕ್ಯನ ಈ ಮಾತಿನ ಭಾವವನ್ನು ತಿಳಿದು, ಚಂದ್ರಗುಪ್ತನು ಮನಸ್ಸಿನಲ್ಲಿ ಸಂಶಯ ತಾಳಿದನು. ಯಾವ ಉದ್ದೇಶದಿಂದ ಈ ಹಾರುವನು ತನ್ನನ್ನು ಈ ಬಗೆಯಾಗಿ ಕೇಳಿರಬಹುದೆಂಬದನ್ನು ತಿಳಿಯಲಾರದೆ, ಆತನು:—ಮುನಿವರರೇ, ನಾನು ತಮ್ಮನ್ನು ಗುರುಗಳೆಂದು ತಿಳಿದಿರುವೆನು. ತಮ್ಮ ಶಿಷ್ಯತ್ವವನ್ನು ವಹಿಸಬೇಕೆಂದು ನಾನು ಬಹು ದಿನಗಳಿಂದ ನನ್ನ ಮನಸ್ಸಿನಲ್ಲಿ ನಿಶ್ಚಯಿಸಿದ್ದೆನು; ಆದರೆ ಈ ವರೆಗೆ ಆ ಯೋಗಾಯೋಗವು ಒದಗಿರಲಿಲ್ಲ. ತಮ್ಮ ಬಳಿಯಲ್ಲಿ ನಾನು ಯಾವ ನಿಜ ಸಂಗತಿಯನ್ನೂ ಬಚ್ಚಿಡುವದಿಲ್ಲ.

ಚಾಣಕ್ಯ:—ಪ್ರಸ್ತುತದ ಯುದ್ಧದಲ್ಲಿಯ ನಿನ್ನ ರಣಪಾಂಡಿತ್ಯವನ್ನೂ ಕೌಶಲ್ಯವನ್ನೂ ಕಣ್ಣಾರೆ ನೋಡದ ವಿನಃ ನಾನು ನಿನ್ನನ್ನು ಶಿಷ್ಯನನ್ನಾಗಿ ಗ್ರಹಿಸುವದಿಲ್ಲ, ಆದರೆ ಚಂದ್ರಗುಪ್ತಾ, ಈಗ ನಿನಗೆ ಹೇಳತಕ್ಕದ್ದಿಷ್ಟೇ, ಪ್ರಸ್ತುತ ಯುದ್ಧದಲ್ಲಿ ನಮಗೆ ಅಪಜಯವಾದರೂ ನನ್ನನ್ನು ಕೇಳಿದ ಹೊರತು ನೀನು ನಂದಭೂಪತಿಯ ಆಶ್ರಯಕ್ಕೆ ಹೋಗಲಾಗದು; ತಿಳಿಯಿತೇ?

ಚಂದ್ರಗುಪ್ತನಿಗೆ ಚಾಣಕ್ಯನ ಉದ್ದೇಶವು ತಿಳಿಯಲಿಲ್ಲ. ಆದುದರಿಂದ ಅವನು:—ಗುರುಗಳೇ, ಪ್ರಸ್ತುತದ ಯುದ್ಧವು ನನಗಾಗಿಯೇ ಪ್ರಾರಂಭವಾಗಿದೆ; ಹಾಗು ನನ್ನ ಸಲುವಾಗಿಯೇ ಮಲಯಕೇತುವು ತನ್ನ ರಾಜ್ಯವನ್ನು ಕೂಡ ಧ್ವಂಸ ಮಾಡಿಕೊಳ್ಳಲಿಕ್ಕೆ ಸಿದ್ಧನಾಗಿರುತ್ತಾನೆ. ನಾನು ಬೇಡವೆಂದರೂ ಆತನು ನಂದಮಹಾರಾಜನ ಕೂಡ ಯುದ್ಧಕ್ಕೆ ಸನ್ನದ್ಧನಾಗಿರುತ್ತಾನೆ ಈಗ ಅವನು ನನ್ನಿಂದ ವಚನ ತಕ್ಕೊಂಡಿರುವದರಿಂದ, ನಾನು ಬೇಕೆಂತ ಶತ್ರುಪಕ್ಷಕ್ಕೆ ಹೋಗಿ ಸೇರಲಾರೆನು; ಆದರೆ ಯುದ್ಧದಲ್ಲಿ

ಗಾಯಹೊಂದಿ. ಅವರ ದೈವವಶವಾದರೆ ಅಥವಾ ಮತ್ತಾವ ಯುಕ್ತಿಯಿಂದಾ ದರೂ ಅವರು ನನ್ನನ್ನು ಹಿಡಿದೊಯ್ದರೆ, ಪ್ರಸ್ತುತದ ಯುದ್ಧವು ನಿಂತೇ ಹೋಗುವದು; ಹಾಗು ಪರ್ವತ ರಾಜ್ಯದ ಮೇಲಿನ ಮಗಧೇಶದ ರುಷ್ಟ ತೆಯೂ ಇಲ್ಲದಂತಾಗುವದು. ಹೀಗಾಗುವದಕ್ಕೆ ಬಹಳವಾದರೆ ಆತನು ನನ್ನ ಪ್ರಾಣವನ್ನು ತಕ್ಕೊಂಡಾನು. ಇಷ್ಟೇ ಅಲ್ಲದೆ ಇದರ ಪರಿಣಾಮವು? ಎಂದು ಅನ್ನಲು,

ಚಾಣಕ್ಯನು ರಭಸದಿಂದ:—ಹಾಗಲ್ಲ-ಕುಮಾರ ಹಾಗಲ್ಲ. ಕೇವಲ ನಿನ್ನನ್ನು ಹಿಡಿದೊಯ್ಯುವದೇ ಶತ್ರುಗಳ ಇತಿಕರ್ತವ್ಯವಾಗಿರುವದಿಲ್ಲ, ನಿನ್ನೆ ಶಕಟಾರನ ಪ್ರಣಿಧಿಗಳು ತಂದ ಸುದ್ದಿಯನ್ನು ಪರ್ಯಾಲೋಚಿಸಿದರೆ, ಶಕ ಟಾರನು ಇಲ್ಲಿ ಇರುವನು ರಾಕ್ಷಸಮಂತ್ರಿಗೆ ಹ್ಯಾಗೋ ತಿಳಿದಿದೆ. ಅದ ರಿಂದ ಆತನು ಮುಖ್ಯ ಕಾರಾರಕ್ಷಕನಾದ ಚಂದ್ರಪಾಲನನ್ನು ಸೆರೆಯಲ್ಲಿಟ್ಟಿ ರುತ್ತಾನೆ. ಶಕಟಾರನನ್ನು ಪುನಃ ಹಿಡಿದೊಯ್ದು ಗಲ್ಲಿಗೇರಿಸುವದೂ ಇಲ್ಲವೆ ನಲಂದಾ ದುರ್ಗವಲ್ಲಿ ಪುನಃ ಸೆರೆಯಿಡುವದೂ ಪ್ರಸ್ತುತ ಯುದ್ಧದಲ್ಲಿ ಅವನ ಪ್ರಧಾವ ಉದ್ದೇಶವಾಗಿದ್ದಂತೆ, ನನ್ನನ್ನು ಸೆರೆಯೊಳಗಿಡಿಸುವದೂ ಅವನ ಸಾಹಸವಿದೆ; ಆದರೆ ನಾನು ಯಾವ ದಿವಸ ಪಾಟಲೀಪುತ್ರದಿಂದ ಹೊರಬಿದ್ದೆನೋ, ಅಂದೇ ನಾನು ಇಲ್ಲಿಗೆ ಬಂದು ಆಶ್ರಯಪಡೆಯಬೇಕೆಂದು ಸಂಕಲ್ಪ ಮಾಡಿರುವೆನು; ಹಾಗು ಆ ಪ್ರಕಾರ ನಾನಾಗಿಯೇ ಇಲ್ಲಿಗೆ ಬಂದು, ಸ್ವೇಚ್ಛೆಯಿಂದ ಮಲಯಕೇತುವಿನ ಮಂತ್ರಿತ್ವವನ್ನು ಸ್ವೀಕರಿಸುವೆನು. ನನ್ನನ್ನೂ ಹಾಗು ಶಕಟಾರನನ್ನೂ, ಆದರಂತೆ ಪರ್ವತರಾಜ್ಯವನ್ನೂ ಉಳಿ ಸುವದಕ್ಕಾಗಿ ನೀನು ಯಾವ ಬಗೆಯಿಂದಲೂ ಶತ್ರುಗಳ ಹಸ್ತಗತವಾಗ ಲಾಗದು ನೀನು ಪ್ರತ್ಯಕ್ಷವಾಗಿ ಯುದ್ಧದಲ್ಲಿ ಹೋಗಕೂಡದು. ಹಿಂದೆ ನಿಂತೇ ಸೈನ್ಯವನ್ನು ಚಲಿಸಾಡತಕ್ಕದ್ದು.

ಚಂದ್ರಗುಪ್ತನು ಕುಟಿಲನೀತಿಜ್ಞನಾದ ಚಾಣಕ್ಯನ ಘೋರ ಚಕ್ರ ದಲ್ಲಿ ಸಿಕ್ಕನು. ಆತನಿಂದ ಆ ಚಕ್ರವನ್ನು ತಪ್ಪಿಸಿಕೊಳ್ಳುವದು ಸಾಧ್ಯವೆ? ಚಾಣಕ್ಯನಂಥ ನೀತಿಶಾಸ್ತ್ರಜ್ಞನು ಎಂದೂ ಅಸತ್ಯ ಮಾತಾಡುವನಲ್ಲೆಂಬದು ಮೊದಲಿನಿಂದಲೂ ಚಂದ್ರಗುಪ್ತನಿಗೆ ಖಾತ್ರಿಯಾಗಿತ್ತಾದ್ದರಿಂದ, ಅವನು ಪ್ರತ್ಯುತ್ತರ ಕೂಡ ಕೊಡದೆ, ಚಾಣಕ್ಯನ ಪಾದಗಳನ್ನು ಸ್ಪರ್ಶಮಾಡಿ ನಿಮ್ಮ ಆದೇಶವನ್ನು ಪರಿಪಾಲಿಸುವೆನೆಂದು ಒಪ್ಪಿಕೊಂಡನು

ನಂತರ ಚಾಣಕ್ಯನು ತಾನು ಪ್ರಸ್ತುತದ ಘೋರ ಯುದ್ಧವಲ್ಲಿ ಏಕೆ ಅಂಗಭೂತನಾದೆನೆಂಬದರ ಕಾರಣಗಳನ್ನು ಚಂದ್ರಗುಪ್ತನಿಗೆ ತಿಳಿಸುವಾಗ

ಅಂದುದೇನಂದರೆ:—ಕುಮಾರ, ತಪಸ್ಸು, ಗಾಯತ್ರೀಪುರಶ್ಚರಣ ಹಾಗು ಅಧ್ಯಾಪನದಂಥ ಪವಿತ್ರ ಕರ್ತವ್ಯಗಳನ್ನು ಬಿಟ್ಟು, ನಾನು ಈ ಹಿಂಸಾಮಯ ಕಾರ್ಯದಲ್ಲಿ ತೊಡಗಿದ ಕಾರಣವೇನಂದರೆ, ಆ ದಾಂಭಿಕ ಹಾಗು ಮದೋನ್ಮತ್ತನಾದಂಥ ನಂದರಾಜನು ನೆರೆದ ಸಭೆಯಲ್ಲಿ ನನ್ನನ್ನು ಭಯಂಕರವಾಗಿ ಅವಮಾನಗೊಳಿಸಿದನು. ಯಾವ ಆತನ ಶಾಲಕನಾದ ಕಪಟಕನು ನನ್ನ ಗತಭರ್ತೃಕೆ ಕನ್ಯೆಯಾದ ಕಪಾಲಿನಿಯ ಮೇಲೆ ಅತ್ಯಾಚಾರ ಮಾಡಲೆಳಸಿದನೋ, ಯಾವಾತನನ್ನು ಕ್ಷಮಿಸಿ, ನಾನು ಈ ಪರ್ವತರಾಜನಿಂದ ಬಿಡುಗಡೆ ಮಾಡಿಸಿದ್ದೆನೋ, ಅದೇ ಆ ಕಪಟಕನು ನನ್ನನ್ನು ಆ ರಾಜಸಭೆಯಿಂದ ಹೊರದೂಡಿದನು! ಕ್ಷೀಣಾಯುಷ್ಯನಾದ ಆ ಮಗಧಾಧಿಪನು ರಾಕ್ಷಸ ಮಂತ್ರಿಯ ಅನುರೋಧದಿಂದ ನನಗೆ ಶ್ರಾದ್ಧದ ಆಮಂತ್ರಣವನ್ನು ಕಳಿಸಿ, ಬಳಿಕ ತಾನೇ ನನ್ನನ್ನು ತುಚ್ಛೀಕರಿಸಿರುವನು! ಆದ್ದರಿಂದ ಆ ಅಪಮಾನದ ಸೇಡು ತೀರಿಸಿಕೊಳ್ಳುವ ಸಲುವಾಗಿ ನಾನು ಬ್ರಾಹ್ಮಣನಾಗಿದ್ದರೂ ಕ್ಷತ್ರಿಯರಿಗುಚಿತವಾದ ಈ ಘೋರ ಕರ್ಮದಲ್ಲಿ ಸದ್ಯಕ್ಕೆ ತೊಡಗಿಕೊಂಡಿರುತ್ತೇನೆ ನಾನು ಅಂದು ಆ ರಾಜಸಭೆಯಲ್ಲಿ ಬ್ರಾಹ್ಮಣತ್ವದ ಮುಖ್ಯ ಚಿಹ್ನವಾಗಿರುವ ಈ ನನ್ನ ಜುಟ್ಟಗಳನ್ನು ಬಿಚ್ಚಿ ಶಪಥ ಮಾಡಿರುವದೇನಂದರೆ, "ಈ ಧನನಂದನನ್ನು ಧ್ವಂಸ ಮಾಡದ ಹೊರತು ನಾನು ಮರಳಿ ಈ ಪಾಟಲೀಪುತ್ರವನ್ನು ಪ್ರವೇಶಿಸಲಿಕ್ಕಿಲ್ಲ; ಹಾಗು ದೇವ-ದ್ವಿಜರಲ್ಲಿ ಭಕ್ತಿಯುತನಾದಂಥ ಯಾವನೊಬ್ಬ ತರುಣನನ್ನು ಪಟ್ಟಕ್ಕೆ ಕೂರಿಸಿದ ಹೊರತು ನಾನು ರಾಜಸಭೆಯನ್ನು ಪ್ರವೇಶಿಸಲಿಕ್ಕಿಲ್ಲ; ಮತ್ತು ನನ್ನ ಜುಟ್ಟಗಳನ್ನು ಕಟ್ಟಲಿಕ್ಕಿಲ್ಲ" ಆದುದರಿಂದ ಕುಮಾರಾ, ಚಂದ್ರಗುಪ್ತಾ, ನನ್ನ ಈ ಪ್ರತಿಜ್ಞೆಗಳು ನಿನ್ನ ಹೊರತು ಎಂದಿಗೂ ಈಡೇರಲಾರವು. ಇಂದು ಹೇಗೂ ನೀನಾಗಿಯೇ ನನ್ನ ಶಿಷ್ಯತ್ವವನ್ನು ಅಪೇಕ್ಷಿಸಿರುತ್ತೀ ಗುರು-ಶಿಷ್ಯರ ಸಂಪರ್ಕವು ಅತಿ ಕಠೋರವಾದುದು. ಗುರು ಋಣವಾದರೂ ಮಾತಾ-ಪಿತರರ ಋಣದಂತೆ ಅಪರಿಶೋಷಣೀಯವಾದುದು. ನೀನು ನಿನ್ನ ಗುರುವಿನ ಋಣಶೋಷಣ ಮಾಡುವದಕ್ಕೆ ಸನ್ನದ್ಧನಾಗು. ಅಪಾತ್ರನಾದಂಥವನನ್ನು ನಾನು ಎಂದೂ ಶಿಷ್ಯನೆಂದು ಪರಿಗ್ರಹಿಸಲಾರೆನು. ತವಮ್ಮಾ, ಚಂದ್ರಗುಪ್ತಾ, ನಿನ್ನ ಈ ಗುರುವಿಗಾದ ಭಯಂಕರ ಅಪಮಾನವೆಂಬ ಚಿತೆಯನ್ನು ನಿನಗೆ ಈಗ ತೋರಿಸಿರುವೆನು. ಈ ಸಂಗತಿಗಳನ್ನು ಮಹಾರಾಜ ಮಲಯಕೇತುವಿಗಾಗಲಿ, ಶಕಟಾರ ಮಂತ್ರಿಗಾಗಲಿ ನಾನು ತಿಳಿಸಲಿಚ್ಛಿಸುವದಿಲ್ಲ ಯಾಕಂದರೆ, ಅವರಿಂದ ಅದರಂತೆ ನಡೆಯಲು ಸಾಧ್ಯವಾಗ್ರವ

ದಿಲ್ಲ; ಆದರೆ ಕುಮಾರ, ನಿನ್ನ ಮಾತು ಹಾಗಲ್ಲ ನೀನು ನಿನ್ನ ಗುರುವಿನ ಈ ಹೃದಯಸಂತಾಪವನ್ನು ನಿವಾರಿಸಲು ಅರ್ಹನಾಗಿರುತ್ತೀ. ಅದನ್ನು ನೀನು ಮಾಡಲು ಪ್ರವೃತ್ತನಾದರೆ, ಮುಂದೆ ನಿನಗೆ ಅಖಂಡ ಕಲ್ಯಾಣವಾಗದೆ ಇರಲಾರದು.

# ಮಂತ್ರಪೂತ ಕವಚದ ಪ್ರಭಾವ.

ಚಂದ್ರಗುಪ್ತನಿಂದ ಯಾವ ಪ್ರತ್ಯುತ್ತರವನ್ನೂ ಅಪೇಕ್ಷಿಸದೆ, ಚಾಣಕ್ಯನು ಆ ದಿವಾಣಖಾನೆಯಿಂದ ಹೊರಬಿದ್ದು ತನ್ನ ಬೀಡಾರಕ್ಕೆ ಹೋದನು. ಮಂತ್ರಮುಗ್ಧನಂತೆ ಕುಮಾರ ಚಂದ್ರಗುಪ್ತನು ಅಲ್ಲಿಯೇ ಕುಳಿತುಕೊಂಡನು. ಆಗ ಆವನ ಮನಸ್ಸಿನಲ್ಲಿ ಅನೇಕ ಬಗೆಯ ವಿಚಾರತರಂಗಗಳು ಉದ್ಭವಿಸತೊಡಗಿದವು. "ದೇವರು ನಮ್ಮ ಮೇಲೆ ನಿಶ್ಚಯವಾಗಿಯೂ ತನ್ನ ಕೃಪಾದೃಷ್ಟಿಯನ್ನಿಟ್ಟಿರುತ್ತಾನೆ; ಹಾಗಿಲ್ಲದಿದ್ದರೆ, ಇಂಥ ಈ ನಿಕರದ ಸಮಯದಲ್ಲಿ ಈ ಯೋಗಿವರ್ಯ ಜ್ಞಾನಿ ಪುರುಷನು ನಮಗೆ ಬಂದು ಕೂಡಿಕೊಳ್ಳುವ ಸಂಭವವಾದರೂ ಇತ್ತೇ? ಈ ಚಾಣಕ್ಯ ಮುನಿಯ ಸಹವಾಸದಿಂದ ಸಂದೇಹವೆಂಬ ಪಂಕದಲ್ಲಿ ಮುಳುಗಿದ್ದ ನಮ್ಮ ಮನಸ್ಸುಗಳು, ಅಲ್ಲಿಂದ ನಿವೃತ್ತವಾಗಿ, ಹೊಸ ಉದ್ಯೋಗದಲ್ಲಿ ತೊಡಗಿಕೊಂಡವು. ನನ್ನ ಅಣ್ಣನೂ ಮಗಧೇಶ್ವರನೂ ಆಗಿರುವ ಧನನಂದನು ಈ ಕ್ಷಾತ್ರತೇಜಸಂಪನ್ನ ಹಾಗು ಯೋಗಸಿದ್ಧಪುರುಷನ ಅಪಮಾನವನ್ನು ಮಾಡಿ, ಎಂಥ ಮೂರ್ಖತನ ಹಾಗು ಎಂಥ ವಿಪತ್ತನ್ನು ತನ್ನ ಪಾಲಿಗೆ ತಂದುಕೊಂಡನೆಂಬದರ ಅರಿವು ಆತನಿಗೆ ಇನ್ನೂ ಉಂಟಾದಂತೆ ತೋರುವದಿಲ್ಲ ಮದೋನ್ಮತ್ತನಾದ ಆ ಮಗಧೇಶನು ಕುಟಿಲಪಟುವಾದ ರಾಕ್ಷಸಮಂತ್ರಿಯ ಜಾಲದಲ್ಲಿ ಸಿಲುಕಿ, ತನ್ನ ಮಹಾಮೂರ್ಖ ಶಾಲಕನಾದ ಶಕಟಿಕನ ತಂತ್ರಕ್ಕೊಳಗಾಗಿ, ಈ ಸರ್ವಗುಣಸಂಪನ್ನ ಬ್ರಹ್ಮತೇಜಯುಕ್ತನಾದ ಚಾಣಕ್ಯನನ್ನು ತಡವಿ, ತೀವ್ರ ವಿಷವುಳ್ಳ ನಾಗರ ಹಾವಿನ ದ್ವೇಷವನ್ನು ಕಟ್ಟಿಕೊಂಡಂತಾಗಿರುವದು........" ಹೀಗೆಂದು ಎಷ್ಟೋ ಹೊತ್ತಿನ ವರೆಗೆ ಆಲೋಚಿಸಿ ಚಾಣಕ್ಯನೊಡನೆ ನಡೆದ ಸಂಭಾಷಣವನ್ನು ಮಲಯಕೇತುವಿಗೆ ತಿಳಿಸುವ ಸಲುವಾಗಿ ಕುಮಾರನು ಆತನ ಬಳಿಗೆ ಹೋದನು.

ಇತ್ತ ಚಂದ್ರಗುಪ್ತನನ್ನು ಬಿಟ್ಟುಹೋಗಿದ್ದ ಚಾಣಕ್ಯನು ತನ್ನ ಕೋಣೆಯನ್ನು ಸೇರುವಷ್ಟರಲ್ಲಿ ಅಲ್ಲಿ ಶಕಟಾರನು ಆತನ ಬರುವಿಕೆಯನ್ನೇ ಎದುರು ನೋಡುತ್ತ ಕುಳಿತಿದ್ದನು. ಕೆಲ ಹೊತ್ತು ಅವರು ಯಾವದೋ

ಒಂದು ಗಂಭೀರ ಚಿಂತೆಯಲ್ಲಿ ಮಗ್ನರಾದರು. ಅದರಿಂದ ಇಬ್ಬರೂ ಕೇವಲ ಮೌನಭಾವವನ್ನು ಧರಿಸಿದರು. ಕಡೆಗೆ ಚಾಣಕ್ಯನೇ ಆ ಅವಸ್ಥೆಯನ್ನು ತೊಲಗಿ, ಶಕಟಾರನನ್ನು ಕುರಿತು:—ಶಕಟಾರ-ಮಂತ್ರಿನ್, ಕುಟಿಲ ಕೌಶಲ್ಯ ಸೂತ್ರದಿಂದಲೇ ನಾನು ಧನನಂದನನ್ನು ನಾಶಗೊಳಿಸಲು ನಿಶ್ಚಯಿಸಿರುತ್ತೇನೆ. ಇದು ವರೆಗೆ ನಾವು ಯುದ್ಧದ ಸಂಬಂಧವಾಗಿ ಯಾವ ಯಾವ ಆಲೋಚನೆಗಳನ್ನು ಮಾಡಿದೆವೋ, ಅವೆಲ್ಲ ಮಾಗಧೀಯರ ಅಪರಿಮಿತ ದಂಡಿನ ಮಾನದಿಂದ ಕೇವಲ ತುಚ್ಛವಾದವುಗಳೇ ಸರಿ. ಆದುದರಿಂದ ನಾವು ನಮ್ಮ ಶತ್ರುವನ್ನು ಜೇರಿಗೆ ತರುವ ಉಪಾಯವನ್ನು ಕೈಕೊಳ್ಳಬೇಕು. ನಮಗೆ ಯಶ ದೊರೆಯಬೇಕೆಂದು ದೇವರ ಚಿತ್ತಕ್ಕೆ ಬಂದಿದ್ದರೆ, ಈ ಸೂತ್ರಗಳ ದ್ವಾರದಿಂದ ಆ ಮದಾಂಧ ಧನನಂದನನ್ನು ನಾವು ಸಹಜವಾಗಿ ಹಣ್ಣಿಗೆ ತರಬಹುದು ಹಾಗೆ ಆದ ಮೇಲೆ ಅವನೊಡನೆ ನಮಗೆ ಬೇಕಾದ ಕರಾರುಗಳ ಪ್ರಕಾರ ಒಡಂಬಡಿಕೆ ಮಾಡಿಕೊಳ್ಳಬಹುದು.

ಶಕಟಾರ, ಧನನಂದನನ್ನು ನಮ್ಮ ಕೂಟಸೂತ್ರಕ್ಕೊಳಪಡಿಸಲಿಕ್ಕೆ ಅನೇಕ ಮಾರ್ಗಗಳುಂಟು. ಅವುಗಳಲ್ಲಿ ಸ್ತ್ರೀಪ್ರಲೋಭನದಿಂದ ಅವನನ್ನು ಕೈವಶಮಾಡಿಕೊಳ್ಳುವ ಮಾರ್ಗವು ಪ್ರಾಮುಖ್ಯವಾದದ್ದು. ಯಾಕಂದರೆ, ಅವನು ಸ್ವಭಾವತಃ ಸ್ತ್ರೀಪ್ರಲೋಭಿಯಾಗಿರುತ್ತಾನೆ. ಧನ ಕನಕ ಸಂಪನ್ನರೂ ರೂಪ-ಲಾವಣ್ಯಯುಕ್ತರೂ ಆದ ತರುಣರನ್ನು ಸ್ತ್ರೀಜಾಲದಲ್ಲಿ ತೊಡಗಿಸುವದು ಸುಲಭವು ಆದುದರಿಂದ ಮಂತ್ರಿವರಾ, ಧನನಂದನನ್ನು ತನ್ನ ಪಾಶದಿಂದ ಜಗ್ಗಿಕೊಳ್ಳುವಂಥ ಒಬ್ಬ ತರುಣಿಯನ್ನು ನಾವೀಗ ಹುಡುಕಬೇಕಾಗಿದೆ; ಆದರೆ ಶಕಟಾರ, ಆ ಧನನಂದನಿಂದ ಆಕೆಯ ಪಾತಿವ್ರತ್ಯಕ್ಕೆ ಕುಂದು ಉಂಟಾಗದ ಹಾಗೆ ನಾನು ಆಕೆಗೊಂದು ಯಂತ್ರ ಮಾಡಿ ಕೊಡುವೆನು. ಆ ಸ್ತ್ರೀಯು ಸ್ವಭಾವತಃ ನಿಷ್ಕಾಮಿಯಾಗಿರಬೇಕು; ಅಂದರೇ ನಮ್ಮ ಕೆಲಸವು ಸಾಧಿಸುವದು. ನೀನು ಮಗಧ ದೇಶದಲ್ಲಿ ಬಹು ದಿನಗಳವರೆಗೆ ಸಚಿವನಾಗಿದ್ದದರಿಂದ ನಿನಗೆ ಅಂಥದೊಂದು ಪಾತ್ರದ ಮಾಹಿತಿಯಿರಬಹುದಾಗಿದೆ. ಆ ಪಾತ್ರದ ಮುಖದಿಂದಲೇ ನಾವು ಈಗ ಆ ಕೆಲಸವನ್ನು ಮಾಡಿಕೊಳ್ಳಬೇಕಾಗಿರುವದರಿಂದ ಅದನ್ನು ಶೋಧಿಸಿ, ಬಹು ಬೇಗನೆ ನನ್ನೆಡೆಗೆ ಕರೆತರುವ ಪ್ರಯತ್ನಮಾಡು.

ಈ ಬಗೆಯಾಗಿ ಚಾಣಕ್ಯನು ಶಕಟಾರನಿಗೆ ತಿಳಿಸಲು, ಅವನು ಎಷ್ಟೋ ಹೊತ್ತಿನ ವರೆಗೆ ಆಲೋಚಿಸಿ, ಚಾಣಕ್ಯನ ಈ ಕೆಲಸಕ್ಕೆ ಕುಸುಮಪುರನಿವಾಸಿಯಾದ ತಡಿತೆಯ ಹೊರತು ಮತ್ತಾರೂ ಅರ್ಹರಲ್ಲೆಂಬದನ್ನು

ಅವನು ನಿರ್ಧರಿಸಿದನು; ಹಾಗು ಆಕೆಯನ್ನು ತನ್ನೆಡೆಗೆ ಕರೆತರುವ ಸಲು ವಾಗಿ ತನ್ನ ಪ್ರಿಯಪತ್ನಿಯಾದ ಲಲಿತೆಯನ್ನು ಕಳಿಸಿದ್ದನು; ಆದರೆ ತಡಿ ತೆಯು ಅವಳೊಡನೆ ಬರಲಿಲ್ಲ. ಆದ್ದರಿಂದ ಹಿಂದೆ ಹೇಳಿದಂತೆ ಸ್ವತಃ ಚಾಣಕ್ಯನೇ ಶಕಟಾರನೊಡನೆ ಹೋಗಿ, ತಡಿತೆಯ ಮನವೊಲಿಸಿ, ಆಕೆಯ ಪಾತಿವ್ರತ್ಯಕ್ಕೆ ಧನನಂದನಿಂದ ಭಂಗವುಂಟಾಗದ ಹಾಗೆ ಒಂದು ಯಂತ್ರ ವನ್ನು ಆಕೆಗೆ ಮಾಡಿಕೊಟ್ಟು, ಅವಳನ್ನು ಪಾಟಲಿಪುತ್ರಕ್ಕೆ ಕಳಿಸಿದನು.

ತಡಿತೆಯು ತನ್ನ ರೂಪ-ಲಾವಣ್ಯಗಳಿಂದಲೂ, ಒನಪು-ಒಯ್ಯಾರ ಗಳಿಂದಲೂ ಧನನಂದನನ್ನು ಹೇಗೆ ಕೈವಶ ಮಾಡಿಕೊಂಡಳೆಂಬದೂ, ಅದ ರಿಂದ ಧನನಂದನ ಚಿತ್ತವು ಸಾಮ್ರಾಜ್ಯ ಹಿತಚಿಂತನದಿಂದ ತೀರ ಪರಾ ವೃತ್ತವಾದಂತಾಗಿ, ಅದು ಆ ತಡಿತೆಯ ಸಹವಾಸದಲ್ಲಿಯೇ ಹೇಗೆ ಆತುರ ಗೊಂಡಿತ್ತೆಂಬದೂ ನಮ್ಮ ವಾಚಕರಿಗೆ ಈ ಕಂಕಣಚೋರ ಕಥಾನಕದೊಳ ಗಿನ ಪೂರ್ವಭಾಗವನ್ನು ಓದಿ ಗೊತ್ತಾಗಿರುತ್ತದೆ; ಆದರೆ ಈ ಕಥಾನಕದ ಮುಖ್ಯ ವಿಷಯವಾದ ಧನನಂದನ ಪಟ್ಟದರಸಿಯಾದ ಮುರಲಾರಾಣಿಯ ಎಡಗೈಯೊಳಗಿದ ರತ್ನಖಚಿತ-ಮಂತ್ರಪೂತ ಕಂಕಣವನ್ನು ಯಾರು ಕದ್ದು ಕೊಂಡಿರಬಹುದೆಂಬದನ್ನು ತಿಳಿಯಲು ಆತುರಗೊಂಡಿದ್ದ ವಾಚಕರಿಗಾಗಿ ಆ ಸಂಗತಿಯನ್ನಷ್ಟೇ ಇಲ್ಲಿ ಮೊದಲು ಹೇಳಿ, ಅವರ ಸಮಾಧಾನ ಮಾಡಲು ಪ್ರಯತ್ನಿಸುತ್ತೇವೆ.

ತಡಿತೆಯು-ಈಚೆಗೆ ಧನನಂದನ ವಿಲಾಸಕಾನನದಲ್ಲಿದ್ದ ತಡಿತೆಯು- ಒಂದು ದಿನ ಒಬ್ಬ ಹೀನ-ದೀನ ಭಿಕ್ಷುಕಿಯ ವೇಷವನ್ನು ಧರಿಸಿಕೊಂಡು ಧನನಂದನು ವಿಲಾಸಕಾನನಕ್ಕೆ ಬರುವ ಮಾರ್ಗದಲ್ಲಿ ಸಂಚರಿಸುತ್ತಿದ್ದಳು ಮಗಧೇಶನಾದ ಧನನಂದನು ಬರ-ಹೋಗುವ ಮಾರ್ಗದಲ್ಲಿ ಇಂಥ ಭಿಕ್ಷುಕ ರನ್ನು ಬರಗೊಡದಿರುವದು ಅಲ್ಲಿಯ ಮಾರ್ಗರಕ್ಷಕರ ಕರ್ತವ್ಯವಾಗಿತ್ತು; ಆದರೆ ಇವಳ ಅಸದೃಶ ರೂಪ-ಲಾವಣ್ಯಗಳನ್ನು ಮನಮುರೆ ನೋಡುವ ಇಚ್ಛೆಯಿಂದಲೂ, ಇವಳೊಡನೆ ಬರೀ ಮಾತುಗಳನ್ನೇ ಏಕಾಗಲೊಲ್ಲದು, ಆಡಿ ತಮ್ಮ ಮನಸ್ಸಿಗೆ ಸಂತೋಷವನ್ನುಂಟು ಮಾಡಿಕೊಳ್ಳುವ ಹವ್ಯಾಸ ದಿಂದಲೂ ಅಲ್ಲಿಯ ಆ ಮಾರ್ಗರಕ್ಷಕರು ಇವಳನ್ನು ಅಲ್ಲಿ ಮುಸು ಹೊತ್ತಿನ ವರೆಗೆ ಸಂಚರಿಸಗೊಟ್ಟರು. ಆದರೆ ಅಂದಿನ ವಿಚಿತ್ರ ಯೋಗಾಯೋಗದ ಮೂಲಕ ಅದೇ ಕಾಲಕ್ಕೆ ಧನನಂದನು ಆಕಸ್ಮಿಕವಾಗಿ ಅಲ್ಲಿಗೆಬಂದು, ಅವಳ ಆ ಅಪ್ರತಿಮ ರೂಪ-ಲಾವಣ್ಯಗಳನ್ನು ಕಂಡು, ಅವಳನ್ನು ತನ್ನ ವಿಲಾಸ ಕಾನನಕ್ಕೆ ಕರೆದೊಯ್ದನು.

ತಡಿತೆಯು ಚಾಣಕ್ಯಮುನಿಯು ಹೇಳಿಕೊಟ್ಟ ಬಗೆಯಿಂದಲೇ ವರ್ತಿಸಲಾರಂಭಿಸಿದಳು. ಚಾಣಕ್ಯನು ಒಂದು ಮಂತ್ರಪೂತ ಕವಚವನ್ನು ಸಿದ್ಧಮಾಡಿ, ಅದನ್ನು ತಡಿತೆಯ ವಾಮಹಸ್ತದಲ್ಲಿ ಕಟ್ಟಿದ್ದನು ಆ ಕವಚದ ಪ್ರಭಾವದಿಂದ ಅವಳನ್ನು ಪ್ರತಿಯೊಬ್ಬರೂ ಮೋಹಿಸುತ್ತಿದ್ದರು. ಆದರೂ ಒಬ್ಬರೂ ಅವಳ ಮೈ-ಕೈ ಮುಟ್ಟಲು ಸಮರ್ಥರಾಗುತ್ತಿರಲಿಲ್ಲ! ಚಾಣಕ್ಯನು ತಡಿತೆಯ ಸಹಾಯಕ್ಕಾಗಿ ಮಾತಂಗಿ ಭೈರವಿ ಎಂಬ ಹೆಸರಿನ ಓರ್ವ ಸಂನ್ಯಾಸಿನಿಯನ್ನು ಪಾಟಲಿಪುತ್ರದಲ್ಲಿಯ ಶ್ರೀಮಹಾಕಾಲ-ಭೈರವನ ಮಂದಿರದಲ್ಲಿರಹೇಳಿದ್ದನು. ಚಾಣಕ್ಯನ ಆದೇಶದ ಮೇರೆಗೆ ಸಂಧಿಸಾಧಿಸಿ ತಡಿತೆಯು ಒಂದು ದಿನ ಮಧ್ಯರಾತ್ರಿಯು ಸಂದಿದ ಬಳಿಕ ಮಗಧೇಶ ಧನನಂದನು ವಿಲಾಸಕಾನನದಲ್ಲಿ ಪವಡಿಸಿರಲು, ಮಾತಂಗಿಭೈರವಿಯ ಸಹಾಯದಿಂದ ಮುರಲಾರಾಣಿಯ ಅಂತಃಪುರವನ್ನು ಪ್ರವೇಶಿಸಿದಳು; ಹಾಗು ಅವಳ ವಾಮಹಸ್ತದೊಳಗಿನ ಆ ಮಂತ್ರಪೂತ-ಕಂಕಣದ ಕೀಲವನ್ನು ಒತ್ತಿ ಬಿಚ್ಚಿಕೊಂಡವಳೇ ಬಂದ ದಾರಿಯಿಂದ ಹಿಂದಿರುಗಿದಳು.

ಮುರಲಾರಾಣಿಯ ಅಂತಃಪುರಕ್ಕೆ ಅಂದು ಮಧ್ಯರಾತ್ರಿಯಲ್ಲಿ ಒಂದು ಬುರುಕೆ ಹಾಕಿದ್ದ ಮೇಣೆಯು ಬಂದದ್ದನ್ನೂ, ಅದರೊಳಗಿಂದ ಒಬ್ಬ ಅತ್ಯಂತ ರೂಪಶಾಲಿನಿಯಾದ ತರುಣಿಯು ಇಳಿದು ಒಳಗೆ ಹೋದದ್ದನ್ನೂ ಅಲ್ಲಿಯ ಸ್ತ್ರೀ ಹಾಗು ಪುರುಷ ರಕ್ಷಕರಲ್ಲಿ ಕೆಲ ಜನರು ಕಣ್ಣಾರೆ ಕಂಡಿದ್ದರು; ಆದರೆ ಇಂಥ ಸ್ತ್ರೀಯಳೇ ಬಂದಳೆಂಬುದೂ, ಅವಳಾರ ಆಜ್ಞೆಯಿಂದ ಒಳಗೆ ಬಂದಿರುವಳೆಂಬುದೂ ಒಬ್ಬರಿಗೂ ಗೊತ್ತಾಗಲಿಲ್ಲ; ಇಷ್ಟೇ ಅಲ್ಲ, ಹೋಗುವಾಗಾಗಲಿ-ಬರುವಾಗಾಗಲಿ ಅವಳನ್ನು ತಡೆದು, ಅವಳಾರೆಂಬುದನ್ನು ತಿಳಕೊಳ್ಳುವ ಸಾಹಸವೂ ಕೂಡ ಅವರಲ್ಲಿಯ ಒಬ್ಬರಿಗೂ ಆಗಲಿಲ್ಲ. ಚಾಣಕ್ಯನು ಅವಳ ಕೈಯಲ್ಲಿ ಕಟ್ಟಿದ್ದ ಮಂತ್ರಪೂತ-ಕವಚದ ಪ್ರಭಾವವೇ ಅಂಥ ಉಜ್ವಲವಾಗಿತ್ತು!

ಮರು ದಿನ ಕಂಕಣ ಚೋರದ ಸುದ್ದಿಯು ನಗರದಲ್ಲೆಲ್ಲ ಹಬ್ಬಿತು; ಆದರೆ ಹಿಂದಿನ ರಾತ್ರಿಯಲ್ಲಿ ಅಂತಃಪುರಕ್ಕೆ ಇಂಥ ಇಂಥ ಒಬ್ಬ ಹೆಂಗಸು ಬಂದಿದ್ದಳೆಂದು ಹೇಳಿದರೆ, ಎಲ್ಲಿ ಈ ಇಡಿ ಕಂಕಣಚೋರ ಪ್ರಕರ್ಣವು ತಮ್ಮ ಮೇಲೆ ಹೊರುವದೋ ಎಂಬ ಹೆದರಿಕೆಯಿಂದ ಒಬ್ಬ ಕಾವಲುಗಾರನೂ ಆ ಸುದ್ದಿಯನ್ನು ತಿಳಿಸಲಿಲ್ಲ. ಅದರಿಂದ ಕಂಕಣಚೋರದ ಗಭೀರತೆಯು ಮತ್ತಿಷ್ಟು ಹೆಚ್ಚಿ, ಇಷ್ಟು ಅನರ್ಥ ಪರಂಪರೆಗೆ ಕಾರಣವಾಗಿತ್ತು!

— — — —

# ಹೆಂಗುಸಿನ ಆರ್ತ ಧ್ವನಿ.

ಈಚೆಗೆ ಶಕಟಾರನು ಚಂಡ ಮತ್ತು ಕೌಶಿಕರೆಂಬ ಇಬ್ಬರು ಪ್ರಣಿಧಿಗಳನ್ನು ಚಾಣಕ್ಯನ ವಶಕ್ಕೆ ಕೊಟ್ಟಿದ್ದನು. ಅವರು ನಾನಾ ಪ್ರಕಾರದ ವೇಷಗಳನ್ನು ಹಾಕಿಕೊಂಡು ಮಗಧ ದೇಶದಲ್ಲಿ ಹೋಗಿ ಅಲ್ಲಿಯ ಗುಪ್ತ ಸಂಗತಿಗಳನ್ನು ಸಂಪಾದಿಸಿ ಚಾಣಕ್ಯನಿಗೆ ತಿಳಿಸುತ್ತಿದ್ದರು. ಇಂದು ಚಂಡನು ಕಟ್ಟಿಗೆ ಹೊರೆ ಮಾರುವ ಲವ್ಹಾಣಿಗನ ವೇಷವನ್ನೂ, ಕೌಶಿಕನು ಬೇಟೆಗಾರನ ವೇಷವನ್ನೂ ಧರಿಸಿಕೊಂಡು ಹೋಗಿದ್ದರು. ಅವರಿಬ್ಬರೂ ಅಪರಾಹ್ಣ ಕಾಲದಲ್ಲಿ ಮರಳಿ ಬಂದು, ಚಾಣಕ್ಯನಿಗೆ ಒಂದು ಹೊಸ ಸುದ್ದಿಯನ್ನು ತಂದು ತಿಳಿಸಿದರು.

ಮಲಯಪುರಿಯ ಉತ್ತರ ದಿಕ್ಕಿಗೆ ಯಾವ ಅಡವಿಯಿದ್ದಿತೋ, ಅದು ಒಳ್ಳೇ ಕಟ್ಟಡವಿಯಾಗಿತ್ತು. ಆ ಅಡವಿಯ ಪೂರ್ವಕ್ಕೆ ಒಂದು ಬೆಟ್ಟವಿತ್ತು. ಆ ಪರ್ವತದ ಶಿಖರದ ಮೇಲೆ ನಿಂತುಕೊಂಡು ಪಾಟಲಿಪುತ್ರದ ಕಡೆಗೆ ನೋಡಿದರೆ, ಮಾಗಧೀ ಸೇನೆಯ ಶಿಬಿರವು ಕಾಣಿಸುತ್ತದೆಂದು ಅಂದು ಆ ಹೇರರು ಬಂದು ಚಾಣಕ್ಯನಿಗೆ ಹೇಳಿದರು. ಆ ಕೂಡಲೆ ಚಾಣಕ್ಯನು ಮಿಕ ಎಲ್ಲ ಕೆಲಸಗಳನ್ನೂ ಬದಿಗೊತ್ತಿ, ಆಗಲೆ ಆ ಇಬ್ಬರು ಪ್ರಣಿಧಿಗಳೊಡನೆ ಆ ಬೆಟ್ಟಕ್ಕೆ ಪ್ರಯಾಣ ಬೆಳೆಸಿದನು. ಚಾಣಕ್ಯನ ಮುಖ್ಯ ಗುಣವೆಂದರೆ, ಆತನು ತನ್ನ ಮನಸ್ಸಿನಲ್ಲಿ ಯಾವುದೊಂದು ಕಾರ್ಯ ಮಾಡಬೇಕೆಂದು ನಿರ್ಧರಿಸಿದನೆಂದರೆ ತೀರಿತು; ಎಂಥ ಎಡರು ಬಂದರೂ ಆತನು ಆ ಕೆಲಸಕ್ಕೆ ಚ್ಯುತಿಯುಂಟಾಗಗೊಡುತ್ತಿರಲಿಲ್ಲ.

ಚಾಣಕ್ಯನು ಚಂಡ-ಕೌಶಿಕರೊಡನೆ ಹೊರಟಾಗ ನಡು ಹಗಲಾಗಿರಲಿಲ್ಲ. ಮೂರನೆಯ ಪ್ರಹರದ ಸಮಯವಾಗಿದ್ದಿತು. ಆದರೂ ಪ್ರಚಂಡ ರೌದ್ರನ ತಾಪವು ಕೊಂಚವೂ ಕಡಿಮೆಯಾಗಿರಲಿಲ್ಲ. ಕೆಲವು ಪರ್ವತಗಳನ್ನು ದಾಟಿ ಹೋದ ಬಳಿಕ ಅವರು ಒಂದು ಗಭೀರ ಅರಣ್ಯವನ್ನು ಪ್ರವೇಶಿಸಿದರು. ಸುತ್ತಲೂ ದುರ್ಭೇದ್ಯಗಳಾದ ಲತಾಮಂಟಪಗಳಿಂದ ಯುಕ್ತವೂ ಗಗನಸ್ಪರ್ಶಿಗಳಾದ ಉತ್ತುಂಗ ವೃಕ್ಷಗಳಿಂದ ನಿಬಡವೂ ಆಗಿರುವ ಆ ಅಡವಿಯಲ್ಲಿ ಅಂಥ ಆ ಭಯಂಕರವಾದ ಆ ಬಿಸಿಲಿನ ಸಮಯದಲ್ಲಿ ಕೂಡ ಅಂಧಕಾರಮಯವಾಗಿತ್ತು. ಬಹು ಕಷ್ಟದಿಂದ ಅವರು ಒಂದು ಹರದಾರಿ ಪಥವ ಕ್ರಮಿಸಿ ಹೋದ ಬಳಿಕ ಅವರಿಗೊಂದು ಪುಟ್ಟ ಗಿರಿ ನದಿಯು ಸಿಕ್ಕಿತು. ಆ ಕಟ್ಟಡವಿಯೊಳಗಿನ ಆ ಕ್ಷುದ್ರ ಹೊಳೆಯ ಪಾರ್ಶ್ವಭಾಗವು ಅಶ್ಮ ಖಂಡ

ಗಳಿಂದ ತುಂಬಿ ಬಿಟ್ಟಿತ್ತು. ಆ ಹೊಳೆಯಲ್ಲಿ ನೂರೆರಡು ನೂರು ಅಗಲಾಗಿ ಮಾತ್ರ ನೀರು ಹರಿಯುತ್ತಿತ್ತು; ಆದರೆ ಆ ನದಿಯ ನೀರು ಅತಿ ಸ್ವಚ್ಛವಾಗಿ, ಕೇವಲ ಕನ್ನಡಿಯ ಹರಳಿನಂತೆ ಮಿನುಗುತ್ತಿತ್ತು.

ಚಾಣಕ್ಯನು ಸಂಗಡಿಗರೊಡನೆ ಆ ನದಿಯನ್ನು ಸಹಜವಾಗಿ ಪಾರಾದನು. ಆ ಗಿರಿ ನದಿಯು ಆ ಪರ್ವತದ ಮೇಲಿನಿಂದ ಹರಿದು ಬಂದಿರುವದೆಂಬದು ಚಾಣಕ್ಯನಿಗೆ ಗೊತ್ತಾಗದೆ ಇರಲಿಲ್ಲ. ಆ ಹೊಳೆಯ ಪ್ರವಾಹವು ಬಹು ವೇಗವಾಗಿತ್ತು ಈಗಿನಕಿಂತ ತುಸ ಹೆಚ್ಚು ನೀರು ಇದ್ದರೆ, ಇದನ್ನು ದಾಟುವದು ಅಸಾಧ್ಯವೆಂಬದನ್ನೂ ಅವನು ಮನಗಂಡನು.

ಹೊಳೆ ದಾಟಿದ ನಂತರ ಚಾಣಕ್ಯನು ಒಂದು ಬಂಡೆಗಲ್ಲ ಮೇಲೆ ಕುಳಿತು, ತುಸ ಹೊತ್ತು ವಿಶ್ರಾಂತಿ ಪಡೆದನು. ಆ ಕಾಲಕ್ಕೆ ಅವನು ತನ್ನ ಸಂಗಡಿಗರಲ್ಲಿಯ ಒಬ್ಬನಾದ ಚಂಡನನ್ನು ಕುರಿತು:—ಈ ನದಿಯ ಉಗಮ ಸ್ಥಳವೆಲ್ಲೆಂಬದನ್ನು ಬಲ್ಲೆಯಾ? ಎಂದು ಕೇಳಲು,

ಚಂಡ:—ಅದು ನನಗೆ ಗೊತ್ತಿದೆಯೆಂದೇನು ಕೇಳುತ್ತೀರಿ? ಗೊತ್ತಿದೆ. ಈ ಮಲಯಪುರಿಯಲ್ಲೇ ನಾನು ಜನ್ಮಿಸಿರುತ್ತೇನೆ. ಬಾಲ್ಯಕಾಲದಿಂದಲೂ ನಾನು ಈ ಅರಣ್ಯದಲ್ಲಿ ತಿರುಗುತ್ತಿರುತ್ತೇನೆ ನಮ್ಮ ರಾಜಧಾನಿಯ ಬಳಿಯಲ್ಲಿಯ ಮಹಾ ಕಾಲನ ಮಂದಿರವನ್ನು ತಾವು ನೋಡಿಯೇ ನೋಡಿದ್ದೀರಿ. ಆ ದೇವಾಲಯದ ಹತ್ತಿರ ಮಲಯ ಉರ್ಫ ಕಾಲಭೈರವ ಎಂಬ ಹೆಸರಿನ ಸರೋವರವುಂಟು. ಆ ಸರೋವರದಲ್ಲಿಯೇ ಈ ಗಿರಿ ನದಿಯ ಉಗಮವು ಆಗಿರುತ್ತದೆನ್ನಬಹುದು; ಆದರೆ ವಸ್ತುಸ್ಥಿತಿಯು ಹಾಗಿರುವುದಿಲ್ಲ. ಈ ನದಿ ಕಾಲಭೈರವ ಸರೋವರದ ಆಚೆಗೇ ಉಗಮವಾಗಿದ್ದು. ಈ ನದಿಯ ಪ್ರವಾಹವನ್ನು ಅಡ್ಡಗಟ್ಟಿರುವದರಿಂದಲೇ ಆ ಸರೋವರದ ಉತ್ಪತ್ತಿಯಾಗಿರುತ್ತದೆ ಆ ಸರೋವರವನ್ನು ನಮ್ಮ ಭೂತಪೂರ್ವ ಮಹಾರಾಜರು ಕಟ್ಟಿಸಿರುವದರಿಂದಲೇ ಅದಕ್ಕೆ ಅವರ ಹೆಸರೂ, ಅದು ಶ್ರೀ ಮಹಾ ಕಾಲಭೈರವ ದೇವರ ಸನ್ನಿಧಿಯಲ್ಲಿ ನೆಲಸಿರುತ್ತದಾದ್ದರಿಂದ ಶ್ರೀ ಕಾಲಭೈರವ ಸರೋವರ ಎಂಬ ಹೆಸರೂ ಬಿದ್ದಿವೆ.

ಚಾಣಕ್ಯ:—ಓಹೋ! ನಮ್ಮ ಮಂದಾಕಿನಿಯು ಈ ಸಂಗತಿಯನ್ನು ನನಗೆ ಈ ಮೊದಲೇ ತಿಳಿಸಿದ್ದಳು. ತಮ್ಮಾ, ಚಂಡಾ. ಈ ಗಿರಿ ನದಿಯ ಜಲವನ್ನು ಆ ಸರೋವರದಲ್ಲಿ ಹೇಗೆ ಶೇಖರಿಸಿರುವರೋ, ಅದನ್ನು ಬೇಕಾದಾಗ ಹಾಗೆಯೇ ತುಂಬಿನ ಮಾರ್ಗದಿಂದ ಬಿಟ್ಟುಬಿಡಲಿಕ್ಕೆ ಬರುವಂತಿದೆಯಂತೆ. ಇದು ನಿಜವೊ? ಹಾಗೆ ಮಾಡಿದ್ದಾದರೆ ಈ ಹೊಳೆಯು ಬೇಕಾ

ದಾಗ ತುಂಬಿ ಹರಿಯುಬಹುದಲ್ಲವೇ?

ಚಂಡ:— ಅಹುದು, ಮಹಾಸ್ವಾಮಿ.

ಚಾಣಕ್ಯ:— ಆ ತುಂಬು ತೆಗೆಯುವ ಮತ್ತು ಹಾಕುವ ಕೆಲಸ ಹೆಚ್ಚು ಪರಿಶ್ರಮದ್ದೂ ಕಾಲಾತೀತವಾದದ್ದೂ ಆಗಿದೆಯೇನು?

ಚಂಡ:— ಅದು ವಿಶೇಷ ಕಷ್ಟದ ಕೆಲಸವಾಗಿಲ್ಲ. ಅರ್ಧ ಗಂಟೆಯಲ್ಲಿ ಅದನ್ನು ಕೂಡ್ರಿಸಬಹುದು; ಇಲ್ಲವೆ ತೆಗೆದು ನೀರು ಬಿಡಬಹುದು.

ಈ ಸಂಗತಿ ಕೇಳಿದೊಡನೆಯೇ ಹರ್ಷೋನ್ಮಾದವಾದವನಂತೆ ಚಾಣಕ್ಯನು ಗಟ್ಟಿಯಾಗಿ:— ಚಂಡಾ, ಕೌಶಿಕಾ, ದೇವಾಧಿದೇವನಾದ ಮಹಾಕಾಲನು ಈಗ ನಮ್ಮ ಮೇಲೆ ಅನುಗ್ರಹಿಸಿರುವಂತೆ ತೋರುತ್ತದೆ.

ಆ ಇಬ್ಬರು ಹೇರರಿಗೂ ಚಾಣಕ್ಯನ ಆ ಮಾತಿನ ಮರ್ಮ ತಿಳಿಯಲಿಲ್ಲ. ಅವರು ವಿಸ್ಮಯವಿಸ್ಫೂರಿತ ನೇತ್ರಗಳಿಂದ ಚಾಣಕ್ಯನ ಕಡೆಗೆ ನಿರೀಕ್ಷಿಸುತ್ತ ನಿಂತರು

ಬಳಿಕ ಚಾಣಕ್ಯನು ಮತ್ತೆ ದಾರೀ ನಡೆಯಹತ್ತಿದನು. ಮತ್ತೊಂದು ಗಂಟೆ ದಾರೀ ನಡೆದ ಮೇಲೆ ಆ ಗಭೀರ ಕಟ್ಟಡವಿಯು ಮುಗಿಯಿತು. ಎದುರಿಗೆ ಇನ್ನೊಂದು ಚಿಕ್ಕ ಬೆಟ್ಟವು ಕಂಗೊಳಿಸಹತ್ತಿತು. ಆ ಗುಡ್ಡದ ಶಿಖರವನ್ನು ಅವರು ಏರಲಾರಂಭಿಸಿದರು. ಆಗ ಚಂಡನು ಚಾಣಕ್ಯನನ್ನು ಕುರಿತು:— ವಿಪ್ರವರರೇ. ಈ ಗುಡ್ಡವನ್ನು ಹತ್ತಿ, ನೋಡತಕ್ಕದ್ದೆಲ್ಲವನ್ನೂ ನೋಡಿಕೊಂಡು ನಾವು ಬೇಗನೆ ಹಿಂದಿರುಗಬೇಕು. ಯಾಕಂದರೆ, ಕತ್ತಲು ಕವಿಯುವಷ್ಟರಲ್ಲಿ ನಾವು ಈ ಅಡವಿಯನ್ನು ದಾಟಿ, ನಮ್ಮ ಮಲಯಪುರಿಯನ್ನು ಸಮೀಪಿಸಲೇ ಬೇಕು. ಇಲ್ಲದಿದ್ದರೆ ಇಲ್ಲಿಯ ಹಿಂಸ್ರಪಶುಗಳ ಜಾಲದೊಳಗಿಂದ ನಾವು ಪಾರಾಗಲಾರೆವು, ಎನ್ನಲು, 'ನಾನು ಇಳಿ ವಯಸ್ಸಿನವನಾಗಿರುವದರಿಂದ, ನನ್ನಲ್ಲಿ ನನ್ನ ದೇಹ ರಕ್ಷಣ ಮಾಡಿಕೊಳ್ಳುವಷ್ಟು ಶಕ್ತಿಯಿಲ್ಲೆಂದು ತಿಳಿದಿರುವೆಯಾ? ನೀವೀರ್ವರೂ ದಂಡಾಳುಗಳು; ಪೂರ್ವವಯಸ್ಸಿನವರು; ಹೀಗಿದ್ದರೂ. ನೀವು ಇದನ್ನು ಚೆನ್ನಾಗಿ ತಿಳಿದಿಡಿರಿ, ಈ ಹಾರುವ ಚಾಣಕ್ಯ ಸಾಮರ್ಥ್ಯದ ಎಂಥ ಕೆಲಸದಲ್ಲಿಯೂ ನಿಮಗೆ ಸೋಲಲಾರ. ಇಗೋ, ಈ ಗುಡ್ಡದ ತುದಿಯ ವರೆಗೂ ಒಂದೇಸವನೆ ಓಡೋಣ, ನಡೆಯಿರಿ; ಯಾರು ಹಿಂದೆ ಬೀಳುವರೆಂಬದು ತಾನೇ ಗೊತ್ತಾಗುವದು' ಹೀಗೆಂದು ಅಂದು, ಚಾಣಕ್ಯನು ತನ್ನ ಉತ್ತರೀಯ ವಸ್ತ್ರವನ್ನು ಟೊಂಕಕ್ಕೆ ಬಿಗಿದುಕೊಂಡವನೇ ಓಡಲಾರಂಭಿಸಿದನು. ಅನಿವಾರ್ಯಹಕ್ಕಾಗಿ ಆ ಚಂಡ-ಕೌಶಿಕರೂ ಆತನೊಡನೆ ಓಡತೊಡಗಿದರು. ಅಂಥ ಆ ನಿಡಿದಾದ ಪರ್ವ

ತದ ಶಿಖರದ ವರೆಗೂ ಚಾಣಕ್ಯನು ಒಂದೇಸವನೆ ಓಡಿದನು ಚಂಡ-ಕೌಶಿಕ ರಿಗೆ ಅದು ಅಸಾಧ್ಯವಾದುದರಿಂದ ಅವರು ಹಿಂದುಳಿದರು.

ಅವರು ಆ ಪರ್ವತ ಶಿಖರದ ಮೇಲೆ ನಿಂತು ಪಾಟಲಿಪುತ್ರದ ರಾಜ ಧಾನಿಯ ಕಡೆಗೆ ದಿಟ್ಟಿಸಿ ನೋಡಿದರು ಬಹು ದೂರದ ಒಂದು ಸಮನೆಲದ ಪ್ರದೇಶದಲ್ಲಿ ಕಬ್ಬಕ್ಕಿಗಳ ಗುಂಪಿನ ಹಾಗೆ ಬೀಡು ಬಿಟ್ಟಿದ್ದ ಮಾಗಧೀ ದಂಡಿನ ಶಿಬಿರದ ಶುಭ್ರ ರಾಹುಟಿಗಳು ಕಂಗೊಳಿಸುತ್ತಿದ್ದವು. ಬಹಳ ಹೊತ್ತಿನ ತನಕ ಅತ್ತ ಕಡೆಗೆ ಒಂದೇ ಸವನೆ ನಿರೀಕ್ಷಿಸಿ, ಬಳಿಕ ಚಾಣಕ್ಯನು ಕೌಶಿಕನನ್ನು ಕುರಿತು:— ಈ ಶಿಬಿರದಲ್ಲಿ ಎಷ್ಟು ಸೈನ್ಯವಿರಬಹುದೆಂದು ನಿನಗೆ ತೋರು ತ್ತದೆ? ಎಂದು ಪ್ರಶ್ನೆ ಮಾಡಿದನು

ನಾನು ಮೊನ್ನೆ ಛದ್ಮವೇಷದಿಂದ ಆ ಶಿಬಿರದ ಬಳಿಗೆ ಹೋದಾಗ ಅದರಲ್ಲಿ ಐವತ್ತು ಸಾವಿರ ದಂಡಿರಬಹುದೆಂದು ಅಲ್ಲಿಯವರಿಂದ ಕೇಳಿ ಅರಿತಿ ರುತ್ತೇನೆ, ಎಂದು ಕೌಶಿಕನಂದನು.

ಚಾಣಕ್ಯ:— ಹಾಗಾದರೆ ಈ ಐವತ್ತು ಸಾವಿರ ಸೈನ್ಯವನ್ನು ಯಾವ ಸಹಜ ಉಪಾಯದಿಂದ ನಾಶಗೊಳಿಸಬೇಕೆಂಬದನ್ನು ನಾನೀಗ ನಿರ್ಧರಿಸ ಬೇಕಾಗಿದೆ; ನನ್ನ ಉಪಾಯಕ್ಕೆ ದೇವರ ಸಹಾಯವಿದ್ದರೇ ಅದು ಕೈಗೂಡ ಬಹುದಾಗಿದೆ, ಎಂದನು.

ನಂತರ ಅವರು ಆ ಪರ್ವತ ಶಿಖರದಿಂದ ಕೆಳಗಿಳಿದು, ಆ ವನವನ್ನು ಪ್ರವೇಶಿಸತಕ್ಕವರು; ಅಷ್ಟರೊಳಗೆ ಒಬ್ಬ ಹೆಂಗುಸಿನ ಆರ್ತ ಧ್ವನಿಯು ಸಮೀಪದಿಂದಲೇ ಕೇಳಿಸಿತು. ಕೂಡಲೆ ಅವರು ನಿಂತಲ್ಲಿಯೇ ನಿಂತು ಆ ದನಿ ಬರುವ ದಿಕ್ಕಿನ ಕಡೆಗೆ ಕಿವಿಗೊಟ್ಟು ಕೇಳಲಾರಂಭಿಸಿದರು. ಮತ್ತೆ ಕೆಲವು ಕ್ಷಣಗಳ ತರುವಾಯ:—'ಅಯ್ಯೋ ಯಾರಿರುತ್ತೀರಿ? ನನ್ನನ್ನು ರಕ್ಷಿ ಸಿರಿ!' ಎಂದು ಕೂಗಿದ ಹಾಗಾಯಿತು. ಕೂಡಲೆ ಚಂಡ-ಕೌಶಿಕರು ಚಾಣ ಕ್ಯನಿಗೆ ಅಲ್ಲಿಯೇ ಒತ್ತಟ್ಟಿಗೆ ನಿಲ್ಲ ಹೇಳಿ, ತಮ್ಮ ಖಡ್ಗಗಳನ್ನು ಗವಸಣಿಗೆ ಗಳಿಂದ ಹಿರಿದು, ಆ ದನಿ ಕೇಳಿ ಬಂದ ದಿಶೆಯ ಕಡೆಗೆ ಅರಣ್ಯದಲ್ಲಿ ಭರದಿಂದ ನಾಗಿದರು. ಅರ್ಧ ತಾಸಿನ ವರೆಗೆ ನಿರೀಕ್ಷಿಸಿದರೂ ಅವರು ಹಿಂದಿರುಗಲಿಲ್ಲ. ಹಾಗು ಯಾವ ಸಂವಾದವಾಗಲಿ, ಶಬ್ದವಾಗಲಿ ಕೇಳಬರಲಿಲ್ಲ. ಆದುದರಿಂದ ಚಾಣಕ್ಯನಿಗೆ ಬಹು ಚಡಪಡಿಕೆಯಾಯಿತು ತಾನೂ ಆ ಅಡವಿಯಲ್ಲಿ ನುಸಿ ಯಬೇಕೆಂದು ಆತನು ಹಾತೊರೆದನು; ಆದರೆ ಆ ಕಟ್ಟಡವಿಯು ತನ್ನ ಪರಿ ಚಯದ್ದಾಗಿರದ್ದರಿಂದ ಆತನು ನಿಂತಲ್ಲಿಯೇ ನಿಂತು ಚಡಪಡಿಸುವ ಹೊರತು ಮತ್ತಾವ ಕೆಲಸವೂ ಆಗ ಆವನಿಂದಾಗಲಿಲ್ಲ.

# ಅಪಮಾನ ಮಾಡಿ ದ್ರೋಹ ಕಟ್ಟಿಕೊಂಡ.

................

ಅಷ್ಟರಲ್ಲಿ ಓರ್ವ ಪರಮ ಸುಂದರ ನವ ತಾರುಣ್ಯಸಂಪನ್ನಳಾದ ತರುಣಿ ಅಲ್ಲಿಗೆ ಬಂದು, ಚಾಣಕ್ಯನಿಗೆ ನಮಸ್ಕರಿಸಿದಳು; ಹಾಗು ದೀನ ವಾಣಿಯಿಂದ ಅವನನ್ನು ಕುರಿತು:—ಮಹಾತ್ಮರೇ, ತಾವು ಯಾರು? ಈ ಅಡವಿಯಲ್ಲಿ ವಾಸಿಸುವ ಸಂನ್ಯಾಸಿಗಳಾಗಿರುವಂತೆ ತೋರುತ್ತದಲ್ಲ! ನಾವು ಕಡು ವಿಪತ್ತಿಗೊಳಗಾಗಿರುತ್ತೇನೆ. ತಾವು ಈ ಆಶ್ರಯವಿಹೀನ ಅಬಲೆಗೆ ಇಂಬು ಗೊಡುವಿರಾ?

ಚಾಣಕ್ಯ:—ತಾಯಿಾ, ಅಷ್ಟೊಂದು ಗಾಬರಿಯಾಗಬೇಡ. ನಿನಗೆ ಇನ್ನು ಯಾವ ಸಂಕಟವೂ ಒದಗಲಾರದು. ನೀನು ಇಷ್ಟು ಅಂಜುವದಕ್ಕೆ ಕಾರಣವೇನಾಯಿತು? ಸ್ವಲ್ಪವೂ ಸಂಕೋಚಪಡದೆ ಉಸುರು.

ನಾನು ಮೇಣೆಯನ್ನು ಆರೋಹಿಸಿ, ಒಂದು ಮಹತ್ವದ ಕೆಲಸಕ್ಕಾಗಿ ಈ ಅರಣ್ಯದ ಬದಿಯ ದಾರಿ ಹಿಡಿದು ಮಲಯಪುರಿಗೆ ನಡೆದಿದ್ದೆನು ನನ್ನ ಮೇಣೆಯನ್ನು ಹೊತ್ತಂಥ ನಾಲ್ಕು ಮಂದಿ ಬೋವಿಗಳ ಹೊರ್ತು ಮತ್ತಾರೂ ನನಗೆ ರಕ್ಷಕರಾಗಿರಲಿಲ್ಲ. ಈ ಅಡವಿಯ ಸಮಿಾಪದಲ್ಲಿ ಮೂರು—ನಾಲ್ಕು ಜನ ಸೈನಿಕರು ಬಂದು ನನ್ನ ಮೇಣೆಯನ್ನು ಸುತ್ತುಗಟ್ಟಿದರು. ವಾಹಕರು ಮೇಣೆಯನ್ನು ಕೆಳಗಿಳಿಸಿ, ಆ ಆಗಂತುಕರೊಡನೆ ಒಳ್ಳೇ ಶೌರ್ಯದಿಂದ ಕಾದತೊಡಗಿದರು. ಅವರುಗಳಲ್ಲಿ ಘೋರ ಸಂಗ್ರಾಮವೇ ನಡೆಯಿತು. ಆ ಸಂಧಿ ಸಾಧಿಸಿ, ನಾನು ವೈರಿಗಳ ಕಣ್ಣುತಪ್ಪಿಸಿ, ಈ ಕಟ್ಟಡವಿಯನ್ನು ಪ್ರವೇಶಿಸಿದೆನು; ಮತ್ತು ಕಾಲು ನಡೆದತ್ತ ಓಡೋಡಿ ಇಲ್ಲಿಗೆ ಬಂದೆನು. ಅದರಿಂದಲೇ ನನಗಿಷ್ಟು ಆಯಾಸವಾಗಿದೆ

ಆ ರಮಣಿಯ ಮಾತು ಕೇಳಿ, ಚಾಣಕ್ಯ:—ತಾಯಿಾ, ನಿನಗೆ ಬಹಳ ಕಷ್ಟವಾಗಿದೆ. ನೀನು ಈ ವಟ ವೃಕ್ಷದ ಛಾಯೆಯಲ್ಲೆ ಕುಳಿತು ತುಸ ವಿಶ್ರಮಿಸು. ನಿನ್ನ ಕೂದಲಿಗೆ ಕೂಡ ಧಕ್ಕೆ ಹತ್ತದ ಹಾಗೆ ನಾನು ನಿನ್ನನ್ನು ರಕ್ಷಿಸುತ್ತೇನೆ, ಎಂದು ಅಭಯವಿತ್ತನು.

ಆಗ ಆ ಯುವತಿಯು ಆ ಆಲದ ಮರದ ಘನವಾದ ನೆಳಲಲ್ಲಿ ಕುಳಿತುಕೊಂಡಳು. ಕೆಲವು ಹೊತ್ತಿನ ಮೇಲೆ ಅವಳು ಚಾಣಕ್ಯನನ್ನುದ್ದೇಶಿಸಿ:— ತಾವು ಯಾರು? ಈ ಹತಭಾಗಿನಿಗೆ ತಮ್ಮ ಪರಿಚಯವನ್ನಷ್ಟು ಮಾಡಿಕೊಡುವಿರಾ? ಎಂದು ಪುನಃ ಪ್ರಶ್ನೆ ಮಾಡಿದಳು.

ಚಾಣಕ್ಯ:—ತಾಯಿ, ನೀನು ಬಹುಶಃ ಮಗಧದ ರಾಜಧಾನಿಯಾದ ಪಾಟಲಿಪುತ್ರದವಳಾಗಿ ತೋರುತ್ತೀ. ಪಾಟಲಿಪುತ್ರದ ಪ್ರತಿಯೊಬ್ಬ ನರ-ನಾರಿಯರಿಗೂ ಈ ಚಾಣಕ್ಯ ಬ್ರಾಹ್ಮಣನ ಹೆಸರು ಚೆನ್ನಾಗಿ ಗೊತ್ತಿದೆ.

ಆತನು ಹೀಗೆಂದು ನುಡಿದ ಕೂಡಲೆ, ಆ ತರುಣಿಯು ಮತ್ತೆ ಆತನ ಅಡಿದಾವರೆಗಳಿಗೆರಗಿದಳು. ಅಷ್ಟರೊಳಗೆ ಚಂಡ-ಕೌಶಿಕರೂ ಅಲ್ಲಿಗೆ ಬಂದೇ ಬಿಟ್ಟರು. ಅವರು ಆ ಯುವತಿಯ ಮೇಣೆಯನ್ನು ಮುತ್ತಿದ್ದವರಲ್ಲಿ ಇಬ್ಬರನ್ನು ಹಿಡಕೊಂಡು ಬಂದಿದ್ದರು.

ತಮ್ಮ ಚಾಣಕ್ಯ ಮುನಿಯ ಬಳಿಯಲ್ಲಿ ಓರ್ವ ತರುಣಿ ಕುಳಿತಿರುವದನ್ನು ಕಂಡು, ಚಂಡ-ಕೌಶಿಕರೂ ವಿಸ್ಮಯಪಟ್ಟರು. ಅವರು ಮಿಕಿಮಿಕಿ ಎಂದು ಆಕೆಯ ಕಡೆಗೆ ನೋಡುತ್ತ ಚಾಣಕ್ಯನನ್ನು ಕುರಿತು:—ಈ ಹೆಣ್ಣುಮಗಳಾರು? ಎಂದು ಪ್ರಶ್ನೆ ಮಾಡಿದರು.

ಚಾಣಕ್ಯ:—ಇವಳ ಪರಿಚಯವನ್ನು ನಿಮಗೆ ಈಗಲೆ ಮಾಡಿಕೊಡುತ್ತೇನೆ. ಈ ಈರ್ವರು ಬಂದಿಗಳಾರು?

ಚಂಡ:—ಇವರು ನಾಲ್ವರಿದ್ದರು. ಒಬ್ಬನು ನಮ್ಮನ್ನು ನೋಡಿದೊಡನೆ ಪ್ರಾಣ ಭಯದಿಂದ ಓಡಿ ಹೋದನು. ಮತ್ತೊಬ್ಬನು ನಮ್ಮ ಆಸಿಗಳಿಗೆ ತುತ್ತಾದನು; ಹಾಗು ಉಳಿದ ಇವರೀರ್ವರನ್ನು ನಾವು ಸೆರೆಹಿಡಿದು ತಂದಿದ್ದೇವೆ.; ಆದರೆ ನಾವು ಯಾವ ಕೆಲಸಕ್ಕೆ ಹೋಗಿದ್ದೆವೋ, ಅದು ಮಾತ್ರ ನಮ್ಮಿಂದ ಸಾಧಿಸಲಾಗಲಿಲ್ಲ; ಯಾಕಂದರೆ, ಈ ನೀಚರು ಯಾವ ಮೇಣೆಯನ್ನು ಮುತ್ತಿದ್ದರೋ, ಅದರೊಳಗಿನ ರಮಣಿಯು ಅಲ್ಲೆಲ್ಲೂ ಕಾಣಬರಲಿಲ್ಲಿ. ಅದರಿಂದ ಇವರು ಅವಳನ್ನೇನು ಮಾಡಿರುವರೋ ತಿಳಿಯದಂತಾಗಿದೆ! ಆದರೆ ಇಲ್ಲಿ ಕುಳಿತಿರುವ ಈ ತರುಣಿಯನ್ನು ನೋಡಿ ಇವಳೇ ಆ ಮೇಣೆಯ ಒಡತಿಯಿರಬಹುದೆಂದು ನಮಗೆ ಅನುಮಾನವಾಗುತ್ತಿದೆ.

ಚಾಣಕ್ಯ:—ನಿಮ್ಮ ಅನುಮಾನ ಯಥಾರ್ಥವಾದದ್ದು. ಇವಳೇ ಆಕೆ; ಆದರೆ ಈಕೆಯ ಮೇಣೆಯೆಲ್ಲದೆ? ಬೋವಿಗಳೆಲ್ಲಿರುವರು?

ಚಂಡ:—ಬೋವಿಗಳಾರಿಗೂ ಧಕ್ಕೆಯಾಗಿಲ್ಲ. ಎಲ್ಲರೂ ಜೀವಿಸಿರುತ್ತಾರೆ. ನಾವು ಅಲ್ಲಿಗೆ ಹೋದೊಡನೆ ಈ ಶತ್ರುಗಳು ಅವರೆಲ್ಲರನ್ನೂ ಬಿಟ್ಟು ನಮ್ಮನ್ನೇ ಮುತ್ತಿದ್ದರಿಂದ ಅವರು ಪಾರಾದರು.

ಚಾಣಕ್ಯ:....ಆ ಬೋವಿಗಳು ಇನ್ನೂ ಇಲ್ಲಿಗೇಕೆ ಬರಲಿಲ್ಲ? ಅವರು ಬಂದಿದ್ದರೆ, ನಾವೆಲ್ಲರೂ ಈಗಲೇ ಹೊರಡಬಹುದಾಗಿತ್ತು.

ಇಷ್ಟರಲ್ಲಿ ಆ ರಮಣಿಯು ಮೇಣೆಯನ್ನು ಹೊತ್ತುಕೊಂಡು ಬರುತ್ತಿದ್ದಂಥ ನಾಲ್ವರು ಬೋವಿಗಳು ಅಲ್ಲಿಗೇ ಬಂದರು. ಕೂಡಲೆ ಚಾಣಕ್ಯನು ಹರ್ಷಪ್ರಫುಲ್ಲ ಚಿತ್ತದಿಂದ ಆ ರಮಣಿಯನ್ನು ಕುರಿತು:—ತಾಯಿ, ನಿನ್ನ ಮೇಣೆ ಬಂತು. ಇನ್ನು ನೀನು ಅಂಜುವ ಕಾರಣವಿಲ್ಲ. ನೀನು ನಿನ್ನ ಈ ಮೇಣೆಯನ್ನು ಹತ್ತು. ನಾವೆಲ್ಲರೂ ಬೇಗನೆ ಮಲಯಪುರಿಗೆ ತೆರಳಬೇಕು

' ಚಾಣಕ್ಯನ ಅಪ್ಪಣೆಯಂತೆ ಆ ಯುವತಿ ಮೇಣೆ ಹತ್ತಿದಳು. ಚಂಡ-ಕೌಶಿಕರು ಒಳದಾರಿಯಿಂದ ಅವರೊಡನೆ ಸಾಗಿ, ಕತ್ತಲೆ ಮುಸುಕುವಷ್ಟರಲ್ಲಿ ಮಲಯಪುರಿಗೆ ತಲುಪಿದರು.

ಚಾಣಕ್ಯನು ತನ್ನ ಬೀಡಾರದ ಬಳಿಯಲ್ಲಿಯೇ ಆ ಮೇಣೆಯನ್ನಿಳಿಸ ಹೇಳಿದನು. ಆ ರಮಣಿಯು ಮೇಣೆಯಿಂದ ಹೊರಬಿದ್ದು ಚಾಣಕ್ಯನ ಮನೆಯನ್ನು ಪ್ರವೇಶಿಸಿದಳು. ನಂತರ ಚಾಣಕ್ಯ—ತಾಯಿ, ನೀನು ಯಾರು?

ರಮಣಿ:—ನಾನೊಬ್ಬ ಅಭಾಗಿನಿ.

ಚಾಣಕ್ಯ:—ನೀನು ಬ್ರಹ್ಮಚಾರಿಣಿಯಾಗಿ ತೋರುತ್ತಿರುವೆ; ಆದರೆ ಈ ಭರ ತಾರುಣ್ಯದಲ್ಲಿ ನಿನಗೀ ಕಠೋರ ವ್ರತದ ಕಾರಣವೇನು?

ರಮಣಿ:—ತಮ್ಮಂಥ ಮಹನೀಯರೆದುರು ಆ ಕಾರಣ ತಿಳಿಸಲಿಕ್ಕೆ ನನಗೆ ಸಂಕೋಚವೆನಿಸುತ್ತದೆ. ನಾನು ಅಬಲೆ. ಕ್ಷಣ ಕ್ಷಣಕ್ಕೂ ನನ್ನಿಂದ ಪ್ರಮಾದಗಳುಂಟಾಗುತ್ತವೆ. ನನ್ನ ಈ ಬ್ರಹ್ಮಚರ್ಯವಾದರೂ ನನ್ನ ಆ ಪ್ರಮಾದದ ಒಂದು ಅಂಗವೇ ಆಗಿರಬಹುದಾಗಿದೆ.

ಚಾಣಕ್ಯ:—ನಿನ್ನ ವಾಸ ಸ್ಥಳವೆಲ್ಲಿ?

ರಮಣಿ:—ನಾನು ಕುಸುಮಪುರದವಳು.

ಕುಸುಮಪುರದ ಬ್ರಹ್ಮಚಾರಿಣಿಯಾದ ತರುಣಿಯೆಂದ ಕೂಡಲೆ,ಚಾಣಕ್ಯನು ಬೆಚ್ಚಿಬಿದ್ದನು! ಚಾಣಕ್ಯನು ಕೆಲವು ದಿನಗಳ ಮುಂಚೆ ಒಮ್ಮೆ ಶಕಟಾರನ ಜೊತೆಗೆ ಕುಸುಮಪುರಕ್ಕೆ ಹೋಗಿದ್ದನು; ಹಾಗು ಅಲ್ಲಿದ್ದ ಶಕಟಾರನ ಅಭಿಭಾವಿಕ ಪತ್ನಿಯೂ, ಧನಶ್ರೀ ಪ್ರಸಾದನ ಪುತ್ರಿಯೂ ಆಗಿದ್ದ ತಡಿತೆಯನ್ನು ಮಗಧೇಶನಾದ ಧನನಂದನನ್ನು ಮೋಹಿಸಲಿಕ್ಕೂ, ಮುರಲಾರಾಣಿಯ ಕೈಯೊಳಗಿನ ಮಂತ್ರಪೂತ ಕಂಕಣವನ್ನು ಅಪಹರಿಸಲಿಕ್ಕೂ ಅವನೇ ಹೇಳಿ ಕಳಿಸಿ ಕೊಟ್ಟಿದ್ದನು. ಅವಳೇ ಇವಳೆಂಬುದು ಕ್ಷಣಾರ್ಧದಲ್ಲಿ ಆತನ ನಿದರ್ಶನಕ್ಕೆ ಬಂತು; ಆ ಕೂಡಲೆ ಅವನು ಒಳ್ಳೇ ಆಸ್ಥೆಯಿಂದ ಅವಳನ್ನು ಒತ್ತಟ್ಟಿಗೆ ಕರೆದುಕೊಂಡು ಹೋಗಿ, ಆಕೆ ಪಾಟಲಿಪುತ್ರದಲ್ಲಿ ಜರುಗಿಸಿ ಬಂದ ಕಾರ್ಯದ ವಿಚಾರವನ್ನು ಕೇಳಿಕೊಂಡನು. ಆಗ ಅವಳು ಹೇಳಿದ್ದೆಂದರೆ:-

ಮಹಾತ್ಮಾ, ನಾನು ತಮ್ಮ ಆಶೀರ್ವಾದವ ಹೊಂದಿ ಅಲ್ಲಿಂದ ಹೊರಟವಳು ಮಗಧೇಶನ ವಿಲಾಸಕಾನನದ ಬಳಿಯಲ್ಲಿ ಒಬ್ಬ ಹೀನ-ದೀನ ಭಿಕ್ಷುಕಿಯ ವೇಷದಿಂದ ಸಂಚರಿಸಲಾರಂಭಿಸಿದೆನು. ಅಲ್ಲಿಯ ರಕ್ಷಕರು ಮೊದಮೊದಲು ನನ್ನನ್ನು ಅಲ್ಲಿಗೆ ಬರಗೊಡಲಿಲ್ಲ; ಆದರೆ ಕೆಲವು ನಿಮಿಷಗಳಲ್ಲಿಯೇ ನಾನು ನನ್ನ ಕಾರ್ಯಸಾಧನೆಗಾಗಿ ಅವರೊಡನೆ ಬೆಲ್ಲದಂಥ ಮಾತನಾಡುತ್ತ, ನಡು ನಡುವೆ ಅವರತ್ತ ಹೊಲ್ಲದ ನೋಟದಿಂದ ನೋಡುತ್ತ ಸಲಿಗೆ ಮಾಡಲಾಗಿ, ಅವರು ನನ್ನನ್ನು ಆ ವಿಲಾಸಕಾನನದಲ್ಲಿ ಪ್ರವೇಶಿಸಗೊಟ್ಟರು ಕರ್ಮ-ಧರ್ಮ ಸಂಯೋಗದಿಂದ ಧನನಂದನು ಅಂದೇ ಆಕಸ್ಮಿಕವಾಗಿ ಅಲ್ಲಿಗೆ ಆಗಮಿಸಿದನು; ಹಾಗು ಆತನ ದೃಷ್ಟಿಯೂ ನನ್ನ ಮೇಲೆ ಬಿದ್ದಿತು. ತಮ್ಮ ಕವಚದ ಪ್ರಭಾವದಿಂದ ಆತನ ಮನಸ್ಸು ನನ್ನಲ್ಲೇ ನೆಟ್ಟು ಬಿಟ್ಟಿತು. ಕೂಡಲೆ ಅವನು ನನ್ನನ್ನು ತನ್ನ ಚಾರರ ಮುಖಾಂತರ ತನ್ನ ವಿಲಾಸಕಾನನದೊಳಗಿನ ರಂಗಮಹಾಲಿಗೆ ಕರೆಯಿಸಿಕೊಂಡನು. ಆಗ ಅಲ್ಲಿ ಬೇರೆ ಯಾರೂ ಇರಲಿಲ್ಲ ನಾವಿಬ್ಬರೇ ಇದ್ದೆವು; ಆದರೂ ಆ ಸಾರ್ವಭೌಮನಿಂದ ನನ್ನನ್ನು ಮುಟ್ಟುವ ಸಾಹಸವಾಗಲಿಲ್ಲ. ಬಳಿಕ ಆತನು ನನಗೆ ಬೇರೆ ಹೊಸ ಉಡಿಗೆ-ತೊಡಿಗೆಗಳನ್ನೂ, ಆಭರಣಗಳನ್ನೂ ಕೊಡಿಸಿದನು. ನಾನು ಮುಖದಿಂದ ಬೇಡ ಬೇಡವೆನ್ನುತ್ತ ಅವೆಲ್ಲವುಗಳನ್ನೂ ಧರಿಸಿದೆನು. ಈಗ ನನ್ನ ಮೈಮೇಲಿರುವ ವಸ್ತ್ರಾಭರಣಗಳೇ ಅವು. ಇವುಗಳನ್ನು ಕಂಡೇ ತಾವು ನನ್ನನ್ನು ಗುರ್ತಿಸಲಾರದಾದಿರಿ. ಬಳಿಕ ದಿನೇ ದಿನೇ ಮಹಾರಾಜನು ನನ್ನನ್ನು ಹೆಚ್ಚೆಚ್ಚು ಪ್ರೀತಿಸ ಹತ್ತಿದನು; ಆದರೆ ಅವನು ನನ್ನ ರೂಪ-ಲಾವಣ್ಯಗಳನ್ನು ನೋಡುವದರಲ್ಲಿ ತಲ್ಲೀನನಾಗುತ್ತಿದ್ದನೇ ಹೊರತು. ನನ್ನ ಮೈ ಮುಟ್ಟಿ ಒತ್ತಾಯಪಡಿಸುವ ಸಾಹಸಕ್ಕೆ ಆತನು ಎಂದೂ ಮನಸ್ಸು ಮಾಡಲಿಲ್ಲ. ಆಗಾಗ್ಗೆ ನಾನು ಗೌಪ್ಯವಾಗಿ ಊರೊಳಗೆ ಹೋಗಿ, ಶ್ರೀ ಕಾಲಭೈರವನ ಮಂದಿರದೊಳಗೆ ವಾಸಿಸುತ್ತಿದ್ದ ಮಾತಂಗಿ ಭೈರವಿಯನ್ನು ಕಂಡು ಮಾತನಾಡಿ ಬರುತ್ತಿದ್ದೆನು. ಬೇಕಾದಾಗ ಬೇಕಾದಲ್ಲಿಗೆ ಹೋಗಿ ಬರುವದಕ್ಕೆ ಮಗಧೇಶನು ನನಗೆ ಅನುಕೂಲತೆಯೊದಗಿಸಿ ಕೊಟ್ಟಿದ್ದನು; ಆದರೆ ಆತನ ದೇಶದ ಮೇರೆ ದಾಟಿ ಹೋಗಲಿಕ್ಕೆ ವನಗೆ ಅಪ್ಪಣೆಯಿರಲಿಲ್ಲವೆಂಬುದು ಇಂದೇ ನನ್ನ ಮನವರಿಕೆಯಾಯಿತು; ಯಾಕಂದರೆ, ನನ್ನ ಮೇಣೆಯು ಮಗಧದ ಗಡಿಯನ್ನು ದಾಟಿ ಈ ಪರ್ವತ ರಾಜ್ಯದ ಪ್ರದೇಶದಲ್ಲಿ ಬರಲಿಕ್ಕೂ, ಆ ಗಡಿ ಪ್ರದೇಶದ ರಕ್ಷಕ ಗಣವು ನಮ್ಮನ್ನು ಸುತ್ತುಗಟ್ಟಿ ಬಂದು ಮುತ್ತಲಿಕ್ಕೂ ಗಂಟೇ ಬಿತ್ತು.

ಮಾತಂಗಿ ಭೈರವಿಯೊಡನೆ ಸಂಚುಮಾಡಿ, ಕೆಲದಿನಗಳ ಹಿಂದೆ ನಾನು ಹೀಗೆ ಒಂದು ಮಧ್ಯರಾತ್ರಿಯಲ್ಲಿ ಒಂದು ಬುರುಕೆ ಹಾಕಿದ ಮೇಣೆಯಲ್ಲಿ ಕುಳಿತು ಮುರಲಾರಾಣಿಯ ಅಂತಃಪುರಕ್ಕೆ ನಡೆದೆನು. ನನ್ನ ಬೋವಿಗಳಲ್ಲಿ ತಾವು ನನ್ನ ಸಹಾಯಕ್ಕೆಂದು ಕಳಿಸಿದ ನಾಲ್ವರೂ ನನ್ನೊಡನೆ ಬಂದಿದ್ದರು. ಅಂತಃಪುರದ ತಲೆಬಾಗಿಲಿಗೆ ಮೇಣೆಯು ಹೋದೊಡನೆ ಉಳಿದವರನ್ನು ಬಿಡಿಸಿ, ಅವರೇ ನನ್ನ ಮೇಣೆಯನ್ನು ಹೊತ್ತುಕೊಂಡು ಒಳಗೆ ಹೋದರು. ಅಲ್ಲಿ ಆ ನಡುರಾತ್ರಿಯ ಸಮಯದಲ್ಲಿ ಮಾತಂಗಿ ಭೈರವಿಯು ನನ್ನ ದಾರೀ ಕಾಯುತ್ತ ನಿಂತಿದ್ದಳು, ಕೂಡಲೆ ನಾನು ಮೇಣೆಯಿಂದ ಇಳಿದು, ಮುರಲಾರಾಣಿಯ ಶಯನಾಗಾರವನ್ನು ಪ್ರವೇಶಿಸಿದೆನು. ಮಾತಂಗಿ ಭೈರವಿಯು ಆ ಗೃಹದ ಬಾಗಿಲಲ್ಲಿ ನಿಂತು ಒಳಗೆ ಯಾರೂ ಬಾರದ ಹಾಗೆ ನೋಡಿಕೊಳ್ಳುತ್ತಿದ್ದಳು ನಾನು ಒಳಗೆ ಹೋದೊಡನೆಯೇ ಮುರಲಾರಾಣಿಯ ಪಲ್ಲಂಗದ ಬಳಿಗೆ ಹೋದೆನು. ಅಂದು ಯೋಗಾಯೋಗವು ಅನುಕೂಲವಿದ್ದದರಿಂದ ನಾನು ಒಳಗೆ ಹೋದಾಗ ಮುರಲಾರಾಣಿಯು ಬಲಮಗ್ಗಲಿನಿಂದಲೇ ಮಲಗಿದ್ದಳು. ಆದರಿಂದ ಸಹಜವಾಗಿಯೇ ಅವಳ ಎಡಗೈಯು ಮೇಲಾಗಿತ್ತು. ಆ ಕೈಯೊಳಗೆ ಮಂತ್ರಪೂತ ಕಂಕಣವಿದ್ದ ಭಾಗದ ಮೇಲೆ ಅಗ್ಗ ವಸ್ತ್ರಾಚ್ಛಾದನವೂ ಇರಲಿಲ್ಲ. ಆದರಿಂದ ನನ್ನ ಕೆಲಸಕ್ಕೆ ಬಹಳೇ ಅನುಕೂಲವಾಯಿತು. ಮುರಲಾರಾಣಿಯ ಕಾಲುದೆಸೆಯಲ್ಲಿ ಅವಳ ಚೇಟಿಯೊಬ್ಬಳು ಪವಡಿಸಿದ್ದಳು. ಕಂಕಣವನ್ನು ಬಿಚ್ಚಿಕೊಳ್ಳುವಾಗ ದಾಸಿಗಾಗಲಿ ಮುರಲಾರಾಣಿಗಾಗಲಿ ಎಚ್ಚರವಾಗಬಾರದೆಂದೂ, ಎಚ್ಚರವಾದರೂ ಅವರಿಗೆ ನನ್ನ ಗುರ್ತು ಹತ್ತಬಾರದೆಂದೂ, ಅವರು ಎದ್ದು ನನ್ನನ್ನು ಹಿಡಿಯಬಾರದೆಂದೂ ತಾವು ನನಗೆ ಮೊದಲೇ ಮಂತ್ರಿಸಿಕೊಟ್ಟ ವಿಭೂತಿಯನ್ನು ನಾನು ಅವರ ಮೇಲೆ ಎಸೆದೆನು. ಅದರಿಂದ ನನ್ನ ಮುಂದಿನ ಕೆಲಸಕ್ಕೆ ಯಾರಿಂದಲೂ ವ್ಯತ್ಯಯವುಂಟಾಗಲಿಲ್ಲ. ಕೂಡಲೆ ನಾನು ಆ ಕಂಕಣದ ಕೀಲವನ್ನು ಮೆಲ್ಲನೆ ಒತ್ತಿದೆನು. ಅದು ಬಾಯಿಬಿಟ್ಟು ಬಿಚ್ಚಲ್ಪಟ್ಟಿತು. ಅದನ್ನು ನಾನು ನನ್ನ ಉಡಿಯಲ್ಲಿ ಬಚ್ಚಿಟ್ಟುಕೊಂಡು, ಹೋದ ದಾರಿಯಿಂದ ಹಿಂದಿರುಗಿದೆನು. ದ್ವಾರದಲ್ಲಿ ನಿಂತಿದ್ದ ಮಾತಂಗಿ ಭೈರವಿಗೆ ನಾನು ಅದನ್ನು ತೋರಿಸಿದೆನು. ಅವಳು ಕಣ್ಣುಸನ್ನೆ ಮಾಡಲು, ಮತ್ತೆ ನಾನದನ್ನು ಬಚ್ಚಿಟ್ಟುಕೊಂಡು, ನನ್ನ ಮೇಣೆಯಲ್ಲಿ ಬಂದು ಕುಳಿತೆನು. ಮಾತಂಗಿಯು ನನ್ನನ್ನು ಅಂತಃಪುರದ ಮುಖ್ಯ ದ್ವಾರದ ವರೆಗೂ ಕಳಿಸಲಿಕ್ಕೆ ಬಂದಿದ್ದಳು. ನಡುವೆ ಹತ್ತುತ್ತಿದ್ದ ಎಷ್ಟೋ

ಚೌಕಿಗಳಲ್ಲಿ ಹಲಕೆಲವು ಕಾವಲುಗಾರರು ಇದ್ದರು. ಅವರಲ್ಲಿ ಕೆಲವರು ಭಂಗಿ ಸೇದುತ್ತಿದ್ದರು. ಕೆಲವರು ಗೊರಕೆ ಹೊಡೆಯುತ್ತ ಮಲಗಿದ್ದರು. ಬೇರೆ ಕೆಲವರು ತೂಕಡಿಸುತ್ತ ಕುಳಿತು ಪಹರೆ ಮಾಡುತಲಿದ್ದರು. ತಮ್ಮ ಅಪ್ಪಣೆಯಂತೆ ಮಾತಂಗಿಭೈರವಿಯು ತನ್ನ ಮಾಟದಿಂದ ಅಂದು ಆ ಕಾಲಕ್ಕೆ ಅವರ ಬುದ್ಧಿಭ್ರಂಶವಾಗುವ ಹಾಗೆ ಮಾಡಿದ್ದಳಾದ್ದರಿಂದ, ಅವರಲ್ಲಿಯ ಯಾರೊಬ್ಬರೂ ನಮಗೆ ಆತಂಕಪಡಿಸಲಿಲ್ಲ; ಇಷ್ಟೇ ಅಲ್ಲ, ಅವರಲ್ಲಿಯ ಒಬ್ಬಿಬ್ಬರು ನಮ್ಮನ್ನು ತಡೆಯುವ ಸಲುವಾಗಿ ಧಾವಿಸಿ ಬರುವಂತೆ ಕಂಡರೂ, ಯಾವ ಕಾರಣದಿಂದಲೋ ಅವರು ನಮ್ಮ ಮೇಲೆಯವರೆಗೆ ಬರಲಿಲ್ಲ!

ಬಳಿಕ ನಾನು ನನ್ನ ರಕ್ಷಕರೊಡನೆ ವಿಲಾಸಕಾನನಕ್ಕೆ ಬಂದೆನು. ತಮ್ಮ ವಿಭೂತಿಯ ಪ್ರಭಾವದಿಂದ ನಾವು ಅಲ್ಲಿಗೆ ಬರುವ ವರೆಗೂ ಮಹಾರಾಜನು ಎಚ್ಚತ್ತಿದ್ದಿಲ್ಲ. ಬೆಳಗಿನ ಝಾವದಲ್ಲಿ ಆತನು ತಡವರಿಸುತ್ತ ಎದ್ದನು. ವಿಲಾಸಕಾನನದಲ್ಲಿ ಅದು ವರೆಗೆ ಆತನು ಇಡಿ ರಾತ್ರಿಯನ್ನು ಎಂದೂ ಕಳೆದಿರಲಿಲ್ಲ. ಆದರಿಂದ ಅಂದು ಎದ್ದ ಕೂಡಲೆ ಅವನಿಗೆ ತುಸ ಅಸಮಾಧಾನವಾದಂತೆ ಕಂಡಿತು; ಆದರೆ ಆ ಸುಪ್ರಭಾತ ಕಾಲದಲ್ಲಿ ಅವನಿಗಾದ ಅಸಮಾಧಾನವು ಮುರಲಾರಾಣಿಯ ಕೈಯೊಳಗಿದ್ದ ಮಂತ್ರಪೂತ ಕಂಕಣಚೋರದಿಂದಲೇ ಅಪ್ರತ್ಯಕ್ಷವಾಗಿ ಆಗಿರಬಹುದೆಂದು ನನ್ನ ಮನವರಿಕೆಯಾಯಿತು. ಯಾಕಂದರೆ, ಅಂದಿನಿಂದ ಧನನಂದ ಮಹಾರಾಜನು ಪುನಃ ಎಂದೂ ಶಾಂತ ಹಾಗು ಸಮಾಧಾನ ಚಿತ್ತದವನಾಗಿ ನನಗೆ ಕಾಣಿಸಲಿಲ್ಲ, ಇರಲಿ.

ಮರು ದಿನ ಹೊತ್ತು ಏರುವಷ್ಟರಲ್ಲಿ ಕಂಕಣಚೋರದ ವಾರ್ತೆಯು ಪಾಟಲಿಪುತ್ರದಲ್ಲೆಲ್ಲ ಹರಡಿತು ಅದನ್ನು ಕೇಳಿ ನನ್ನಲ್ಲಿ ಸಮಾಧಾನ-ಅಸಮಾಧಾನಗಳೆರಡೂ ಏಕಕಾಲದಲ್ಲಿ ಉಂಟಾದವು. ತಮ್ಮ ಆಜ್ಞೆಯ ಪ್ರಕಾರ ಆ ಕಾರ್ಯವು, ಬೊಬ್ಬಾಟವಿಲ್ಲದೆ ಹಾಗೆ ನನ್ನಿಂದ ಆದ ಬಗ್ಗೆ ನನಗೆ ಒಮ್ಮೆ ಒಳ್ಳೇ ಸಮಾಧಾನವೆನಿಸಿದರೆ, ಮತ್ತೊಮ್ಮೆ ಈ ಕಳವು ಹೊರಬಿದ್ದು ನಾನು ತಪ್ಪಿತಸ್ಥನೆಂದು ಜನ ನಿದರ್ಶನಕ್ಕೆ ಬಂದರೆ, ನನ್ನ ತನು-ಮನ-ಧನಗಳಿಗಾಗಬಹುದಾದ ದಂಡಣೆಯ ಭೀಕರ ಕಲ್ಪನೆಯ ಮೂಲಕ ನನಗೆ ಕಡು ಅಸಮಾಧಾನವೆನಿಸುತ್ತಿತ್ತು; ಆದರೆ ನನ್ನ ಮನಸ್ಸಿನ ಆ ಚಂಚಲತೆಯು ಬಹಳ ವೇಳೆಯ ವರೆಗೆ ಸ್ಥಿರವಾಗಿ ಉಳಿಯಲಿಲ್ಲ. ಯಾಕಂದರೆ, ಮುಂದೆ ಒಂದು ತಾಸಿಗೇ ಧನನಂದ ಮಹಾರಾಜನು ಪುನಃ

ಣಾನಿದ್ದ ವಿಲಾಸಕಾನನಕ್ಕೆ ಬಂದನು. ಅವನು ಬಂದಾಗ ತನ್ನ ಪ್ರಿಯ ಮಡದಿಯ ಕೈಯೊಳಗಿನ ರತ್ನಖಚಿತ ಮಂತ್ರಪೂತ ಕಂಕಣವು ಕಳವಾದ ಬಗ್ಗೆ ಅವನಿಗೆ ವಿಶೇಷ ವ್ಯಸನವೆನಿಸಿದಂತೆ ತೋರುತ್ತಿದ್ದರೂ, ನನ್ನ ಮಿಷ್ಟ-ಭಾಷಣ, ಒನಪು-ಒಯ್ಯಾರಗಳಿಂದ ಆತನಲ್ಲಿಯ ಆ ವ್ಯಸನಾಕ್ರಾಂತತೆಯು ಹೇಳಹೆಸರಿಲ್ಲದೆ ಹೋಯಿತು. ಅವನ ಮನಸ್ಸಿನ ಆ ವ್ಯಸನವನ್ನು ಹೋಗಲಾಡಿಸುವದಕ್ಕಾಗಿ, ಅದು ವರೆಗೆ ನಾನು ಎಂದೂ ಕೈಯಿಂದಕೂಡ ಮುಟ್ಟದೆ ಇದ್ದ ಮದ್ಯವೆಂಬ ಮಾದಕ ಪದಾರ್ಥವನ್ನು ಆತನಿಗೆ ಸಾಕು ಸಾಕೆನ್ನುವ ವರೆಗೆ ಕುಡಿಸಿದೆನು ಅದರಿಂದ ಅವನಿಗೆ ನನ್ನ ವಿಷಯವಾಗಿ ಒಂದು ಬಗೆಯ ಭ್ರಮವಾಯಿತು. ಅಂದು ಧನನಂದನಿಗಾದ ಆ ಭ್ರಮವು ಪ್ರತಿ ನಿತ್ಯ ವೃದ್ಧಿಂಗತವಾಗುತ್ತ ನಡೆದು, ಈಗ ಅದು ಕೇವಲ ವಿಕ್ಷೋಭಸ್ಥಿತಿಗೆ ಮುಟ್ಟಿ ಬಿಟ್ಟಿರುತ್ತದೆ.

ಮಗಧೇಶನು ಇತ್ತೀಚೆಗೆ ತನ್ನ ಸಾಮ್ರಾಜ್ಯದ ಯಾವ ಕೆಲಸವನ್ನೂ ಮಾಡುವದಿಲ್ಲ. ಯಾರಾದರೂ ಏನೊಂದು ಸಂತೋಷದ ಅಥವಾ ವಿಷಾದದ ಸಂಗತಿಯನ್ನು ತಿಳಿಸ ಹೋದರೆ, ಆತನು ವಿಚಾರ ಮಾಡದೆ ಆ ಸುದ್ದಿ ಹೇಳಬಂದವನನ್ನು ಹೆಚ್ಚಾಗಿ ತಿರಸ್ಕರಿಸುವನು. ಅಮಾತ್ಯ ರಾಕ್ಷಸನೂ ಕೂಡ ಇತ್ತೀಚೆಗೆ ಅವನ ಕಡೆಗೆ ಹೋಗಲಿಕ್ಕೆ ಬಹಳವಾಗಿ ಅಂಜುತ್ತಾನೆ. ಯಾಕಂದರೆ, ಮಗಧೇಶನ ಚಿತ್ತವಿಕ್ಷಿಪ್ತತ್ವದಿಂದ ಯಾರಿಗೆ ಯಾವ ಕಾಲಕ್ಕೆ ಎಂಥ ಅನರ್ಥ ಪ್ರಸಂಗ ಬಂದೀತೆಂಬದು ಪಾಟಲೀಪುತ್ರದಲ್ಲಿ ಈಗ ನಿಶ್ಚಿತವಿಲ್ಲದಾಗಿದೆ! ಧನನಂದನು ನನ್ನ ರೂಪ-ಲಾವಣ್ಯಗಳ ಲಾಲಸೆಯಿಂದಲೂ, ತಮ್ಮ ಕವಚದ ಪ್ರಭಾವದಿಂದಲೂ, ಮುರಲಾರಾಣಿಯ ವಾಮಹಸ್ತದೊಳಗಿನ ಮಂತ್ರಪೂತ ಕಂಕಣವು ಅಪಹೃತವಾದದ್ದರಿಂದಲೂ ಬಹು ಕ್ಷುಲ್ಲಕ ಮನಸ್ಸಿನವನಾಗಿರುತ್ತಾನೆ ಅವನಲ್ಲಿಯ ಸಾರ್ವಭೌಮ ಕಳೆಯು ಇಷ್ಟೇ ಏಕೆ, ಪುರುಷತ್ವವು ಕೂಡ ಲೋಪವಾಗಿಬಿಟ್ಟಿದೆ! ಇತ್ತೀಚೆಗೆ ಅವನು ಜೀವಚ್ಛವವಾಗಿ ತೋರುತ್ತಲಿದ್ದಾನೆ.

ಮಹಾತ್ಮರೇ, ತಾವು ಈ ತರಿತೆಗೆ ಯಾವ ಕೆಲಸವನ್ನು ಒಪ್ಪಿಸಿದ್ದಿರೋ, ಅದನ್ನು ಇವಳು ಯಥಾಮತಿ-ಯಥಾಶಕ್ತಿಯಿಂದ ನೆರವೇರಿಸಿರುತ್ತಾಳೆ ಧನನಂದನ ಚಿತ್ತವಿಕ್ಷಿಪ್ತತೆಯಿಂದ ಕುಮಾರ ಚಂದ್ರಗುಪ್ತನು ಪಾಟಲಿಪುತ್ರದಿಂದ ಹೊರಡಿಸಲ್ಪಟ್ಟನು. ಕಾರಾ ರಕ್ಷಕರ ಮುಖ್ಯಸ್ಥನಾದ ಚಂದ್ರಪಾಲನು ಸೆರೆಯಿರಿಸಲ್ಪಟ್ಟನು. ಧನನಂದನ ಮಲತಾಯಿಯೂ ಚಂದ್ರಗುಪ್ತನ ಹಡೆದ ತಾಯಿಯೂ ಆದ ವೃದ್ಧ ಮುರಾ ರಾಣಿಯನ್ನು

ಒಂದೆರಡು ದಿನಗಳಲ್ಲಿ ಘಾತುಕರಿಂದ ಕೊಲ್ಲಿಸುವ ಆಲೋಚನೆ ನಡೆದಿರುತ್ತದೆ. ಚಂದ್ರಗುಪ್ತನನ್ನು ಕೊಲ್ಲಿಸಿಬಿಡಬೇಕೆಂಬ ತನ್ನ ಹವಣಿಕೆಗೆ ಮಲಯಕೇತುವು ಅಡ್ಡಬಂದದರಿಂದ, ಆತನೊಡನೆ ಯುದ್ಧಮಾಡಿ ಆತನ ರಾಜ್ಯವನ್ನೇ ನೆಲಸಮ ಮಾಡುವ ಹವ್ಯಾಸಕ್ಕೆ ಬಿದ್ದು ನಂದನು ಲಕ್ಷಗಟ್ಟಲೆ ಸೈನ್ಯ ಕೂಡಿಸಿರುವನು. ಇಂಥ ಪುಟ್ಟ ರಾಜ್ಯವನ್ನು ಸೋಲಿಸುವದಕ್ಕಾಗಿ ಇಷ್ಟು ದೊಡ್ಡ ದಂಡೇಕೆ ಬೇಕೆಂಬ ಬಗ್ಗೆ ದೊಡ್ಡ ದೊಡ್ಡ ದಂಡಾಳುಗಳೂ ಕೂಡ ಮಗಧೇಶನ ಚೇಷ್ಟೆ ಮಾಡಹತ್ತಿದ್ದಾರೆ! ವಿಪ್ರಶ್ರೇಷ್ಠ ಚಾಣಕ್ಯಮುನಿಗಳೇ, ಯಾವ ತಮ್ಮ ಕೃಪಾಕಟಾಕ್ಷದಿಂದಲೂ ಮಂತ್ರ-ತಂತ್ರಗಳಿಂದಲೂ ಧನನಂದನು ತನ್ನ ಪ್ರಿಯಮಡದಿಯೊಡಗೂಡಿ ಮಗಧ ಸಾಮ್ರಾಜ್ಯದ ಪ್ರಜೆಗಳಿಗೆ ತಾಯಿತಂದೆಯಂತೆ ಒಪ್ಪುತ್ತಿದ್ದನೋ, ಅದೇ ಆತನು ತಮ್ಮ ಅವಮಾನ ಮಾಡಿ ದ್ರೋಹ ಕಟ್ಟಿಕೊಂಡದ್ದರಿಂದ ಈ ದುರ್ದೆಸೆಗೆ ಈಡಾಗಿರುತ್ತಾನೆ!

ಧನನಂದನ ಸ್ಥಿತಿಯು ಈ ಮಜಲಿಗೆ ಮುಟ್ಟಿದ ಮೇಲೆ ಹಾಗು ಆತನು ಪರ್ವತರಾಜ್ಯದೊಡನೆ ಪ್ರತ್ಯಕ್ಷವಾಗಿ ಕಾಳಗ ಪ್ರಾರಂಭಿಸುವ ತುಸ ಮೊದಲು ತಾವು ಅಲ್ಲಿಂದ ನನಗೆ ಹೊರಟಿದ್ದು ಬರಲು ಹೇಳಿದಂತೆ, ಇಂದು ನಾನು ಅಲ್ಲಿಂದ ಹೊರಟು ಬಂದೆನು ಆತನು ತನ್ನ ಸೈನ್ಯದಲ್ಲಿ ಇಬ್ಭಾಗ ಮಾಡಿ, ಒಂದು ಭಾಗಕ್ಕೆ ತಾನು ಸ್ವತಃ ಅಧಿಪತಿಯಾಗಿರುವನು. ಇನ್ನೊಂದು ಭಾಗವನ್ನು ತನ್ನ ಸೇನಾಪತಿಯ ಅಧೀನದಲ್ಲಿರಿಸಿರುವನು. ಅವರ ಸೈನ್ಯವು ಒಂದೆರಡು ದಿನಗಳಲ್ಲಿ ಈ ಪರ್ವತರಾಜ್ಯವನ್ನು ಮುತ್ತಲಿರುವದು. ಇಂದು ದಾರಿಯಲ್ಲಿ ಆ ಗಡಿಯ ಕಾವಲುಗಾರರಿಗೆ ನಮ್ಮ ಬೋವಿಗಳ ಸಂಶಯ ಬರಲು ಅವರು ನನ್ನ ಮೇಣೆಯನ್ನು ಅಡ್ಡಗಟ್ಟಿದರು. ತಮ್ಮ ಕೃಪಾಪ್ರಭಾವದ ಮೂಲಕವಾಗಿಯೇ ನಾವೆಲ್ಲರೂ ಆ ಕುತ್ತಿನೊಳಗಿಂದ ಪಾರಾಗಿ, ಇಂದು ತಮ್ಮ ಬಳಿಗೆ ಬಂದಿರುತ್ತೇವೆ.

————

# ವೃದ್ಧ ಭೈರವನ ಉತ್ಸಾಹ.

ಈ ಮೇರೆಗೆ ನುಡಿದು ತಡಿತೆಯು ಸುಮ್ಮನಾಗಲು, ಚಾಣಕ್ಯನು ಅವಳ ಕಾರ್ಯನಿರ್ವಾಹಕತೆಯ ವಿಷಯವಾಗಿ ಅವಳನ್ನು ಹೆಚ್ಚಾಗಿ ಶ್ಲಾಘಿಸಿ ಶಕಟಾರನ ಮನೆಗೆ ಕರೆದೊಯ್ದನು. ರಾಜರಾಜ್ಞಿಯಂತಿರುವ ಇವಳ ವೇಷಭೂಷಣಗಳನ್ನು ನೋಡಿ, ಶಕಟಾರನಿಗೂ ಲಲಿತೆಗೂ ಇವಳ ಗುರುತು

ಹತ್ತಲಿಲ್ಲ. ಕಡೆಗೆ ಚಾಣಕ್ಯನೇ ಆಕೆಯ ಹೆಸರನ್ನು ತಿಳಿಸಲು, ಅವರು ಒಳ್ಳೇ ಆಶ್ಚರ್ಯಚಕಿತರಾದರು. ಆಲ್ಲಿ ತಡಿತೆಯು ತನ್ನಲ್ಲಿದ್ದ ಮುರಲಾ ರಾಣಿಯ ವಾಮಹಸ್ತದೊಳಗಿನ ರತ್ನಖಚಿತ ಕಂಕಣವನ್ನು ಚಾಣಕ್ಯನಿಗೆ ಒಪ್ಪಿಸಿದಳು.

ತಡಿತೆಯನ್ನು ಅಲ್ಲಿಯೇ ಬಿಟ್ಟು ಚಾಣಕ್ಯನು ಶಕಟಾರನೊಡನೆ ತನ್ನ ಬೀಡಾರಕ್ಕೆ ಬಂದನು. ಆಗ ಅಲ್ಲಿ ಮಲಯಕೇತು-ಚಂದ್ರಗುಪ್ತರು ಇವರ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತಿದ್ದರು. ಅವರೆದುರಿಗೆ ಯಾವದೋ ಒಂದು ಮಹತ್ವದ ಸುದ್ದಿಯನ್ನು ತಂದಂಥ ಒಬ್ಬ ಗುಪ್ತಚಾರನು ನಿಂತಿದ್ದನು ಚಾಣಕ್ಯ-ಶಕಟಾರರು ಅಲ್ಲಿಗೆ ಬಂದು ತಮ್ಮ ತಮ್ಮ ಆಸನಾಧಿಷ್ಠಿತರಾದ ನಂತರ ಆ ಪ್ರಣಿಧಿಯು ಮಲಯಕೇತುವನ್ನು ಕುರಿತು:—

"ಮಲಯಕೇತು ಮಹಾರಾಜ, ಮಗಧೇಶನ ಸೈನ್ಯವು ನಮ್ಮ ದೇಶದೊಳಗಿನ ಗಿರಿನದಿಯ ಆಚೆಯ ಪಾರ್ಶ್ವದಲ್ಲಿ ಇಂದು ಸಾಯಂಕಾಲಕ್ಕೆ ಬೀಡು ಬಿಟ್ಟಿರುತ್ತದೆ; ಇಂದೇ ರಾತ್ರಿಯಲ್ಲಾಗಲಿ, ನಾಳೆ ಬೆಳಗಾದ ಬಳಿಕಾಗಲಿ ಅದು ಆ ನದಿಯನ್ನು ದಾಟ ಈಚೆಗೆ ಬರಬಹುದಾಗಿದೆ. ಆ ಹೊಳೆಯಲ್ಲಿ ಎಲ್ಲೆಲ್ಲಿ ಆಳವಾದ ಮಡುವುಗಳಿರುತ್ತವೆಯೋ, ಅಲ್ಲಲ್ಲಿ ಈಗ ಅವರು ಪೂಲು ಕಟ್ಟತೊಡಗಿರುತ್ತಾರೆ. ಲಮ್ಮಾಣಿಗನ ವೇಷ ಧರಿಸಿದ್ದ ನನ್ನನ್ನು ಕೂಡ ಅವರು ಆ ಕೆಲಸಕ್ಕೆ ಬಿಟ್ಟೇ ಹಿಡಿದಿದ್ದರು"

ಈ ವಾರ್ತೆಯನ್ನು ಕೇಳಿ ಚಿಂತಾಕ್ರಾಂತನಾದ ಚಾಣಕ್ಯನು:—ಆ ದಳದ ಸೇನಾಪತಿಯು ಸ್ವತಃ ಧನನಂದನೇ ಆಗಿರುತ್ತಾನೇನು? ಎಂದು ಪ್ರಣಿಧಿಗೆ ಪ್ರಶ್ನೆ ಮಾಡಿದನು.

ಪ್ರಣಿಧಿ:—ಇಲ್ಲ. ಅವನು ಬೇರೆ ಭಾಗದ ದಂಡಿನ ಅಧಿಪತಿಯಾಗಿದ್ದು, ಬೇರೆ ಕಡೆಯಿಂದ ಬಂದು, ನಮ್ಮ ಮಲಯಪುರಿಗೆ ಮುತ್ತಿಗೆ ಹಾಕುವ ಸಿದ್ಧತೆಯಲ್ಲಿರುತ್ತಾನೆ.

ಚಾಣಕ್ಯ:—ಪ್ರಣಿಧೀ, ನೀನು ಇನ್ನು ವಿಶ್ರಾಂತಿ ಪಡೆ, ಮಧ್ಯರಾತ್ರಿಯ ಸಮಯಕ್ಕೆ ಚಂಡ ಕೌಶಿಕರೊಡನೆ ನನ್ನ ಬಳಿಗೆ ಬಾ, ಎಂದು ಹೇಳಿ ಅವನನ್ನು ಕಳಿಸಿದನು.

ಆ ಗುಪ್ತಚರನು ಹೊರಟು ಹೋದ ಬಳಿಕ ಚಾಣಕ್ಯನು ಆ ಸಭಾಗೃಹದಲ್ಲಿ ಎದ್ದು ನಿಂತು, ಗಂಭೀರ ಸ್ವರದಿಂದ:—ಮಹಾರಾಜ, ಮಲಯಕೇತೂ, ಸ್ವರ್ಗತುಲ್ಯವೂ ಸ್ವಾಧೀನತೆಯ-ಸ್ವರಾಜ್ಯದ ಲೀಲಾ ನಿಕೇತವೂ ಪಾರ್ವತೀಯರ ಜನ್ಮಭೂಮಿಯೂ ಆಗಿರುವ ಈ ಪರ್ವತರಾಜ್ಯದ ಸ್ವಾತಂ

ತ್ರತೆಯನ್ನು ಕಾಪಾಡಿಕೊಳ್ಳುವ ಇಚ್ಛೆಯು ನಿನಗಿದ್ದರೆ, ನೀನು ಈಗ ಎಳ್ಳಷ್ಟೂ ಅನುಮಾನವಿಲ್ಲದೆ ನನ್ನ ಅಭಿಮತದಂತೆ ವರ್ತಿಸು. ಇಗೋ, ಈ ಮಂತ್ರಪೂತ ಖಡ್ಗವನ್ನು ನಾನು ನಿನ್ನ ಟೊಂಕಕ್ಕೆ ಕಟ್ಟುತ್ತೇನೆ. ನೀನು ಈಗಲೆ ನಿನ್ನ ದಂಡಿನೊಡನೆ ಆ ಅರಣ್ಯಕ್ಕೆ ಹೋಗಿ ಹೊಳೆಯನ್ನು ದಾಟಿ ಮಾಗಧೀಯ ಸೇನೆಗೆ ಅವರ ಹಿಂದಿನಿಂದ ಬಂದು ಉಚ್ಚಾಟನೆ ಕೊಡುವ ಉದ್ಯೋಗವನ್ನು ಮಾಡು, ಎಂದು ನುಡಿದವನೇ, ತನ್ನ ಆಸನದ ಕೆಳಗೆ ಬಚ್ಚಿಟ್ಟಿದ್ದ ಒಂದು ರತ್ನಖಚಿತ ಖಡ್ಗವನ್ನು ಮಲಯಕೇತುವಿನ ಟೊಂಕಕ್ಕೆ ಕಟ್ಟಿದನು; ಹಾಗು ಆತನ ತಲೆಯ ಮೇಲೆ ದೇವರ ಪ್ರಸಾದದ ಪುಷ್ಪವನ್ನಿರಿಸಿ ಅವನನ್ನು ಆಶೀರ್ವದಿಸಿದನು.

ತದನಂತರ ಚಾಣಕ್ಯಮುನಿಯು ಕುಮಾರ ಚಂದ್ರಗುಪ್ತನನ್ನುದ್ದೇಶಿಸಿ:—"ಯುವರಾಜ, ಮಾತೃಋಣವೆಂಬುದು ಲೋಕದಲ್ಲಿ ಘೋರವಾದ ಋಣವಾಗಿದ್ದದ್ದೇ ನಿಜವಿದ್ದರೆ, ಇಂದು-ನಾಳೆ ಮಗಧೇಶನ ಕೊಲೆಗಡುಕರ ಕೈಯಿಂದ ಕೊಲ್ಲಲ್ಪಡಬಹುದಾದ ಮುರಾ ರಾಣಿಯು ಸ್ತನಪಾನ ಮಾಡಿದ ಮಾತೃಋಣವನ್ನು ಯಥಾಶಕ್ತಿ ತೀರಿಸಬೇಕೆಂದು ನಿನಗನಿಸುತ್ತಿದ್ದರೆ, ನಿನ್ನ ವಿಪದ್ಬಂಧುವೂ, ಆಶ್ರಯದಾತೃವೂ ಆಗಿರುವ ಈ ಮಲಯಕೇತುವಿನ ಮೇಲೆ ನಿನ್ನ ಭಕ್ತಿ-ವಿಶ್ವಾಸಗಳಿದ್ದರೆ ಹಾಗು ಈ ಎಲ್ಲ ಕಾರ್ಯಗಳಿಗಾಗಿ ನಿನ್ನ ರಕ್ತವನ್ನು ಕೆಲಮಟ್ಟಿಗಾದರೂ ವ್ಯಯ ಮಾಡಬೇಕೆಂದು ನಿನಗನಿಸುತ್ತಿದ್ದರೆ ಮತ್ತು ನಿನ್ನ ಈ ಗುರುವಿನ ವಿಷಯಕ್ಕೆ ನಿನ್ನ ಅಂತರಂಗದಲ್ಲಿ ಭಕ್ತಿಯು ಲೇಶವಾದರೂ ಇದ್ದದ್ದಾದರೆ ನಾನು ನಿನಗೆ ಈಗ ಆಜ್ಞೆ ಮಾಡುವದೇನಂದರೆ:—ಮಹೇಶ ಕುಮಾರನಾದ ಸ್ಕಂಧನಂತೆ ನೀನು ಈಗಲೆ ಆ ಮಾಗಧೀಯರ ಸೇನೆಯನ್ನು ಹೊಕ್ಕು ಅದನ್ನು ಧ್ವಂಸ ಮಾಡು. ನಿನ್ನಂಥ ವೀರಾಗ್ರಣಿಯು ಗುರುವೆನಿಸಿಕೊಂಡಂಥ ಈ ಚಾಣಕ್ಯಬ್ರಾಹ್ಮಣನು ಮಗಧ ರಾಜನಿಂದ ಅವಮಾನಿತನಾಗಿರುವನೆಂಬದು ಸದಾ ನಿನ್ನ ಲಕ್ಷದಲ್ಲಿರಲಿ! ಆ ಅಪಮಾನದ ಸೇಡನ್ನು ತೀರಿಸಿಯೇ ಪ್ರಸ್ತುತ ಕಾಳಗದಲ್ಲಿ ನೀನು ನಿನ್ನ ಗುರುವನ್ನು ಸಂತೋಷಪಡಿಸಬೇಕೆಂಬ ವಿಷಯವು ನಿನ್ನ ಮನಸ್ಸಿಗೆ ಯಾವಾಗಲೂ ಕಟಿಯುತ್ತಿರಲಿ."

ಈ ಪ್ರಕಾರ ಕುಮಾರನಿಗೆ ಅಪ್ಪಣೆ ಮಾಡುವಾಗ ಚಾಣಕ್ಯನ ಎರಡೂ ಕಣ್ಣುಗಳು ಒಂದೇಸವನೇ ಕಿಡಿಯನ್ನು ಹಾರಿಸುತ್ತಿರುವ ಬೆಂಕಿಯ ಹಾಗೆ ಹೊಳೆಯುತ್ತಿದ್ದವು. ಮಲಯಕೇತುವಿಗೆ ಯಾವ ಪ್ರಕಾರದ ಮಂತ್ರಪೂತ ಖಡ್ಗವನ್ನು ಕಟ್ಟಿ ಅವನನ್ನು ಸನ್ಮಾನಿಸಿದನೋ, ಅದೇ ಮೇರೆಗೆ

ಚಂದ್ರಗುಪ್ತನನ್ನೂ ಚಾಣಕ್ಯನು ಸನ್ಮಾನಿಸಿದನು. ಆಗ ಕುಮಾರನು ಚಾಣಕ್ಯನ ಅಡಿದಾವರೆಗಳಿಗೆರಗಿ:—ಗುರುವರರೇ, ನೀವು ನನಗೆ ಈಗ ಇಷ್ಟೇ ಆಶೀರ್ವಾದ ಮಾಡಿರಿ! ಅದೇನಂದರೆ, ತಮ್ಮ ಆಜ್ಞೆಯನ್ನು ಪರಿ ಪಾಲಿಸಿದ ಹೊರತು ನಾನು ತಿರುಗಿ ಇಲ್ಲಿಗೆ ಬರಲೇ ಕೂಡದೆಂದು'' ಎಂದು ಪ್ರಾರ್ಥಿಸಿದನು. ಕೂಡಲೆ ಚಾಣಕ್ಯನು:-''ತಥಾಸ್ತು!'' ಎಂದು ಆನಂದ ದಿಂದ ನುಡಿದನು.

ಆ ಬಳಿಕ ಚಾಣಕ್ಯನು ಆ ವೀರರೀರ್ವರನ್ನೂ ಪಟ್ಟಣದ ಹೊರಗಣ ಮಹಾಕಾಲಭೈರವನ ಮಂದಿರಕ್ಕೆ ಕರೆದೊಯ್ದನು; ಹಾಗು ದೇವರ ಕೊರಳೊಳಗಿನ ಪೂಮಾಲೆಗಳನ್ನು ಅವರ ಕೊರಳೊಳಗೆ 'ವಿಜಯಿಮಾಲೆ' ಗಳಂತೆ ಹಾಕಿ ಅವರಿಬ್ಬರನ್ನೂ ಪ್ರೇಮಭರದಿಂದ ಆಲಿಂಗಿಸಿ, ಆಶೀರ್ವ ದಿಸಿ:—''ಮಲಯಕೇತು ಮಹಾರಾಜ! ಕುಮಾರ ಚಂದ್ರಗುಪ್ತಾ, ನೀವು ಇನ್ನು ನಿಮ್ಮ ನಿಮ್ಮ ಉದ್ಯೋಗಕ್ಕೆ ತೊಡಗಿರಿ. ನಾನೂ ಶಕಟಾರ ಮಂತ್ರಿಯೂ ಕೂಡಿ ನಿಮ್ಮ ಪಟ್ಟಣ ರಕ್ಷಿಸುವ ಉದ್ಯೋಗಕ್ಕೆ ತೊಡಗು ತ್ತೇವೆ. ನಮ್ಮ ವೃದ್ಧರ ಸಹಾಯಕ್ಕಾಗಿ ನಮ್ಮ ತಾಯಿ-ಶಕ್ತಿರೂಪಿಣಿ ಯಾದ, ಮಂದಾಕಿನಿಯು ಇರುತ್ತಾಳೆ. ಇಲ್ಲಿ ಏನೇನು ಮಾಡುವದು ಅವಶ್ಯಕವೊ, ಅದನ್ನೆಲ್ಲ ನಾವು ಮಾಡುತ್ತೇವೆ. ನಮಗೆ ಸೈನ್ಯದ ಬೆಂಬ ಲವು ಸಂಪೂರ್ಣವಾಗಿರುತ್ತದೆ. ಈ ಜಾಗ್ರತ ದೇವನಾದ ಮಹಾಕಾಲನೇ ತನ್ನ ಪಟ್ಟಣವನ್ನು ರಕ್ಷಿಸಿಕೊಳ್ಳುತ್ತಾನೆ; ಆದರೆ ಮಹಾರಾಜ, ನಾನು ತಮಗೊಂದು ವಿಷಯವನ್ನು ಕೇಳಿಕೊಳ್ಳುವದು ಉಳಿದಿದೆ. ಈ ಪರ್ವತ ರಾಜ್ಯದೊಳಗಿಂದ ಹರಿದಿರುವ ಗಿರಿನದಿಯ ಉಗಮವು ಈ ಕಾಲಭೈರವ ಸರೋವರದಿಂದಲೇ ಆಗಿರುವದಷ್ಟೇ? ಆ ಸರೋವರದೊಳಗಿನ ಆ ನದಿಯ ತುಂಬನ್ನು ಯಾರು ಕಾಯುತ್ತಿರುತ್ತಾರೆ?

ಆ ಕೂಡಲೆ ಮಲಯಕೇತುವು ತನ್ನ ಅಂಗರಕ್ಷಕರಲ್ಲೊಬ್ಬನನ್ನು ಕರೆದು, ಭೀಮರಾಜನೆಂಬ ಹೆಸರಿನ ಆ ತುಂಬಿನ ಕಾವಲುಗಾರನನ್ನು ಕರೆಕಳಿಸಿದನು.

ಆ ಅಂಗರಕ್ಷಕನು ಕೆಲ ನಿಮಿಷಗಳಲ್ಲಿಯೇ ಭೀಮರಾಜನನ್ನು ಕರೆ ತಂದನು. ಮಲಯಕೇತುವು ಕುತೂಹಲ ಪೂರ್ಣದನಿಯಿಂದ:—ವಿಪ್ರ ಶ್ರೇಷ್ಠರೇ, ನಮ್ಮ ಕಾಲಭೈರವ ಸರೋವರಕ್ಕೆ ತುಂಬು ಇರುವದೆಂಬದನ್ನು ನೀವು ಹೇಗೆ ತಿಳಿದುಕೊಂಡಿರಿ?

ಚಾಣಕ್ಯ:—ನನಗೆ ಈ ಸಂಗತಿಯನ್ನು ಜಗಜ್ಜನನಿಯೇ ತಿಳಿಸಿರು

ವಳು. ಆ ಬಗ್ಗೆ ವಿಶೇಷ ವಿಚಾರಣೆ ಮಾಡುವದರಲ್ಲಿ ಅರ್ಥವಿಲ್ಲ. ನೀನೇ ಆ ಸಂಗತಿಯ ಮರ್ಮವನ್ನು ನನಗೆ ತಿಳಿಸಿ ಬಿಡು, ಅಂದರಾಯಿತೆನ್ನಲು,

ಮಲಯಕೇತುವು ಆ ಕಾಲಭೈರವ ಸರೋವರದ ಹಾಗು ಆದರ ತುಂಬಿನಿಂದ ಪ್ರವಹಿಸುವ ಗಿರಿನದಿಯ ಸಂಗತಿಯನ್ನು ಯಥಾರ್ಥವಾಗಿ ಚಾಣಕ್ಯನಿಗೆ ತಿಳಿಸಿದನು. ಅದನ್ನು ಕೇಳಿ ಚಾಣಕ್ಯನಿಗೆ ಮತ್ತಷ್ಟು ಹರ್ಷವಾಯಿತು.

ಭೀಮರಾಜನಿಗೆ ಆ ತುಂಬಿನ ಸಂಬಂಧವಾಗಿ ಕೇಳಿಕೊಳ್ಳತಕ್ಕ ಸಂಗತಿಗಳನ್ನು ನಾನಾ ಪ್ರಶ್ನೆ ಮಾಡಿ ಕೇಳಿ ತಿಳಿದ ಬಳಿಕ ಚಾಣಕ್ಯನಿಗೆ ಸಮಾಧಾನವಾಯಿತು. ಬಳಿಕ ಆತನು ಮಲಯಕೇತು-ಚಂದ್ರಗುಪ್ತರಿಗೆ ಪುನಃ ಆಶೀರ್ವದಿಸಿ, ಅವರನ್ನು ಸಮರಾಂಗಣಕ್ಕೆ ಕಳಿಸಿಕೊಟ್ಟನು. ಅವರು ಬಹು ದೂರ ಹೊರಟು ಹೋದ ಬಳಿಕ ಚಾಣಕ್ಯನು ಭೀಮರಾಜನಿಗೆ:—ಭೀಮರಾಜಾ, ನೀನು ನನ್ನನ್ನು ಈಗಲೆ ಆ ತುಂಬಿನ ಸ್ಥಳಕ್ಕೆ ಕರೆಕೊಂಡು ನಡೆ, ನೋಡುವಾ. ನಾನು ಅದನ್ನು ಒಮ್ಮೆ ಕಣ್ಮುಟ್ಟಿ ನೋಡಲಿಚ್ಛಿಸುತ್ತೇನೆ. ಶಕಟಾರ ಮಂತ್ರಿನ್, ನೀವೂ ನನ್ನೊಡನೆ ಬಂದುಬಿಡಿರಿ.

ಅವರೀವರೂ ಭೀಮರಾಜನೊಡನೆ ಹೋಗಿ ಆ ತುಂಬಿನ ಸ್ಥಳವನ್ನು ನೋಡಿಕೊಂಡು ಮಲಯಪುರಿಗೆ ತಿರುಗಿ ಬಂದರು. ಮನೆಗೆ ಬಂದ ಮೇಲೆ ಚಾಣಕ್ಯನು:—"ಧರ್ಮರಕ್ಷಣೆಗಾಗಿಯೂ, ಸಜ್ಜನರ ರಕ್ಷಣ—ದುರ್ಜನರ ನಾಶಕ್ಕಾಗಿಯೂ ಭಗವಂತನೇ ಆಗಾಗ್ಗೆ ಅವತರಿಸಿ ಬರುವನೆಂದು ಶ್ರೀಮದ್ಭಗವದ್ಗೀತಾದಿಗಳಲ್ಲಿ ವರ್ಣಿಸಿರುವದರ ಪ್ರತ್ಯಕ್ಷ ಅನುಭವವವು ಇಂದು ನನಗೆ ಬಂದಂತಾಯಿತು; ಹಾಗು ಭಗವಂತನು ಭಕ್ತಾಧೀನನೆಂಬ ಮಾತೂ ಇಂದು ನನ್ನ ಪ್ರತ್ಯಯಕ್ಕೆ ಬಂತು. ನಾನು ನನ್ನ ಕಾರ್ಯಸಾಧನೆಯ ಸಲುವಾಗಿ ಪ್ರತಿನಿತ್ಯವೂ ಶ್ರೀ ಭಗವಂತನನ್ನು ಸ್ಮರಿಸುತ್ತಿದ್ದೆನು ನನ್ನಂಥ ಭಕ್ತಿವಿಹೀನ ಹಾಗು ಕ್ರೋಧಾವಿಷ್ಟ ಮಾನವನಿಗೆ ಕೂಡ ಆ ಭಗವಂತನು ಇಂದು ಒಲಿದಿರುತ್ತಾನೆ."

ಶಕಟಾರನು ಚಾಣಕ್ಯನ ಆ ನುಡಿಯನ್ನು ಸಮರ್ಥಿಸಿದನೇನೋ ನಿಜ; ಆದರೆ ಇಂದು ಅಕಾಲದಲ್ಲಿ ಚಾಣಕ್ಯನ ಬಾಯಿಂದ ಇಂಥ ಭಗವದ್ಭಕ್ತಿಯ ಸಂಬಂಧವಾದ ವಚನಗಳು ಏಕೆ ಹೊರಟವೆಂಬದು ಆತನಿಗೆ ತಿಳಿಯಲಿಲ್ಲ. ಅದರಿಂದ ಕುತೂಹಲಪೂರ್ಣನಾದ ಅವನು ಆ ಮುನಿವರನನ್ನು ಕುರಿತು:—ಭೂದೇವನೇ, ತಾವು ಈ ಸಂಗತಿಯನ್ನು ಹೀಗೆ ಆಕಸ್ಮಿಕವಾಗಿ ನುಡಿಯಲಿಕ್ಕೆ ಕಾರಣವೇನು?

ಚಾಣಕ್ಯ:— ಈ ಸಂಗತಿಯ ವಿವರಣವನ್ನು ಇನ್ನೊಮ್ಮೆ ವಿರಾಮದ ಕಾಲದಲ್ಲಿ ನಿನಗೆ ತಿಳಿಸುವೆನು ಕಾಕತಾಲೀಯ ನ್ಯಾಯದಂತೆ ಅಂಥ ಪ್ರಸಂಗವೇ ಈಗ ಒದಗಿದ್ದರಿಂದ ನಾನು ಹೀಗೆ ನುಡಿದಿರುವೆನೆಂಬದಿಷ್ಟೇ ಸಂಗತಿಯನ್ನು ನಿನಗೆ ತಿಳಿಸಿರುತ್ತೇನೆ. ಇನ್ನು ನೀನು ವಿಶ್ರಾಂತಿ ಪಡೆ ನಾನೂ ಇಂದು ಸಮಯಾತೀತವಾಗಿರುವ ನನ್ನ ಸಾಯಾಹ್ನಿಕವನ್ನು ಮಾಡುವೆನು. ಮಧ್ಯರಾತ್ರಿಯಾದ ಬಳಿಕ ಚಂಡ-ಕೌಶಿಕರನ್ನಷ್ಟು ಇತ್ತ ಕಡೆಗೆ ಕಳಿಸಿ ಕೊಡು.

ಚಾಣಕ್ಯನು ಅಂದು ಸ್ಥಿರಚಿತ್ತವುಳ್ಳವನಾಗಿರಲಿಲ್ಲ! ಯಾಕಂದರೆ, ಮಲಯಕೇತು-ಚಂದ್ರಗುಪ್ತರನ್ನು ಆ ರಾತ್ರಿಯಲ್ಲಿ ಸಸೈನ್ಯವಾಗಿ ಸಮರಾಂಗಣಕ್ಕೆ ಕಳಿಸಿಕೊಟ್ಟಿದ್ದೊಂದು ಅವನ ಚಿತ್ತ ಚಾಂಚಲ್ಯಕ್ಕೆ ಕಾರಣವಾಗಿತ್ತಲ್ಲದೆ, ಮಲಯಪುರಿಯ ರಕ್ಷಣೆಯ ಅತ್ಯಂತ ಮಹತ್ವದ ಕೆಲಸವನ್ನು ಆತನು ತನ್ನ ಕಡೆಗೆ ಇಟ್ಟುಕೊಂಡಿದ್ದನು. ಅವನು ಸ್ವತಃ ಒಳ್ಳೇ ಶಾಸ್ತ್ರ ನಿಪುಣನೂ, ಸುಪಂಡಿತನೂ ಇದ್ದ ಮಾತ್ರಕ್ಕೆ ಹಾಗು ಕುಟಿಲ ಸೂತ್ರದಂಥ ರಣರಂಗದಲ್ಲಿಯು ಅತ್ಯುಪಯುಕ್ತವಾದ ಗ್ರಂಥವನ್ನು ನಿರ್ಮಾಣ ಮಾಡಿದ ಮಾತ್ರದಿಂದ ಸ್ವತಃ ಕಡುಗಲಿಯಾಗಬಹುದೇ? ಯುದ್ಧದ ಕಾಲದಲ್ಲಿ ವೀರರಲ್ಲಿರಬೇಕಾದ ಧೈರ್ಯ-ಸ್ಥೈರ್ಯ ಮುಂತಾದ ಗುಣಗಳು ಆ ಬಡ ಹಾರುವನಲ್ಲೆಲ್ಲಿಂದ ಬರಬೇಕು? ಪ್ರತ್ಯಕ್ಷ ಸುಟ್ಟುಕೊಳ್ಳಲಿಕ್ಕೆ ಸಿದ್ಧನಾಗದ ಹೊರತು ತನಗೆ ಸ್ವರ್ಗವು ಕಾಣುವದಿಲ್ಲೆಂಬ ನಾಣ್ಣುಡಿಯ ಅನುಭವವು ಆಗ ನಮ್ಮ ಚಾಣಕ್ಯನಿಗೆ ಚೆನ್ನಾಗಿ ಬಂದುಬಿಟ್ಟಿತು!

ಆ ಕಾಲದಲ್ಲಿ ಪ್ರಸಂಗ ವಿಶೇಷದಿಂದ ಅವನ ಚಿತ್ತಚಂಚಲವಾಗಿ ಮನಸ್ಸಿನಲ್ಲಿ ತುಸ ಅಧೈರ್ಯವುಂಟಾದರೂ ಅವನು ಆ ತನ್ನ ಮನೋಚಾಂಚಲ್ಯಕ್ಕೂ ಹೇಡಿತನಕ್ಕೂ ಬಹಳ ಹೊತ್ತು ಆಸ್ಪದ ಕೊಡಲಿಲ್ಲ. ಪ್ರತ್ಯಕ್ಷ ರಣರಂಗದಲ್ಲಿಯ ಕಟು ಅನುಭವವು ಅವನಿಗೆ ಅದು ವರೆಗೆ ಬಾರದಿದ್ದರೂ, ಜಪ-ತಪ-ಅನುಷ್ಠಾನಗಳನ್ನು ಮಾಡುವಾಗ ಈ ತರದ ಮನೋಚಾಂಚಲ್ಯವೂ ಅಧೈರ್ಯವೂ ಆಗಾಗ್ಗೆ ಉಂಟಾದ್ದರ ಅನುಭವವು ಆತನಿಗೆ ಈ ಮೊದಲು ಎಷ್ಟೋ ಸಾರೆ ಬಂದಿತ್ತು ಆದುದರಿಂದ ಆಯಾ ಪ್ರಸಂಗಗಳಲ್ಲಿ ತನ್ನ ಇಷ್ಟ ಕಾರ್ಯಸಾಧನೆಗಾಗಿ ಮನಸ್ಸನ್ನು ಹೇಗೆ ಸ್ಥಿರಗೊಳಿಸಬೇಕೆಂಬದು ಆತನಿಗೆ ಚೆನ್ನಾಗಿ ಅವಗತವಾಗಿತ್ತು ಆದಕಾರಣ ನಮ್ಮ ಚಾಣಕ್ಯ ಮುನಿಯು ಆಹ್ನಿಕವನ್ನು ಮುಗಿಸಿಕೊಂಡು ತನ್ನ ಮನಸ್ಸಿನ ಆ ಚಂಚಲತೆ-ಅಧೀರತೆಗಳನ್ನು ಹೋಗಲಾಡಿಸುವ ಪ್ರಯತ್ನ ಮಾಡತೊಡಗಿದನು;

ಇಷ್ಟರಲ್ಲಿ ರಾತ್ರಿಯ ದ್ವಿತೀಯಪ್ರಹರವು ಮುಗಿಯ ಬರಲು, ಚಂಡ-ಕೌಶಿಕರು ಅಲ್ಲಿಗೆ ಬಂದರು. ಅವರನ್ನು ತುಸ ಹೊತ್ತುಕೂಡ್ರ ಹೇಳಿ, ನಂತರ ಚಾಣಕ್ಯನು ಅವರನ್ನುದ್ದೇಶಿಸಿ:—ಮಕ್ಕಳಿರಾ, ನನ್ನ ಮಾತನ್ನು ಲಕ್ಷ್ಯಗೊಟ್ಟು ಲಾಲಿಸಿರಿ ಪ್ರಣಿಧಿಗಳೇ, ಸಮರಾಂಗಣದಲ್ಲಿಯ ರಾಜರ ನೇತ್ರಗಳು. ನೀವು ಇದುವರೆಗೆ ಯಾವ ಯಾವ ಮಹತ್ವದ ಕೆಲಸಗಳನ್ನು ಮಾಡಿರುವಿರೋ, ಅವೆಲ್ಲವುಗಳ ಮುಕುಟಮಣಿಯಂಥ ಕಾರ್ಯವನ್ನು ನೀವಿಂದು ಮಾಡಬೇಕಾಗಿರುತ್ತದೆ ಮಹಾರಾಜ ಮಲಯಕೇತುವೂ, ಶಕಟಾರ ಮಂತ್ರಿಯೂ ನಿಮ್ಮ ಕೆಲಸಕ್ಕೆ ಬಹಳ ಸಂತೋಷಗೊಂಡಿರುತ್ತಾರೆ. ಈಗ ನಾನು ನಿಮ್ಮಿಬ್ಬರನ್ನೂ ಬೇರೆ ಬೇರೆ ಕಾರ್ಯಗಳಿಗೆ ಕಳಿಸಿಕೊಡುವವನಿದ್ದೇನೆ. ಆ ಕಾರ್ಯಸಾಧನೆಯ ಸಲುವಾಗಿ ನೀವು ನಿಮ್ಮ ಜೀವಗಳಿಗೆ ಕೂಡ ಎರವಾಗಬೇಕಾದೀತೆಂಬದನ್ನು ನಾನು ನಿಮಗೆ ಮೊದಲೇ ತಿಳಿಸಿಡುತ್ತೇನೆ. ಆದ್ದರಿಂದ ಆ ಪ್ರಕಾರದ ತನು-ಮನ ತ್ಯಾಗದ ಸಿದ್ಧತೆಯಿಂದಲೇ ನೀವೀಗ ಕಾರ್ಯತತ್ಪರರಾಗಬೇಕಾಗಿರುತ್ತದೆ.

ಚಾಣಕ್ಯನ ಈ ನುಡಿಯನ್ನು ಕೇಳಿ, ಚಂಡನು:—ವಿಪ್ರಶ್ರೇಷ್ಠರೇ, ಈ ಪರ್ವತೇಶ್ವರನ ಅನ್ನ-ವಸ್ತ್ರಗಳಿಂದಲೇ ನಮ್ಮ ದೇಹಗಳು ಪರಿಪುಷ್ಟವಾಗಿರುತ್ತವೆ. ನಮ್ಮ ಮಹಾರಾಜನು ತನ್ನ ಪ್ರಾಣದ ಆಶೆದೊರೆದು ಸಮರಕ್ಕೆ ತೆರಳಿರುವನೆಂದ ಬಳಿಕ ನಾವು ಅದಕ್ಕೆ ಅಂಜಬೇಕೇ? ಮಾನವನ ಆಯುಷ್ಯವು ತನ್ನಿಂದ ತಾನೇ ಕಡಿಮೆಯಾಗುತ್ತದೆ. ಇಂದಮೇಲೆ ನಾವು ಈ ಸುಸಂಧಿಯನ್ನು ಸಾಧಿಸಿ, ಕಾರ್ಯತತ್ಪರರಾದಾಗ ನಮ್ಮ ಆಯುಷ್ಯವು ತೀರಿದರೆ ತಪ್ಪೇನು? ಭೂದೇವನೇ, ನಮಗೆ ಏನು ಆಜ್ಞೆ ಮಾಡಬೇಕೆಂದಿರುವಿರೋ, ಅದನ್ನು ನಿಃಶಂಕಚಿತ್ತರಾಗಿ ಮಾಡಿರಿ. ನಾವು ನಿಮ್ಮ ಅಪ್ಪಣೆಯ ಪ್ರಕಾರ ನಡೆದು, ನಿಮ್ಮ ಮನಸ್ಸಿಗೆ ಸಂತೋಷವಾಗುವ ಹಾಗೆ ಆಚರಿಸುತ್ತೇವೆ.

ಚಾಣಕ್ಯ:—ಶತ್ರುಸೈನ್ಯವು ಯಾವ-ಯಾವ ದಿಕ್ಕಿನಿಂದ ಹೇಗೆ-ಹೇಗೆ ನಮ್ಮ ಮೇಲೆ ಸಾಗಿ ಬರುವದೆಂಬದನ್ನು ತಿಳಿದು, ನನಗೆ ತಿಳಿಸುವ ಸಲುವಾಗಿ ನಾನು ನಿಮ್ಮನ್ನು ಬೇರೆ ಬೇರೆ ಕಡೆಗೆ ಕಳಿಸಬೇಕೆಂದಿದ್ದೇನೆ. ಈ ಸಂಬಂಧವಾಗಿ ನಾನು ನಿಮಗೆ ಈಗ ಹ್ಯಾಗೆಹೇಳುವೆನೋ ಹಾಗೆಯೇ ವರ್ತಿಸಿರಿ. ನೀವು ನನ್ನ ಮಾತಿನಂತೆ ತಪ್ಪದೆ ನಡೆದುದಾದರೆ, ನಿಮ್ಮ ಜೀವಕ್ಕೆ ತಿಲಮಾತ್ರವೂ ಅಪಾಯವಾಗದೆ, ನಿಮ್ಮಿಂದ ನನಗೆ ಶತ್ರುಸೈನ್ಯದ ಚಲನವಲನವು ಸುಲಭವಾಗಿ ತಿಳಿಯಬಹುದು; ಹಾಗು ಅದರಿಂದ ನಿಮ್ಮ ಈ ಜನ್ಮ

ಭೂಮಿಯಾದ ಪಾರ್ವತ್ಯರಾಜ್ಯದ ರಕ್ಷಣವೂ ಆಗುವದು; ಅಲ್ಲದೆ ನಿಮ್ಮ ಅನ್ನದಾತೃವೂ ಪಾಲನಕರ್ತೃವೂ ಆಗಿರುವ ಮಲಯಕೇತು ಮತ್ತು ಆತನ ಮಿತ್ರನಾದ ಕುಮಾರ ಚಂದ್ರಗುಪ್ತ ಇವರುಗಳಿಗೆ ವಿಜಯಲಾಭವೂ ಆಗುವದು. ಶ್ರೀ ಕಾಲಭೈರವನ ಸಾಕ್ಷಿಯಾಗಿ ನೀವು ನನ್ನ ಮಾತನ್ನು ತಪ್ಪದೆ ಪಾಲಿಸುವೆವೆಂದು ಆಣೆ ಮಾಡಿರಿ; ಅಂದರೆ ನಿಮಗೆ ಹೇಳತಕ್ಕದ್ದನ್ನು ನಾನು ಈಗಲೆ ಹೇಳುತ್ತೇನೆ.

ಚಂಡ ಹಾಗು ಕೌಶಿಕರು ಚಾಣಕ್ಯನ ಪಾದ ಸ್ಪರ್ಶ ಮಾಡಿ, ಶ್ರೀ ಕಾಲಭೈರವನನ್ನು ಸ್ಮರಿಸುತ್ತ ಅವನ ಅಭಿಪ್ರಾಯದಂತೆ ಆಣೆಮಾಡಿದರು; ತದನಂತರ ಚಾಣಕ್ಯನು ಅವರ ಕಿವಿಗಳಲ್ಲಿ ಏನೇನೋ ಬಹಳ ಹೊತ್ತಿನ ವರೆಗೆ ಹೇಳಿದನು. ಅವರು ಅದನ್ನೆಲ್ಲ ಚೆನ್ನಾಗಿ ತಿಳಿದುಕೊಂಡು, ಆ ಪ್ರಕಾರ ಕೆಲಸ ಮಾಡಲಿಕ್ಕೆ ಹೊರಟು ಹೋದರು. ಹೋಗುವಾಗ ಅವರು ಚಾಣಕ್ಯ ಬ್ರಾಹ್ಮಣನ ರಣಪಾಂಡಿತ್ಯದ ವಿಷಯವಾಗಿ ಪರಮ ಸೋಜಿಗ ಬಟ್ಟು ಮನಸ್ಸಿನಲ್ಲಿ:—"ಬ್ರಾಹ್ಮಣರಲ್ಲಿ ಅದ್ಭುತವಾದ ಶಕ್ತಿಯಿರುತ್ತದೆಂದು ಅನ್ನುವ ಮಾತು ಈ ಬ್ರಾಹ್ಮಣನನ್ನು ನೋಡಿದ ಪ್ರತಿಯೊಬ್ಬರಿಗೂ ಮನದಟ್ಟಾಗಬಹುದಾಗಿದೆ" ಎಂದು ಅಂದುಕೊಂಡರು.

ಚಂಡ-ಕೌಶಿಕರನ್ನು ಕಾರ್ಯಪ್ರವೃತ್ತರನ್ನಾಗಿ ಮಾಡಿ ಕಳಿಸಿದ ಬಳಿಕ, ಚಾಣಕ್ಯನು ಪುನಃ ಶ್ರೀ ಮಹಾಕಾಲನ ಮಂದಿರಕ್ಕೆ ಹೋದನು. ಯುದ್ಧವು ಪ್ರಾರಂಭವಾದಾಗಿನಿಂದ ಮಂದಾಕಿನಿಯು ಹಗಲನ್ನೆಲ್ಲ ತನ್ನ ಸ್ವಂತ ದಂಡಿನ ಶಿಕ್ಷಣ ಕಾರ್ಯದಲ್ಲಿಯೂ, ಇಡಿ ರಾತ್ರಿಯನ್ನು ಮಹಾ ಕಾಲಭೈರವನ ಪೂಜಾ ಪುನಸ್ಕಾರಗಳಲ್ಲಿಯೂ ಕಳೆಯುತ್ತಿದ್ದಳು ಚಾಣಕ್ಯನು ಆಗ ಆ ದೇವಾಲಯಕ್ಕೆ ಮಂದಾಕಿನಿಗೆ ಭೇಟಿಯಾಗುವದಕ್ಕೆಂದೇ ಹೋಗಿದ್ದನು. ಚಾಣಕ್ಯನಂತೆ ಅಂದು ಮಂದಾಕಿನಿಗೂ ತನ್ನ ಅಣ್ಣ ಹಾಗು ಚಂದ್ರಗುಪ್ತರು ಸಮರಾಂಗಣಕ್ಕೆ ಹೋದುದರಿಂದ ವಿಷಾದವೆನಿಸಿತ್ತು. ಆದಕಾರಣ ಅಂದು ಅವಳ ಮನಸ್ಸು ದೇವರ ಪೂಜಾ-ಪುರಸ್ಕಾರಗಳಲ್ಲಿ ತಾದಾತ್ಮ್ಯ ಭಾವವನ್ನು ವಹಿಸಿರಲಿಲ್ಲ.

ಚಾಣಕ್ಯನು ದೇವಾಲಯಕ್ಕೆ ಬಂದವನೇ ಒಮ್ಮೆಲೆ ಮಂದಾಕಿನಿಗೆ ಭೇಟಿಯಾಗಲಿಲ್ಲ. ಗರ್ಭಗುಡಿಯ ಹೊರಗೆ ನಿಂತು, ಮುಚ್ಚಲ್ಪಟ್ಟ ಬಾಗಿಲುಗಳ ಕಿಂಡಿಗಳೊಳಗಿಂದ ಇಣಿಕಿ ನೋಡಿದನು. ಇನ್ನು ಅವನು ಆಕೆಯನ್ನು ಹೆಸಗೊಂಡು ಒದರಿ ಬಾಗಿಲು ತೆರೆಯಹಚ್ಚತಕ್ಕವನು; ಅಷ್ಟರಲ್ಲಿ ಆಕೆಯ ಪರಮ ವಿಶ್ವಾಸುಕ ಸೇವಕನಾದ ಭೈರವನೆಂಬ ವೃದ್ಧ ದಳಪತಿಯು ಧಾವಿ

ಸುತ್ತ ಅಲ್ಲಿಗೆ ಬಂದನು. ಕೂಡಲೆ ಚಾಣಕ್ಯನು ಮರೆಗೆ ನಿಂತು ಇವರೀರ್ವರಲ್ಲಿ ಯಾವ ಸಂಭಾಷಣ ನಡೆಯುವದೆಂಬದನ್ನು ಕೇಳತೊಡಗಿದನು.

ಭೈರವನೂ ಚಾಣಕ್ಯನಂತೆ ಆ ಗರ್ಭಗುಡಿಯ ಬಾಗಿಲದ ಕಿಂಡಿಯೊಳತಂದ ಒಳಗೆ ಇಣಿಕಿ ನೋಡಿ, ವಿಷಣ್ಣವದನದಿಂದ ಸುಮ್ಮನೆ ಅಲ್ಲಿಯೇ ಕುಳಿತನು; ಆದರೆ ಆ ಸ್ಥಿತಿಯಲ್ಲಿ ಅವನಿಂದ ಹಾಗೆ ಬಹಳ ಹೊತ್ತು ಕುಳಿತುಕೊಳ್ಳುವದಾಗಲಿಲ್ಲ ಆದರಿಂದ ಅವನು:— ತಂಗಿ ಮಂದಾಕಿನಿ, ಬೇಗನೆ ಬಾಗಿಲ ತೆರೆ, ಎಂದು ಕೂಗಿದನು.

ಮೊದಲೇ ಚಂಚಲಚಿತ್ತಳಾಗಿದ್ದ ಮಂದಾಕಿನಿಯು ಕೂಡಲೆ ಬಾಗಿಲ ತೆರೆದಳು. ಆಗ ಭೈರವನು ಅವಳನ್ನು ದ್ದೇಶಿಸಿ:— ತಂಗೀ, ಮಂದಾಕಿನಿ, ಪ್ರಸ್ತುತ ಕಾಳಗದ ಬಗ್ಗೆ ಉತ್ಸಾಹಶೂನ್ಯನಾದುದಕ್ಕಾಗಿ ಒಂದು ದಿನ ನೀನು ನನಗೆ ಸಿಟ್ಟು ಮಾಡಿದ್ದೆಯಲ್ಲವೇ? ಆದರೆ ಇಂದು ನೀನು ಸ್ವತಃ ಹೀಗೆ ವಿಷಣ್ಣವದನದಿಂದೇಕೆ? ಕುಳಿತಿರುವೆ ತಂಗೀ, ನಮ್ಮ ಪರ್ವತಪ್ರದೇಶದ ಪ್ರಜೆಗಳಿಗೆ ಆಶ್ವಾಸನರೂಪಿಣಿಯಾದ ದೇವತಾ ಮೂರ್ತಿಯೇ ನೀನಾಗಿರುತ್ತೀ; ಎಂಥ ಕಠಿಣ ಪ್ರಸಂಗದಲ್ಲಿಯೂ ನಿನ್ನಲ್ಲಿಯ ಉತ್ಸಾಹದ ಪ್ರವಾಹವು ಸಂಕುಚಿತವಾಗಲಾರದೆಂದು ನಮ್ಮೆಲ್ಲರ ಭಾವನೆಯಾಗಿರುತ್ತದೆ. ಅಂಥ ನೀನೇ ಈ ಆಯತ ಪ್ರಸಂಗದಲ್ಲಿ ನಿರುತ್ಸಾಹವನ್ನು ತಾಳಿ ಕುಳಿತರೆ, ತಾಯಿ. ನಾವೇನು ಮಾಡಬೇಕವ್ವಾ? ಪ್ರಸ್ತುತ ಧರ್ಮಯುದ್ಧದಲ್ಲಿ ಆತ್ಮರಕ್ಷಣೆಗಾಗಿ ನಾವೆಲ್ಲರೂ ಸಿದ್ಧರಾಗಿರುತ್ತೇವೆ. ಚಾಣಕ್ಯನಂಥ ಕುಟಿಲ ಶಾಸ್ತ್ರಜ್ಞನೂ, ಶಕಟಾರನಂಥ ನುರಿತ ಮಂತ್ರಿಯೂ ಈ ಪ್ರಸಂಗದಲ್ಲಿ ನಮ್ಮ ಪರಾಮರ್ಶದಾತೃಗಳಾಗಿರುತ್ತಾರೆ ಸ್ವತಃ ಮಲಯಕೇತು ಮಹಾರಾಜರೂ, ವೀರಕೇಸರಿ ಕುಮಾರ ಚಂದ್ರಗುಪ್ತನೂ ನಮ್ಮ ದಂಡಿನ ಅಧಿನಾಯಕರಾಗಿರುತ್ತಾರೆ, ಹಾಗು ಆದ್ಯಶಕ್ತಿಯ ಪ್ರತ್ಯಕ್ಷ ಮೂರ್ತಿಯಾಗಿರುವ ಮತ್ತು ವಿಜಯಲಕ್ಷ್ಮಿಯಂತಿರುವ ನೀನು ನಮ್ಮೆಲ್ಲರ ಪ್ರವರ್ತಕಳಾಗಿರುತ್ತೀ. ಅಂದಮೇಲೆ ಇಷ್ಟೊಂದು ಶಕ್ತಿಸಂಪನ್ನರಾದ ನಾವು ಈ ಲೋಕದಲ್ಲಿ ಪರರಿಗೆ ಅಂಜಿ ವಿಷಾದಪಡುವ ಕಾರಣವೇನು?

ಭೈರವನು ಈ ಪ್ರಕಾರ ನುಡಿಯುತ್ತಿರುವಷ್ಟರಲ್ಲಿ ಆ ಗುಡಿಯ ಒತ್ತಟ್ಟಿಗಿನ ಕತ್ತಲುಗವಿದ ಮೂಲೆಯೊಳಗಿಂದ— ಈ ಶಕ್ತಿರೂಪಿಣಿಯಾದ ತಾಯಿಯ ಮಕ್ಕಳಾದ ನಮಗೆ ಭೈರವಾ, ಏತರ ಭಯವೂ ಇರುವದಿಲ್ಲ, ಎಂಬ ವಾಣಿಯು ಹೊರಟಿತು. ಆ ನುಡಿಯನ್ನು ಕೇಳಿ ಮಂದಾಕಿನಿಯೂ

ಭೈರವನೂ ಭಯಭಕ್ತಿಗಳಿಂದ ನಡುಗಲಾರಂಭಿಸಿದರು. ಶ್ರೀ ಕಾಲಭೈರವನೇ ತಮಗೆ ಪ್ರತ್ಯಕ್ಷನಾಗಿ, ಹೀಗೆ ಅಶರೀರವಾಣಿಯನ್ನು ನುಡಿದನೆಂದು ಆಗ ಅವರ ತಿಳುವಳಿಕೆಯಾಯಿತು

ಅಷ್ಟರಲ್ಲಿ ಚಾಣಕ್ಯನು ಅವರೆದುರಿಗೆ ಬಂದು ನಿಂತನು. ಮಂದಾಕಿನಿಯೂ, ಭೈರವನೂ ಅವನಿಗೆ ನಮಸ್ಕರಿಸಿದರು. ಮಂದಾಕಿನಿಯ ವಿಷಣ್ಣತೆಯನ್ನು ಚಾಣಕ್ಯನು ಭೈರವನಿಗಿಂತ ಮೊದಲೇ ತಿಳಿದಿದ್ದನು. ಆದರೂ ಮಂದಾಕಿನಿಗೆ ಏನೂ ಅನ್ನದೆ, ಅವನು ಭೈರವನನ್ನು ಕುರಿತು:— ಭೈರವಾ, ನಮ್ಮ ಈ ತಾಯಿಯ ಮಕ್ಕಳೆಲ್ಲರೂ ಈಗ ಕಾಳಗಕ್ಕೆ ಸಜ್ಜಾಗಿರುವರೇನು?

ಭೈರವ:— ಮುನಿವರರೇ, ಸಿದ್ಧರಾಗಿರುತ್ತಾರೆ. ಅವರೆಲ್ಲರೂ ಈ ದೇವಾಲಯದ ಆಚೇ ಬದಿಯ ಕಿರಿಗಂಟಿಗಳಲ್ಲಿ ಅಡಗಿದ್ದು, ನಿಮ್ಮ ಅಪ್ಪಣೆಯ ಪ್ರತೀಕ್ಷೆಯನ್ನೇ ಮಾಡುತ್ತ ಕುಳಿತಿರುತ್ತಾರೆ

ಚಾಣಕ್ಯ:— ಒಳ್ಳೇದು; ಆದರೆ ಭೈರವಾ, ಆ ಸಾವಿರ ಜನರನ್ನು ಒತ್ತಟ್ಟಿಗೇ ಕಳಿಸುವದು ನನ್ನ ಅಭಿಪ್ರಾಯವಿರುವದಿಲ್ಲ ನೀನು ಅವರಲ್ಲಿ ಎರಡು ಪಂಗಡಗಳನ್ನಾಗಿ ಏರ್ಪಡಿಸು. ಒಂದು ಭಾಗವು ಈ ಪರ್ವತದ ಮೇಲ್ಬದಿಯ ಈ ಅರಣ್ಯದಲ್ಲಿಯೇ ಅವಿತುಕೊಂಡು ಕುಳಿತಿರಲಿ; ಇನ್ನೊಂದು ಭಾಗದವರು ಈ ಪರ್ವತದ ಆಚೆಯ ಬದಿಗೆ ಹೋಗಿ ಕಾರ್ಯಪ್ರವರ್ತರಾಗಲಿ. ಇಂದು ಮಧ್ಯರಾತ್ರಿಯಿಂದ ನಾಳೆ ಮಧ್ಯರಾತ್ರಿಯ ವರೆಗೂ ಅವರು ಈ ಪರ್ವತದಡಿಯಲ್ಲಿರುವ ಸಣ್ಣದೊಡ್ಡ ಕಲ್ಲುಗಳನ್ನು ಪರ್ವತದ ಶಿಖರಪ್ರದೇಶದಲ್ಲಿ ಸಂಗ್ರಹಿಸಲಿ. ಸ್ವತಃ ಧನನಂದನೇ ತನ್ನ ದಂಡಿನೊಡನೆ ಈ ಪರ್ವತದ ಈ ಭಾಗದಿಂದ ಬಂದು, ಒಂದೆರಡು ದಿನಗಳಲ್ಲಿ ನಮ್ಮ ಪಟ್ಟಣಕ್ಕೆ ಮುತ್ತಿಗೆ ಹಾಕುವವನಿದ್ದಾನೆಂದು ಕೇಳಿರುತ್ತೇನೆ. ಛದ್ಮವೇಷ ಧರಿಸಿದ ಚಂಡನು ಅವನಲ್ಲಿ ದುರಾಶೆಯನ್ನುಂಟುಮಾಡಿ ಆತನನ್ನು ಇತ್ತ ಕಡೆಗೇ ಬರಮಾಡುವನು ಅವನು ಇಲ್ಲಿಗೆ ಬಂದ ಬಳಿಕ ನಾಳೆ ಮಧ್ಯರಾತ್ರಿಯ ಸಮಯದಲ್ಲಿ ಈ ದಂಡಿನವರು ಸಂಗ್ರಹಿಸಿಟ್ಟ ಪಾಷಾಣಗಳ ಹೊಡೆತದಿಂದ ಆ ಮಾಗಧೀಯ ಸೇನೆಯನ್ನು ನಾಶಗೊಳಿಸಲುದ್ಯುಕ್ತರಾಗೋಣ. ಭೈರವಾ, ನೀನು ಕಲ್ಲು ಸಂಗ್ರಹಿಸುವ ಕೆಲಸವನ್ನು ಬಹು ತತ್ಪರತೆಯಿಂದ ಜರಗಿಸು. ನಾಳೆ ರಾತ್ರಿಯಲ್ಲಿ ಖಂಡಿತವಾಗಿಯೂ ಯುದ್ಧಕ್ಕೆ ಪ್ರಾರಂಭವಾಗುವದು. ನಾಳೆ ರಾತ್ರಿಯೇ ನಾನು ನನ್ನ ತಾಯಿಯ ಸ್ವಂತ ದಂಡಿನ ಸಹಾಯದಿಂದ ಆ ದುಷ್ಟ ಮಗಧೇಶನನ್ನು ಸೆರೆ ಹಿಡಿಯಬೇಕೆಂದಿರುತ್ತೇನೆ. ನನ್ನ ಈ ಸಂಕಲ್ಪವು ಬಹುಶಃ ಈಡೇರದಿರಲಾರದು.

ಭೈರವ:—ಅತ್ತ ಮಾಗಧೀಯರ ಇನ್ನೊಂದು ದಳಕ್ಕೆ ಹೇಗೆ ಎದುರಾಗುವ ಪ್ರಯತ್ನ ನಡೆದಿದೆಯೆಂಬದನ್ನು ಈ ದಾಸನು ತಿಳಿಯಲು ಶಕ್ಯವಾಗಿದೆಯೇ?

ಚಾಣಕ್ಯ:—ಭೈರವಾ, ಈ ಪರ್ವತರಾಜ್ಯಕ್ಕೆ ನೀನೂ ಒಬ್ಬ ಅಭಿಜ್ಞನಾದ ದಳಪತಿಯೇ ಆಗಿರುತ್ತೀ; ನಿನ್ನಂಥವನ ಬಳಿಯಲ್ಲಿ ನಾನು ಯಾವ ಆಲೋಚನೆಯನ್ನೂ ಗುಪ್ತವಾಗಿಡಲಿಚ್ಛಿಸುವದಿಲ್ಲ. ಆ ಕಡೆಗೆ ಆ ನಮ್ಮ ರಾಜ್ಯದ ಗಿರಿನದಿಯ ಆಚೆಯ ಮಗ್ಗಲಿಗೆ ಮಾಗಧೀಯ ಸೇನೆಯು ಬೀಡು ಬಿಟ್ಟು ಕುಳಿತಿದೆ. ಅವರು ನದಿಯ ದಾಟುವದಕ್ಕೆ ಪ್ರಾರಂಭಿಸಿದೊಡನೆಯೇ ಕೌಶಿಕನು ಸಂಕೇತದ ಮೂಲಕ ನಮಗಾ ವರ್ತಮಾನವನ್ನು ತಿಳಿಸುವನು. ಅವನು ಅಲ್ಲಿಯ ಬಹು ಎತ್ತರವಾದ ಒಂದು ವೃಕ್ಷದ ಮೇಲೆ ಅವಿತುಕೊಂಡು ಕುಳಿತು, ಹಗಲು ಹೊತ್ತಿನಲ್ಲಿ ಶತ್ರುಗಳು ಆ ನದಿಯನ್ನು ದಾಟಹತ್ತಿದರೆ, ತನ್ನಲ್ಲಿಯ ಕೆಂಪು ವಸ್ತ್ರವನ್ನು ಆ ಗಿಡದ ಕೊನೆಗೆ ಕಟ್ಟುವನು! ಅದು ಗಾಳಿಗೆ ಹಾರಾಡ[illegible] ಹತ್ತಿದ ಕೂಡಲೆ ನಮಗೆ ಕಾಣಿಸುವದು. ಅವರು ರಾತ್ರಿ ಆ ಹೊಳೆ ದಾ[illegible]ರಂಭಿಸಿದರೆ, ಕೌಶಿಕನು ತನ್ನ ಸಂಗಡ ಒಯ್ದಿರುವ ಒಂದು ಹು[illegible] [illegible]ಗೆ ಬೆಂಕೀ ಹಚ್ಚುವನು. ಆದರಿಂದಲೂ ನಮಗೆ ಆ ವರ್ತಮಾನವು ತಿಳಿಯಬರುವದು; ಅದು ತಿಳಿದ ಕೂಡಲೆ ನಾವು ನಮ್ಮ ಭೀಮರಾಜನ ಸಹಾಯದಿಂದ ಕಾಲಭೈರವ ಸರೋವರದ ತುಂಬಿನ ಬೆಣೆಯನ್ನು ಒಮ್ಮೆಲೆ ಮೇಲಕ್ಕೆತ್ತಿ ಬಿಡಬೇಕು; ಅಂದರೆ ಆ ಗಿರಿನದಿಗೆ ಆಕಸ್ಮಿಕವಾಗಿ ಮಹಾಪೂರವುಂಟಾಗಿ, ಆ ನದಿಯನ್ನು ಧಾಟಲನುವಾಗಿದ್ದ ಮಾಗಧೀಯ ಸೇವೆಯು ತೇಲಿ ಹೋಗಿ ನಾಶಹೊಂದುವದು; ಹಾಗು ಆಚೆ-ಈಚೆಯ ಪಕ್ಕಗಳಲ್ಲಿಯ ಅವರ ಸೈನ್ಯವೂ ಹೇಳಹೆಸರಿಲ್ಲದಂತಾಗುವದು

ಹೀಗೆ ಆಕಸ್ಮಿಕವಾಗಿ ತುಂಬಿನ ಬೆಣೆ ತೆಗೆದು ಶತ್ರುಗಳ ಸೈನ್ಯವನ್ನು ನಾಶಪಡಿಸುವ ಕುಟಿಲಸೂತ್ರವನ್ನು ನಾನು ಮಲಯಕೇತುವಿಗೆ ಈ ಮೊದಲೇ ತಿಳಿಸಿರುವೆನಷ್ಟೇ ಅಲ್ಲದೆ, ಆತನೂ ಚಂದ್ರಗುಪ್ತನೂ ತಮ್ಮ-ತಮ್ಮ ಸೈನ್ಯದೊಡನೆ ಹೊಳೆಯಾಚೆಗೆ ಬಹು ದೂರದಲ್ಲಿರುವಂತೆ ಅವರಿಗೆ ಹೇಳಿರುತ್ತೇನೆ. ಮಾಗಧೀಯರ ಆ ಸೈನ್ಯವು ಬಹುಮಟ್ಟಿಗೆ ನಾಮಶೇಷವಾಯಿತೆಂದರೆ ಮಲಯಕೇತುವು ತನ್ನ ದಂಡನ್ನು ತಕ್ಕೊಂಡು ರಾಜಧಾನಿಗೆ ಬರಬೇಕೆಂದೂ, ಚಂದ್ರಗುಪ್ತನು ಕೆಲ ದಂಡಿನೊಡನೆ ಪಾಟಲೀಪುತ್ರಕ್ಕೆ ದಾಳಿಯಿಟ್ಟು, ತನ್ನ ತಾಯಿಯನ್ನು ಕೊಲೆಗಡಕರಿಂದ ಬಿಡಿಸಿಕೊಂಡು, ಮಗಧೇಶನ ಸಿಂಹಾಸನವನ್ನುಆಕ್ರಮಿಸಬೇಕೆಂದೂ ಅವರಿಗೆ ಚೆನ್ನಾಗಿ ತಿಳಿಹೇಳಿ

ರುತ್ತೇನೆ. ಯಾಕೆ ಭೈರವಾ, ಪರ್ವತದೇಶದ ವೃದ್ಧದಳಪತಿಯೇ, ನನ್ನ ಈ ಮಾತಿನಲ್ಲಿ ನಿನಗೇನಾದರೂ ಹುರುಳು ಕಾಣುವದೇನು?

ಚಾಣಕ್ಯನು ಹೇಳಿದ ಆ ಸಿದ್ಧತೆಯನ್ನು ಕೇಳಿ, ಭೈರವನು ಒಳ್ಳೇ ಉತ್ಸಾಹಗೊಂಡನು. ವಯಸ್ಸಿನಿಂದ ಆಗ ಅವನು ಕೇವಲ ವೃದ್ಧನಾಗಿದ್ದರೂ, ಅವನಲ್ಲಿ ಉಂಟಾಗಿದ್ದ ಹುರುಪಿನಿಂದ ಆತನು ನವತರುಣರಂತೆ ಮಿಸುಗಹತ್ತಿದನು. ಆತನು ಚಾಣಕ್ಯನಿಗೆ ಪುನಃ ಭಕ್ತಿಪುರಸ್ಸರವಾಗಿ ನಮಿಸಿ, ಮಂದಾಕಿನಿಯನ್ನು ಕುರಿತು:—ತಾಯಿ, ನನಗೆ ಆಶೀರ್ವಾದವನ್ನು ಮಾಡು. ಈ ಬ್ರಾಹ್ಮಣವರರ ಆಜ್ಞೆಯ ಮೇರೆಗೆ ನಮ್ಮಿಂದ ನಾಳೆ ಸಾಯಂಕಾಲದೊಳಗಾಗಿ ಕಾರ್ಯನಿರ್ವಾಹವಾಗಿ, ನಮ್ಮ ದಂಡಿನವರಿಂದಲೇ ಆ ಮದೋನ್ಮತ್ತ ಧನನಂದನನ್ನು ಸೆರೆ ಹಿಡಿಯುವ ಹಾಗೆ ಬೇಗನೆ ಆಶೀರ್ವಾದ ಮಾಡು.

ಹೀಗೆಂದು ನುಡಿದು, ವೃದ್ಧ ಭೈರವನು ತನ್ನ ದಂಡಿನ ಜನರಿದ್ದ ಕಡೆಗೆ ತೀವ್ರಗತಿಯಿಂದ ಸಾಗಿದನು.

---

## ಚಾಣಕ್ಯನ ಬೇಹುಗ ಬೇಡರ ವೇಷದಲ್ಲಿ.

ದೇವರು ಯಾರನ್ನು ಕಾಯುವನೋ, ಅವನನ್ನು ಯಾರೂ ಹಿಂಸಿಸಲಾರರು. ಧರ್ಮಯುದ್ಧದಲ್ಲಿ ಯಾರಿಗೂ ಎಂದಿಗೂ ಪರಾಜಯವುಂಟಾಗುವದಿಲ್ಲ. ಕುರುಕ್ಷೇತ್ರದಲ್ಲಾಗಿ ಹೋದ ಪಾಂಡವ-ಕೌರವರ ಯುದ್ಧವೇ ಇದಕ್ಕೆ ಪ್ರಮಾಣವು. ಆ ಯುದ್ಧದಲ್ಲಿಯು ಕೌರವರ ಕಡೆಯ ಅಪರಿಮಿತ ಸೇನೆಯು, ನಿಧಿಯು ಮುಂತಾದವುಗಳ ಮಾನದಿಂದ ಪಾಂಡವರು ಅತಿ ಹೀನರಾಗಿ ತೋರುತ್ತಿದ್ದರೂ, ಕಟ್ಟಕಡೆಗೆ ಆ ಮಹಾ ಬಲವಾನ್ ಕೌರವರೇ ಹಾಳಾಗಿ ಹೋದರು!

ಮಗಧೇಶ್ವರನು ತನ್ನ ಅಸಂಖ್ಯ ದಂಡನ್ನು ಎರಡು ಭಾಗಗಳಾಗಿ ವಿಭಾಗಿಸಿ, ಒಂದನ್ನು ತನ್ನ ಬಲಗೈಯಂತಿರುವ ಕೇವಲ ವಿಶ್ವಾಸಿಕನಾದ ರುದ್ರಪಾಲನೆಂಬ ಸೇನಾಪತಿಯ ವಶಕ್ಕೊಳಪಡಿಸಿದ್ದನು. ಆ ರುದ್ರಪಾಲನಿಗೆ ಮಂತ್ರಾಲೋಚನೆಯನ್ನು ಹೇಳಿಕೊಡುವ ಸಲುವಾಗಿ ಸಚಿವಶ್ರೇಷ್ಠ ರಾಕ್ಷಸನನ್ನು ನಿಯಮಿಸಿದ್ದನು.

ಮದಾಂಧನಾದ ಧನನಂದನು ಯಾವ ಮಂತ್ರಿಯನ್ನಾಗಲಿ, ಸೇನಾ

ಪತಿಯನ್ನಾಗಲಿ ತನ್ನೊಡನೆ ಬೇಕಂತ ಬರಗೊಡಲಿಲ್ಲ. ಸ್ವಂತದ ಇಚ್ಛಾನುಸಾರವಾಗಿ ತನ್ನ ದಂಡನ್ನು ಸಾಗಿಸಿ, ಮಲಯಪುರಕ್ಕೆ ಮುತ್ತಿಗೆ ಹಾಕುವ ಉದ್ದೇಶದಿಂದಲೇ ಅವನು ಹಾಗೆ ಒಬ್ಬೊಂಟಿಗನಾಗಿ ಹೊರಟಿದ್ದನು.

ಮಗಧೇಶನಾದ ಧನನಂದನು ತಾನು ಸ್ವತಃ ಮಲಯಪುರಿಗೆ ಮುತ್ತಿಗೆ ಹಾಕಲಿಕ್ಕೆ ಮತ್ತೊಂದು ಅಂಥ ವಿಶೇಷ ಪ್ರಕಾರದ ಕಾರಣವೇ ಉಂಟಾಗಿತ್ತು. ಅದೇನಂದರೆ, ಆತನ ಪ್ರೀತಿಪಾತ್ರಳಾಗಿದ್ದ ತಡಿತೆಯು ಒಮ್ಮಿಂದೊಮ್ಮೆಲೆ ವಿಲಾಸಕಾನನದಿಂದ ಇಲ್ಲದಂತಾದ ತರುವಾಯ, ಅವಳು ತನ್ನ ನಾಲ್ವರು ಬೋವಿಗಳೊಡನೆ ಪರ್ವತರಾಜ್ಯದಲ್ಲಿ ಪ್ರವೇಶಿಸಿದ್ದಳು ಪರ್ವತೇಶನಾದ ಮಲಯಕೇತುವು ಅವಳನ್ನು ಅಪಹರಿಸಿರುವನೆಂಬ ಸಿಟ್ಟಿನಿಂದಲೇ ಧನನಂದನು ಮಲಯಪುರಕ್ಕೆ ಮುತ್ತಿಗೆ ಹಾಕಲು ಪ್ರಯತ್ನಪಡುತ್ತಿದ್ದನು.

ಚಾಣಕ್ಯನ ತರ್ಕದಂತೆ ಮರುದಿನವೇ ಘೋರ ಸಂಗ್ರಾಮವೆಸಗಿತು. ನದಿಯ ಆಚೆಯ ಮಗ್ಗಲಿಗೆ ಗಿಡ-ಗಂಟೆಗಳಲ್ಲಿ ಅಡಗಿಕೊಂಡು ಕುಳಿತಿದ್ದ ಪಾರ್ವತೇಯರ ಸೈನ್ಯವು, ಬೀಡುಬಿಟ್ಟು ವಿಶ್ರಾಂತಿಸುಖದಲ್ಲಿ ಮಗ್ನವಾಗಿದ್ದ ಮಾಗಧೀಯ ಸೈನ್ಯದ ಮೇಲೆ ಆಗಾಗ್ಗೆ ದಾಳಿಯಿಕ್ಕುತ್ತಿತ್ತು. ಪಾರ್ವತೇಯರು ಬಾಣ ಹೊಡೆಯುವದರಲ್ಲಿ ಭರತಖಂಡದಲ್ಲೆಲ್ಲ ಪ್ರಸಿದ್ಧರಾಗಿದ್ದರು. ಅವರು ಮರೆಗೆ ನಿಂತು ಬಿಡುತ್ತಿದ್ದ ಬಾಣಗಳ ವಿಷಾಕ್ತ ಅಂಬುಗಳು ಮಾಗಧೀಯ ಸೈನಿಕರ ಮೇಲೆ ಬಿದ್ದು, ಅವರನ್ನು ಯಮಸದನಕ್ಕಟ್ಟಹತ್ತಿದವು. ಮೊದ-ಮೊದಲು ಮಗಧದೇಶದ ಸೈನಿಕರು ಅತ್ತ ಕಡೆಗೆ ಹೆಚ್ಚಾಗಿ ಲಕ್ಷ್ಯಗೊಡಲಿಲ್ಲ. ಕಾರಣವೇನಂದರೆ, ಪುಟ್ಟ ಪಾರ್ವತ್ಯ ರಾಜ್ಯದ ದಂಡಾಳುಗಳೆಷ್ಟು ಜನರಿರಬೇಕು? "ಕಹಾ ಐರಾವತ ಔರ ಕಹಾ ಶಾಮಭಟ್ಟಕೀ ತಟಾಣಿ?" ಎಂಬಂತೆ, ಅವರು ತಮ್ಮ ಅಪರಂಪಾರ ಸೇನೆಯ ಎದುರಿಗೆ ಕೂಡ ಬರಲಾರರೆಂದು ಮಾಗಧೀಯರ ನಿಶ್ಚಿತ ಮತವಾಗಿತ್ತು. ಆದುದರಿಂದ ಬಾಣಗಳು ಬರಲಾರಂಭಿಸಿದರೂ ತಮ್ಮ ದಂಡಿನವರಾರೋ ಅತ್ತ ಹೋಗಿ ಗುರಿಹೊಡೆಯುವ ಸಾಧನೆ ಮಾಡುತ್ತಿರಬಹುದೆಂದು ಅವರು ಮೊದ-ಮೊದಲ, ತಿಳಕೊಂಡು, ಆ ಬಗ್ಗೆ ದುರ್ಲಕ್ಷ್ಯ ಮಾಡಿದ್ದರು; ಆದರೆ ಕ್ರಮೇಣ ಶತ್ರುಪಕ್ಷದವರ ಬಾಣಗಳ ಏಟುಗಳ-ಜೋರಾಗಿ ಬರಲಾರಂಭಿಸಲು, ಮಾಗಧೀಯ ಸೈನಿಕರ ಕಣ್ಣಿಗೆ ಅಂಜನ ಹಚ್ಚಿದಂತಾಯಿತು. ಆಗ ಅವರೂ ರೊಚ್ಚಿಗೆದ್ದು, ತಮ್ಮ ಮೇಲೆ ಬಾಣ ಬರುತ್ತಿರುವ ದಿಕ್ಕಿನ ಕಡೆಗೆ ಆ ಕಗ್ಗತ್ತಲೆಯಲ್ಲಿಯೇ ಬಾಣವೆಸೆಯಲಾರಂ

ಭಿಸಿದರು. ಮಾಗಧೀಯರು ಬೀಡು ಬಿಟ್ಟಲ್ಲಿ ಒಳ್ಳೇ ಉಜ್ವಲವಾದ ದೀಪ ಗಳು ಉರಿಯಹತ್ತಿದ್ದವು. ಅದರಿಂದ ಪಾರ್ವತೀಯರಿಗೆ ಇವರ ಬಾಣಗಳ ಹೊಡೆತದ ಸುಳಿವನ್ನು ನೋಡಿ, ತಪ್ಪಿಸಿಕೊಳ್ಳಲಿಕ್ಕೆ ಅನುಕೂಲವಿದ್ದಿತು; ಆದರೆ ಪಾರ್ವತೀಯರ ದಂಡಿನಲ್ಲಿ ದೀಪಗಳಿಲ್ಲದ್ದರಿಂದ, ಅದು ಇಂಥ ಕಡೆಗೆ ಇರುತ್ತದೆಂಬದರ ನಿಶ್ಚಯವೇ ಮಾಗಧೀಯರಿಗಾಗದಾಯಿತು. ಅಂದು ಬೆಳಗಾಗುವ ವರೆಗೂ ಅವರಲ್ಲಿ ಬಾಣದ ತುಮುಲವಾದ ಯುದ್ಧವಾ ಯಿತು. ಕೈಗೆ ಕೈಹತ್ತಿ ಕಾದುವ ಪ್ರಸಂಗವೇ ಬರಲಿಲ್ಲ. ಪಾರ್ವತೀ ಯರ ಹೊಡೆತದಿಂದ ಮಾಗಧೀಯರ ಬಹು ಜನ ಸೈನಿಕರು ಮಡಿದರು. ಪಾರ್ವತೀಯರಲ್ಲಿ ಬಹು ಸ್ವಲ್ಪ ಜನರು ಮಾತ್ರ ಗಾಯ ಹೊಂದಿದರು.

ಇತ್ತ ಚಾಣಕ್ಯನೂ ಶಕಟಾರನೂ ಕೂಡಿ ರಾಜಪ್ರಾಸಾದದ ಬಳಿಯ ಒಂದು ಉನ್ನತವಾದ ಪರ್ವತ ಶಿಖರದ ಮೇಲೆ ಕುಳಿತಿದ್ದರು. ಅಲ್ಲಿಂದ ಅವರಿಗೆ ಆ ತುಮುಲ ಯುದ್ಧವು ಚನ್ನಾಗಿ ಕಾಣುತ್ತಿತ್ತು. ಇಷ್ಟರಲ್ಲಿ ಒಬ್ಬ ದೂತನು ಬಂದು ಚಾಣಕ್ಯನಿಗೆ ಸಮರಾಂಗಣದ ಸಂಗತಿಯನ್ನು ತಿಳಿಸಿದನಲ್ಲದೆ, ಬೆಳಗಾದ ಮೇಲೆ ಮಾಗಧೀಯರು ನಮ್ಮ ಸೈನ್ಯವನ್ನೆಲ್ಲ ತುಂಡರಿಸಿ ಚೆಲ್ಲದೆ ಬಿಡರೆಂದು ಹೇಳಿದದು.

ಈ ಸುದ್ದಿಯನ್ನು ಕೇಳಿ ಶಕಟಾರ ಹಾಗು ಚಾಣಕ್ಯರಿಗೆ ಬಲು ಭೀತಿ ಯುಂಟಾಯಿತು; ಆದರೆ ಕ್ಷಣ ಕಾಲ ಆಲೋಚಿಸಿ, ಅವರು ಆ ದೂತನ ಮುಖಾಂತರ ಮಲಯಕೇತು-ಚಂದ್ರಗುಪ್ತರಿಗೆ ಹೇಳಿ ಕಳಿಸಿದುದೇನಂದರೆ, "ಇನ್ನು ನೀವು ನಿಮ್ಮ ಶರಸಂಧಾನವನ್ನು ನಿಲ್ಲಿಸಿರಿ; ಹಾಗು ಬೆಳಗಾಗಿ ಮೋರೆಗೆ ಮೋರೆ ಕಾಣಿಸುವಷ್ಟರಲ್ಲಿ ನೀವು ನಿಮ್ಮ ದಂಡಿನೊಡನೆ ಆ ಗಿರಿ ನದಿಯನ್ನು ಬೇರೆ ಕಡೆಯಿಂದ ದಾಟಿ, ನಮ್ಮ ಪಾರ್ವತ್ಯರಾಜ್ಯದಲ್ಲಿ ಬಂದು ಅವಿತುಕೊಂಡು ಕುಳಿತು, ನಮಗೆ ಸುದ್ದೀ ತಿಳಿಸಿರಿ ಈಗಲೆ ಮತ್ತೆ ಯುದ್ಧ ಮಾಡುವ ಸಾಹಸಕ್ಕೆ ಹೋಗಬೇಡಿರಿ."

ಚಾಣಕ್ಯನ ಆದೇಶವು ತಲುಪಿದೊಡನೆ ಮಲಯಕೇತು-ಚಂದ್ರಗು ಪ್ತರು ಅದರಂತೆಯೇ ವರ್ತಿಸಿದರು. ಮರು ದಿನ ಬೆಳಗಾದ ಬಳಿಕ ಮಾಗ ಧೀಯರು ಪೂರ್ವ ದಿನದ ರಾತ್ರಿಯಲ್ಲಿ ತಮ್ಮ ಮೇಲೆ ಯಾವ ದಿಕ್ಕಿನಿಂದ ಬಾಣಗಳು ಸುರಿದವೋ, ಆ ದಿಕ್ಕಿನ ಕಡೆಗೆ ನೋಡುತ್ತಾರೆ; ಅಲ್ಲಿ ಯಾರೂ ಇರದೆ, ಅತ್ತ ತಮ್ಮ ಮಗಧರಾಜ್ಯದ ಗಡಿಯೇ ಇರುವದೆಂಬದು ಅವರ ನಿದ ರ್ಶನಕ್ಕೆ ಬಂತು. ಅದರಿಂದ ನಿಜ ಸಂಗತಿಯು ತಿಳಿಯದೆ, ಅವರು ಸಾಶಂಕ ಮನಸ್ಕರಾದರು. ತಮ್ಮ ದಂಡಿನ ಎರಡನೇ ಭಾಗದವರೇನಾದರೂ ತಪ್ಪು

ಶಿಳುವಳಿಕೆಯಿಂದ ತಮ್ಮ ಮೇಲೆ ಏರಿ ಬಂದರೋ-ಏನೋ ಎಂಬದು ಅವ ರಿಗೆ ತಿಳಿಯದಾಯಿತು.

ಮೂರು ದಿನ ಸಾಯುಂಕಾಲದ ವರೆಗೆ ಮಾಗಧೀಯ ಸೈನಿಕರು ಆ ಗಿರಿ ನದಿಗೆ ಅಲ್ಲಲ್ಲಿ ಸೇತುವೆ ಕಟ್ಟಿದರು; ಹಾಗು ರಾತ್ರಿಯ ವೇಳೆಯಲ್ಲಿ ಆ ನದಿ ಯನ್ನು ದಾಟಲಾರಂಭಿಸಿದರು. ಸಂಜೆಯಾಗಿ ಕತ್ತಲು ಕವಿದೊಡನೆ ಪುನಃ ಮಲಯಕೇತುವಿನ ದಂಡು ಹೊಳೆ ದಾಟಿ ಆಚೆಗೆ ಹೋಗಿ, ಮಾಗಧೀಯ ಸೇನೆಯ ಹಿಂದಿನಿಂದ ಬಂದು, ತಮ್ಮ ವಿಷಾಕ್ತ ಬಾಣಗಳ ಮಳೆಗರೆಯಲು ಪ್ರಾರಂಭಿಸಿದರು ಆಗ ಮಾಗಧೀಯರು ಹಾಹಾಃ. ಎಲ್ಲರೂ ಒಮ್ಮೆಲೆ ನದಿ ದಾಟಿ ಇತ್ತ ಕಡೆಗೆ ಬರುವದಕ್ಕೆಂದು ಹೊರಟರು. ಮಾಗಧೀಯರ ಬಹ್ವಂಶ ದಂಡು ಆ ಪೂಲುಗಳ ಮೇಲಿತ್ತು. ಕೆಲವು ಸೇನೆ ಆ ಹೊಳೆ ದಾಟಿ ಇನ್ನೂ ಹೊಳೆಯ ಮಳಲಲ್ಲಿಯೇ ನಿಂತಿತ್ತು. ಉಳಿದ ಜನರು ಅತ್ತಣದ ಉಸುಗಿ ನಲ್ಲಿ ನಿಂತುಕೊಂಡು ಸೇತುವೆಯ ಮೇಲಿನವರು ಆಚೆಗೆ ದಾಟಿ ಹೋಗುವ ಮಾರ್ಗವನ್ನು ನಿರೀಕ್ಷಿಸುತಲಿದ್ದರು, ಈ ಸಮಯದಲ್ಲಿ ಹೊಳೆಯ ಪಕ್ಕದ ಲ್ಲಿದ್ದ ಒಂದು ಉನ್ನತವಾದ ವೃಕ್ಷದ ತುದಿಯಲ್ಲಿ ಧೂಮಕೇತು ನಕ್ಷತ್ರವು ಮೂಡಿದಂತೆ ಒಮ್ಮೆಲೆ ಉರಿಯೆದ್ದಿತು! ದಂಡಿನವರ ಲಕ್ಷ್ಯವು ಅತ್ತ ಆ ವೃಕ್ಷದ ಕಡೆಗೆ ವೇಧಿಸುತ್ತಿರುವಷ್ಟರೊಳಗೆ ಆ ಉರಿಯು ನಂದಿ ಹೋಯಿತು. ಈಚೆಯ ದಂಡೆಗೆ ತಲುಪಿ, ಆ ಮೇಲೆ ಅವರು ಆ ಗಿಡದ ಮೇಲೆ ಹೀಗೆ ಒಮ್ಮೆಲೆ ಎದ್ದ ಉರಿಯ ಇತ್ಯರ್ಥವನ್ನು ಮಾಡತಕ್ಕವರಿದ್ದರು.

ಇತ್ತ ಮಲಯಪುರಿಗೆ ಸಮೀಪವಾದ ಪರ್ವತದ ಶಿಖರದ ಮೇಲೆ ಹಿಂದಿನ ದಿನದ ರಾತ್ರಿಯಂತೆ ಈ ದಿನವೂ ಕುಳಿತು, ರಣರಂಗವನ್ನು ನಿರೀ ಕ್ಷಿಸುತ್ತಿದ್ದ ಚಾಣಕ್ಯನು ಆ ಮರದ ಮೇಲೆ ಕಾಣಿಸಿಕೊಂಡ ಆ ಉರಿಯನ್ನು ಕಂಡು ಸಂತೋಷಭರಿತನಾದನು. ತುಂಬಿನ ಕಾವಲುಗಾರನಾದ ಭೀಮ ರಾಜನು ಅವನ ಬಳಿಯಲ್ಲೇ ನಿಂತುಕೊಂಡು ಆತನ ಆಜ್ಞೆಯನ್ನೇ ಪ್ರತೀಕ್ಷಿ ಸುತ್ತಿದ್ದನು. ಆಗ ಚಾಣಕ್ಯನು ಉತ್ತೇಜಿತ ಕಂಠದಿಂದ:—ಭೀಮರಾಜ, ನೀನು ನಿನ್ನ ಅನ್ನದಾತೃವನ್ನು ಬದುಕಿಸಲಿಚ್ಛಿಸುತ್ತಿದ್ದರೆ, ಮತ್ತು ನಿಮ್ಮ ಅಗಣಿತ ನಿರಪರಾಧ ಪಾರ್ವತ್ಯ ಸೈನ್ಯವನ್ನು ಉಳಿಸುವುದಿದ್ದರೆ, ಈಗಲೇ ನೀನು ನಿನ್ನ ಅನುಯಾಯಿಗಳೊಡನೆ ಹೋಗಿ, ಕಾಲಭೈರವ ಸರೋವರದ ತುಂಬಿನ ಬೆಣೆಯನ್ನು ಪೂರ್ಣವಾಗಿ ತೆಗೆದು, ಗಿರಿನದಿಗೆ ಒಮ್ಮೆಲೆ ಒಳ್ಳೇ ಒತ್ತರದಿಂದ ನೀರು ಹೋಗುವಂತೆ ಮಾಡು.

ಭೀಮರಾಜನು ತನ್ನ ಅನುಚರರೊಂದಿಗೆ ಆಗಲೆ ತುಂಬಿನ ಕಡೆಗೆ

ಓಡುತ್ತ ಹೋಗಿ, ಕ್ಷಣಾರ್ಧದಲ್ಲಿ ಆ ತುಂಬಿನ ಬೆಣೆಯನ್ನು ಎತ್ತಿ ತೆಗೆದನು. ಆ ಕೂಡಲೆ ಆ ಸರೋವರದೊಳಗಿನ ಎಲ್ಲ ನೀರು ನದಿಯನ್ನು ಹೊಕ್ಕಿತು! ಅದರಿಂದ ನದಿಯ ಪ್ರವಾಹವು ಉಕ್ಕೇರಿ, ಅದು ಭೋರ್ಗರೆಯುತ್ತ ಹರಿಯಲಾರಂಭಿಸಿತು. ನದಿಯ ಆ ಘೋರೆಂಬ ಧ್ವನಿಯು ಸೇತುವೆಗಳ ಮೇಲಿದ್ದ ಹಾಗು ಆಚೆ-ಈಚೆಗಳ ದಂಡೆಯ ಮಳಲಿನಲ್ಲಿದ್ದ ಎಲ್ಲ ಸೈನಿಕರಿಗೂ ಕೇಳಿಸಿತು; ಆದರೆ ಮಳೆಗಾಲವಲ್ಲದ ಈ ದಿನಗಳಲ್ಲಿ ಒಮ್ಮೆಲೆ ನದಿಯ ಪ್ರವಾಹ ಬರುವದೆಂಬ ಮಾತಿನಲ್ಲಿ ಯಾರಿಗೂ ನಂಬಿಗೆಯುಂಟಾಗಲಿಲ್ಲ. ಪ್ರವಾಹವು ಸಮೀಪಿಸಿದ ಹಾಗೆಲ್ಲ ಆದರ ಗಂಭೀರ ಗರ್ಜನೆಯ ಮೂಲಕ ಎಡ-ಬಲದ ಗುಡ್ಡ-ಬೆಟ್ಟಗಳೊಳಗಿಂದ ಪ್ರತಿಧ್ವನಿಯುಂಟಾಗಹತ್ತಿತು. ಆದರೂ ಆ ದುರ್ದೈವಿಗಳಾದ ಮಾಗಧೀಯ ಸೈನಿಕರ ಲಕ್ಷ್ಯವು ಅತ್ತ ಕಡೆಗೆ ಹೋಗಲೇ ಇಲ್ಲ. ಕ್ಷಣಾರ್ಧದಲ್ಲಿ ಆ ಗಿರಿನದಿಗೆ ಮಹಾ ಪೂರ ಬಂದುದರಿಂದ, ಆ ದಂಡಿನ ಪಥಕದ ನಾಯಕನಾದ ರುದ್ರಪಾಲನೂ ಆತನ ಹತ್ತು ಸಾವಿರಗಟ್ಲೆ ದಂಡಾಳುಗಳೂ ಆ ಪ್ರವಾಹದಲ್ಲಿ ತೇಲಿ ಹೋದರು!

ಮುಂದೆ ಅರ್ಧ ಗಂಟೆಯೊಳಗೆ ಕೌಶಿಕನು ಚಾಣಕ್ಯನ ಬಳಿಗೆ ಬಂದು, ಮಾಗಧೀಯ ಸೇನೆಯ ಆ ಕಾರುಣ್ಯಾಜನಕ ಸ್ಥಿತಿಯನ್ನು ಆತನೆದುರಿಗೆ ಚೆನ್ನಾಗಿ ಬಣ್ಣಿಸಿ ಹೇಳಿದನು. ಅತ್ತ ಕಡೆಗೆ ಉಳಿದಿರುವ ಮಾಗಧೀಯರ ಅಲ್ಪ ಸ್ವಲ್ಪ ದಂಡು ದಾರಿ ಸಿಕ್ಕತ್ತ ಓಡುತ್ತಿರುವುದೆಂದೂ, ಅದನ್ನು ನಮ್ಮ ಮಲಯಕೇತು-ಚಂದ್ರಗುಪ್ತರ ದಂಡಾಳುಗಳು ಸಂಹರಿಸುತ್ತಿರುವರೆಂದೂ ಅವನು ತಿಳಿಸಿದನು.

   

ಇತ್ತ ಮಗಧೇಶ ಧನನಂದನು ಅದೇ ರಾತ್ರಿಯಲ್ಲಿ ಮಲಯಪುರಿಯ ಹಿಮ್ಮಗ್ಗಲಿನಿಂದ ಬಂದು ಆ ಪಟ್ಟಣವನ್ನು ಮುತ್ತುವ ಸಾಹಸಪಡತೊಡಗಿದ್ದನು. ರುದ್ರಪಾಲನ ದಂಡು ಹೀಗೆ ಆಕಸ್ಮಿಕವಾಗಿ ತೇಲಿ ಹೋಗಿ ನಾಶವಾಯಿತೆಂಬುದರ ಸುಳಿವುಕೂಡ ಆತನಿಗೆ ಹತ್ತಿರಲಿಲ್ಲ. ಯಾವ ದಿಕ್ಕಿನ ಕಡೆಯಿಂದ ಮಗಧೇಶ ಧನನಂದನು ಮಲಯಪುರವನ್ನು ಮುತ್ತುವವನಿದ್ದನೋ, ಆ ಕಡೆಗೆ ಕಟವಾಡಿಯ ಗುಡ್ಡಗಳಿದ್ದವು. ಅದರಿಂದ ಆತನಿಗೆ ಸುಗಮವಾದ ಮಾರ್ಗವು ಸಿಗದಾಯಿತು. ಆ ಪ್ರಾಂತದ ಮಾಹಿತಿಯುಳ್ಳವರು ಅವನ ದಂಡಿನಲ್ಲಿ ಯಾರೂ ಇರಲಿಲ್ಲ. ಅದ್ದರಿಂದ ಅವನು ಕಡು ಯೋಚನೆಗೊಳಗಾದನು. ಅಷ್ಟರಲ್ಲಿ ಆ ಕಾರಿರುಳಿನ ಸಮಯದಲ್ಲಿ ಆತನ ಸೈನ್ಯ ಬೀಡು ಬಿಟ್ಟ ಸ್ಥಳದ ಹತ್ತರವೇ ಒಂದು ಮರದ ಕೆಳಗೆ ಚಳಿ ಹತ್ತಿದ್ದರಿಂದ ಸೇಡು

ಹಿಡಿದು ನಡುಗುತ್ತಿರುವ ಒಬ್ಬ ಬೇಡರವನು ಮಗಧೇಶನ ದಂಡಾಳುಗಳ ದೃಷ್ಟಿಗೆ ಬಿದ್ದನು. ಕೂಡಲೆ ಅವರು ಆ ಸುದ್ದಿಯನ್ನು ಧನನಂದನಿಗೆ ತಿಳಿಸಿದರು. ಆತನು ಈ ಪ್ರಾಂತದ ಮಾಹಿತಗಾರನಿರಬಹುದೆಂದು ತಿಳಿದು ಮಗಧೇಶನು ಅವನನ್ನು ತನ್ನೆಡೆಗೆ ಕರೆಯಿಸಿಕೊಂಡನು.

ಆ ಹೀನ-ದೀನ ವೇಷದ ಬೇಡರವನು ಬಂದು ಮಗಧೇಶನಿಗೆ ಪ್ರಣಿಪಾತವಂ ಗೆಯ್ದನು. ಅವನಾರೆಂಬುದನ್ನು ತಿಳಕೊಳ್ಳುವದರ ಸಲುವಾಗಿ ಮಗಧೇಶನು ಒಳ್ಳೇ ದರ್ಪದಿಂದ:—ನೀನು ಯಾರು? ಇಂಥ ರಾತ್ರಿಯಲ್ಲಿ ಇಲ್ಲಿಗೇಕೆ ಬಂದಿರುವೆ? ಎಂದು ಪ್ರಶ್ನೆ ಮಾಡಿದನು

ಬೇಡರವನು ನಡುಗುತ್ತ:—ಮಹಾರಾಜರೇ, ತಮ್ಮಂಥ ಮಹನೀಯರೆದುರಿಗೆ ಹೇಗೆ ಮಾತಾಡಬೇಕೆಂಬುದನ್ನು ಅಶಿಕ್ಷಿತನಾದ ನಾನರಿಯೆ. ನಾನು ಬಹಳ ಬಡವನು; ಒಂದಾನೊಂದು ಕಾಲದಲ್ಲಿ ನಾನೂ ತಕ್ಕಮಟ್ಟಿಗೆ ಭಾಗ್ಯವಂತನಾಗಿದ್ದೆನು; ಆದರೆ ದುರ್ದೈವದಿಂದ ಈಗ ಈ ಅಡವಿಯೊಳಗಿನ ಕಟ್ಟಿಗೆ ಮಾರಿ ಹೊಟ್ಟೆ ಹೊರೆಯುವ ಪ್ರಸಂಗ ಬಂದಿರುತ್ತದೆ.

ಧನನಂದ:—ನಾನು ನಿನಗೆ ಬೇಕಾದಷ್ಟು ಧನ ದೌಲತ್ತುಗಳನ್ನು ಕೊಡುತ್ತೇನೆ; ಅದರ ಚಿಂತೆಯು ನಿನಗಿನ್ನು ಬೇಡ. ಹೇಗೂ ನೀನು ಇದೇ ನಾಡಿನವನಾಗಿ ಕಾಣುತ್ತೀ. ಈ ಪರ್ವತವನ್ನು ಹತ್ತಲಿಕ್ಕೆ ಅತ್ಯಂತ ಸುಲಭವಾದ ಮಾರ್ಗವು ನಿನಗೆ ಗೊತ್ತಿರಲಿಕ್ಕೇ ಬೇಕು ಅದನ್ನಷ್ಟು ನಮಗೆ ತೋರಿಸಿಕೊಡು, ಅಂದರಾಯಿತು.

ಬೇಡರವನು:—ಮಹಾರಾಜ, ಅದಾವ ದೊಡ್ಡ ಕೆಲಸ?

ಧನನಂದ:—ಹಾಗಾದರೆ, ಮಲಯಪುರಕ್ಕೆ ತೀವ್ರವಾಗಿ ಹೋಗುವಂಥ ಬಹು ಸುಲಭ ಮಾರ್ಗವನ್ನು ನಮಗೆ ಬೇಗನೆ ತೋರಿಸು, ನಡೆ

ಬೇಡರವ:—ಮಹಾರಾಜ, ಆ ದಾರಿಯು ನನಗೆ ಗೊತ್ತಿರುತ್ತದೆ; ಆದರೆ ನಾನು ನಿಮಗೆ ಅದನ್ನು ಹೇಗೆ ಹೇಳಲಿ?

ಧನನಂದ:—ನೀನು ಅದನ್ನು ನಮಗೆ ಪುಕ್ಕಟೆಯಾಗಿ ತೋರಿಸಬೇಡ; ಇಗೋ, ಈ ಐದು ಸಾವಿರ ಸ್ವರ್ಣಮುದ್ರೆಗಳು ಆ ಬಗ್ಗೆ ನಿನಗೆ ಪಾರಿತೋಷಕವೆಂದು ಕೊಡಲ್ಪಡುವವು ತೆಗೆದುಕೋ.

ಬೇಡರವ:—ಮಹಾರಾಜ, ಈ ಹಣದ ಸಲುವಾಗಿ ನಾನು ದೇಶದ್ರೋಹಿಯಾಗಲಾರೆನು ನಿರಪರಾಧಿಯಾದ ನನ್ನ ಸರ್ವಸ್ವವನ್ನೂ ಆ ನೀಚ ಮಲಯಕೇತುವು ಅಪಹರಿಸಿ, ನನ್ನ ಹೆಂಡಿರು-ಮಕ್ಕಳನ್ನು ಗೋಳಾಡಿಸುತ್ತಿದ್ದರೂ ನಾನು ದೇಶದ್ರೋಹಿಯಾಗಲಾರೆನು.

ಬೇಡರವನ ಆ ನುಡಿಯನ್ನು ಕೇಳಿ ಧನನಂದನ ಸಿಟ್ಟು ಅವರಿಸದಾಯಿತು. ಆತನು ತನ್ನ ಇಬ್ಬರು ದಂಡಾಳುಗಳನ್ನು ಕರೆದು:—ಈ ಮೂರ್ಖನನ್ನು ಈ ಗಿಡಕ್ಕೆ ತಲೆ ಕೆಳಗೆ ಮಾಡಿ ತೂಗ ಹಾಕಿರಿ; ಹಾಗು ಕಟ್ಟಿಗೆ ಸಂಗ್ರಹಿಸಿ, ಕೆಳಗೆ ಉರಿಯನ್ನು ಎಬ್ಬಿಸಿರಿ, ಎಂದು ಘೋರ ಶಿಕ್ಷೆಯನ್ನು ವಿಧಿಸಿದನು!

ಬೇಡರವನು ಮಹಾರಾಜನ ಬಾಯಿಂದ ಹೊರಟ ಆ ಆದೇಶವನ್ನು ಕೇಳಿ, ಭಯದಿಂದ ಮತ್ತಿಷ್ಟು ನಡಗುತ್ತ:—ಮಹಾರಾಜ, ನನ್ನ ತಪ್ಪಾಯಿತು. ನನಗೆ ಇಂಥ ಕಠಿಣ ಶಿಕ್ಷೆ ಕೊಡಬೇಡಿರಿ. ನಾನು ಈಗಲೇ ನಿಮಗಾ ಮಾರ್ಗವನ್ನು ತೋರಿಸುತ್ತೇನೆ, ಏಂದು ದೀನವಾಣಿಯಿಂದ ಬೇಡಿಕೊಳ್ಳಹತ್ತಿದನು.

ಕೂಡಲೆ ಧನನಂದನು ಆ ಬೇಡರವನನ್ನು ಮುಂದೆ ಮಾಡಿಕೊಂಡು ಆಗಲೆ ಆ ಗಡಚಾದ ದಾರಿಯಿಂದ ಮಲಯಪುರವನ್ನು ಆಕ್ರಮಿಸಲಿಕ್ಕೆ ಸಾಗಿದನು. ಈ ನಡು ರಾತ್ರಿಯಲ್ಲಿ ಬೇಡ, ಬೆಳಗಾದ ಮೇಲೆ ಹೋಗೋಣವೆಂದು ಆ ಬೇಡರವನು ಎಷ್ಟು ಹೇಳಿದರೂ ಮಗಧೇಶನು ಆಗ ತನ್ನ ಹಟವನ್ನು ಬಿಡದಾದನು.

ಅವರು ಕೆಲ ದಾರಿಯನ್ನು ಕ್ರಮಿಸುವಷ್ಟರಲ್ಲಿ ಗಿರಿನದಿಗೆ ಮಹಾಪೂರವು ಬಂದು ರುದ್ರಪಾಲನೂ, ಆತನ ಹತ್ತುಸಾವಿರಗಟ್ಟಲೆ ದಂಡಾಳುಗಳೂ ತೇಲಿಹೋದರೆಂಬ ಖೇದಜನಕ ವಾರ್ತೆಯನ್ನು ಒಬ್ಬ ಹೇರನು ಧನನಂದನಿಗೆ ತಿಳಿಸಿದನು. ಅದನ್ನು ಕೇಳಿದ ಮಗಧೇಶನಿಗೆ ಬಹು ವಿಷಾದವೂ, ಸಿಟ್ಟೂ ಏಕಕಾಲದಲ್ಲಿ ಉಂಟಾದವು. ತನ್ನ ದಂಡು ತೇಲಿ ಹೋದ ಬಗ್ಗೆ ವಿಷಾದವೆನಿಸಿದರೂ, ಉತ್ತರ ಕ್ಷಣದಲ್ಲಿ ಆತನು ಆ ದೋಷವನ್ನು ದೇವರ ಮೇಲೆ ಹೊರಸಿದನು. ದೇವರೇ ಅಕಾಲ ವೃಷ್ಟಿಯನ್ನು ಕೆಡವಿ, ತನ್ನ ದಂಡಿನ ನಾಶಕ್ಕೆ ಕಾರಣನಾದನೆಂದು ಆತನು ತಿಳಿದನು. ಪಾಪ! ಆ ಏಕತಂತ್ರೀಯ ಮದಾಂಧ ಹಾಗು ಹಿಂದುಮುಂದಿನ ಪೇಚುಗಳ ಜ್ಞಾನವಿಲ್ಲದ ಧನನಂದನಿಗೆ, ಕುಟಿಲಪರಾಯಣನಾದ ಚಾಣಕ್ಯನ ಕೃತಿಯ ಮರ್ಮವು ಹೇಗೆ ತಿಳಿಯಬೇಕು? ಅವನು ಆ ಸುದ್ದಿಯನ್ನು ತಂದ ಹೇರನಿಗೆ:—ದೂತಾ, ಇಂದಿನಿಂದ ಶೋಣಭದ್ರನನ್ನು ನಾನು ನನ್ನ ಸೇನಾಪತಿಯಾಗ ಮಾಡಿರುವೆನು. ನೀನು ಈಗಲೇ ಹೋಗಿ ಈ ವರ್ತಮಾನವನ್ನು ಅವನಿಗೆ ತಿಳಿಸು; ಆತನು ನಾಳೆ ಬೆಳಗಾಗುವಷ್ಟರೊಳಗೆ ಪಾಟಲಿಪುತ್ರದೊಳಗಿನ ಎಲ್ಲ ದಂಡಿನೊಡನೆ ಅತ್ತ ಕಡೆಯಿಂದ ಈ ಮಲಯಪುರಿಗೆ ಮುತ್ತಿಗೆ ಹಾಕ

ದಿದ್ದರೆ, ಮಗಧೇಶನು ಆತನನ್ನು ಗಲ್ಲಿಗೇರಿಸುವನೆಂದು ಹೇಳ ಹೋಗು, ಎಂದು ಹೇಳಿ ಕಳಿಸಿದನು.

ಬಳಿಕ ಧನನಂದನು ಆ ಬೇಡರವನ ಕೂಡ ಮತ್ತೆ ಗುಡ್ಡಗಳನ್ನು ಏರಲಾರಂಭಿಸಿದನು; ಅಂದು ಕೃಷ್ಣ ಪಕ್ಷದ ದಶಮೀ ತಿಥಿಯಾದುದರಿಂದ ಆ ರಾತ್ರಿಯ ಪೂರ್ವಾರ್ಧದಲ್ಲಿ ಹೆಚ್ಚಾಗಿ ಕತ್ತಲು ಕವಿದಿತ್ತು. ಮೊದಲೇ ಅಪರಿಚಿತ ಸ್ಥಳ. ಅದರಲ್ಲಿ ಗುಡ್ಡ-ಬೆಟ್ಟಗಳ ಪ್ರದೇಶ. ಅದರಿಂದ ಅವರಿಗೆ ಆ ಮಾರ್ಗವನ್ನು ಕ್ರಮಿಸಲಿಕ್ಕೆ ಅತ್ಯಂತ ಕಷ್ಟವಾಯಿತು. ಆದರೂ ಈಗಲೆ ಹೋಗಿ ಮಲಯಪುರಿಯನ್ನು ಆಕ್ರಮಿಸಬೇಕೆಂದು ಧನನಂದನು ಆಗ್ರಹತೊಟ್ಟಿದ್ದರಿಂದ, ಆ ಅಗಣಿತ ಸೇನೆಯು ಆ ಬೇಡರಾತನು ತೋರಿಸಿದ ದಾರಿ ಹಿಡಿದು, ಬೀಳುತ್ತ-ಏಳುತ್ತ ಸಾಗಿತು.

ಕೆಲವು ದಾರೀ ಕ್ರಮಿಸಿದ ಮೇಲೆ ಒಂದು ಘಟ್ಟದ ಮಾರ್ಗ ಹತ್ತಿತು. ಆ ಖಿಂಡಿಯೊಳಗೆ ನಾಲ್ವರ ಹೊರ್ತು ಹೆಚ್ಚು ಜನರು ಒಮ್ಮೆಲೆ ಹೋಗುವಂತಿರಲಿಲ್ಲ. ಆಗ ಆ ದಾರಿಯನ್ನು ನೋಡಿ ಧನನಂದನಿಗೆ ತುಸ ಸಂಶಯವು ಬಂತು. ಅದರಿಂದ ಆತನು ಆ ಬೇಡರವನನ್ನು ಕುರಿತು:—ಮಲಯಪುರಿಗೆ ಹೋಗುವ ಪ್ರಶಸ್ತಾದ ಮಾರ್ಗವು ಇದೇ ಏನು? ಎಂದು ಗದ್ದರಿಸಿ ಕೇಳಲು,

ಆ ಬೇಡರಾತನು ತಲೆ ತುರಿಸಿಕೊಳ್ಳುತ್ತ:—ಮಹಾರಾಜ, ಮಾತಿನ ಭರದಲ್ಲಿ ನಾನು ದಾರಿ ತಪ್ಪಿದ ಹಾಗೆ ಕಾಣುತ್ತದೆ. ತಾವೆಲ್ಲರೂ ಇಲ್ಲಿಯೆ ತಡೆಯಿರಿ ನಾನು ಈಗಲೆ ದೊಡ್ಡ ದಾರಿಯ ಸುಳುವು ನೋಡಿಕೊಂಡು ಬರುತ್ತೇನೆ, ಎಂದು ಅಂದವನೇ, ಧನನಂದನ ಸಮ್ಮತಿಯನ್ನು ಕೂಡ ನಿರೀಕ್ಷಿಸದೆ, ಸಮೀಪದ ಕಟ್ಟಡವಿಯಲ್ಲಿ ಸೇರಿ ಕಾಣದಾದನು. ಆ ಕಾರ್ಗತ್ತಲೆಯಲ್ಲಿ ಅವನು ಎತ್ತ ಹೋದನೆಂಬದು ಯಾರಿಗೂ ಕಾಣಿಸಲಿಲ್ಲ. ಮಗಧೇಶನು ಅವನನ್ನು ಹುಡುಕುವದಕ್ಕಾಗಿ ತನ್ನ ಇಬ್ಬರು ಸೇವಕರನ್ನು ಕಳಿಸಿದನು. ಅವರಿಗೆ ಆತನು ಎಲ್ಲಿಯೂ ದೊರೆಯಲಿಲ್ಲ. ಇತ್ತ ಮಾಗಧೀಯ ಸೈನಿಕರು ಆ ಖಿಂಡಿಯೊಳಗಿಂದ ಒಳಗೆ ಹೊಕ್ಕರು. ಅಲ್ಲಿಂದ ತಾವು ಎತ್ತ ಹೋಗಬೇಕೆಂಬುದು ಅವರಾರಿಗೂ ತಿಳಿಯದಾಯಿತು. ಯಾಕಂದರೆ ಆ ಖಿಂಡಿಯ ಸುತ್ತಲೂ ಆಕಾಶಕ್ಕೆ ಮುಟ್ಟುವಂತಹ ಬೆಟ್ಟದ ಸಾಲುಗಳೇ ಅಲ್ಲಿ ಕಾಣಿಸಹತ್ತಿದ್ದವು.

ಮಗಧೇಶನ ಮುಕ್ಕಾಲು ಮೂರು ಪಾಲು ದಂಡು ಆ ಖಿಂಡಿಯೊಳಗೆ ಹೊಕ್ಕಿರಬಹುದು. ಇಷ್ಟರೊಳಗೆ ಆ ಪರ್ವತದ ಶಿಖರಗಳ ಮೇಲಿನಿಂದ ಪಾಷಾಣ ವೃಷ್ಟಿಯಾಗಲಾರಂಭಿಸಿತು. ಸುತ್ತಲೆಲ್ಲ ನಿರೀಕ್ಷಿಸಿದರೂ ಮಾರ್ಗ

ತೋರವೆ. ಆ ಕಾರಿರುಳ ಸಮಯದಲ್ಲಿ ಮಾಗಧೀಯರ ಸೈನ್ಯವು ಆ ಅಖಂಡ ಶಿಲಾವೃಷ್ಟಿಯಿಂದ ನಾಶವಾಗಹತ್ತಿತು.

ತಮಗೆ ದಾರಿ ತೋರಿಸಲಿಕ್ಕೆ ಬಂದ ಬೇಡರವನು ನಿಜವಾದ ಬೇಡರವನಾಗಿರವೆ, ಮಲಯಕೇತುವಿನ ಗುಪ್ತಚಾರನೆಂಬುದು ಧನನಂದನಿಗೆ ಆಗ ಹೊಳೆದಿತು ಆತನೇ ವಿಶ್ವಾಸ ಘಾತಮಾಡಿ, ತಮ್ಮ ದಂಡನ್ನು ಕಣಿವೆಯಲ್ಲಿ ತಂದು ಯಮಸದನಕ್ಕೆ ಕಳಿಸಹೆಚ್ಚಿರುತ್ತಾನೆಂಬದು ಮನವರಿಕೆಯಾದ ಬಳಿಕ, ತನ್ನ ಮೂರ್ಖತನದ ವಿಷಯವಾಗಿಯೂ, ನಿಷ್ಕಾರಣವಾಗಿ ಇಷ್ಟು ಮಂದಿ ತನ್ನ ಪುತ್ರವತ್ ದಂಡಾಳುಗಳ ಸಂಹಾರವಾಗುವ ವಿಷಯವಾಗಿಯೂ ಧನನಂದನಿಗೆ ಬಹಳ ಪಶ್ಚಾತ್ತಾಪವಾಯಿತು; ಆದರೆ ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲೆಂದು ಆತ ಸುಮ್ಮನಿರಬೇಕಾಯಿತು.

ಅಷ್ಟರೊಳಗೆ ಮತ್ತೊಂದು ಕಡೆಯಿಂದ, ಯಾವ ಕಣಿವೆಯ ಮಾರ್ಗದಿಂದ ಧನನಂದನ ಸೈನ್ಯವು ಒಳಗೆ ಪ್ರವೇಶಿಸಿದ್ದಿತೋ ಅತ್ತ ಕಡೆಗೆ ಪಾರ್ವತೀಯರ ದಂಡು ಬಂದು, ಒಳಗಿನವರು ಹೊರಗೆ ಬಾರದಂತ ನೋಡಿಕೊಳ್ಳಹತ್ತಿತು. ಆ ದಂಡಿನ ಮುಖ್ಯಸ್ಥನು ಅಲ್ಲಿಯ ಒಂದು ಉನ್ನತವಾದ ಬಂಡೆಗಲ್ಲನ್ನು ಹತ್ತಿ ತನ್ನ ದಂಡಾಳುಗಳನ್ನು ಕುರಿತು:—ಪರ್ವತ ರಾಜ್ಯದ ಸೈನಿಕರೇ, ನೀವು ಸಂಖ್ಯೆಯಿಂದ ಅಲ್ಪರಾಗಿದ್ದರೂ, ಈ ಮಾರ್ಗದಿಂದ ಹೊಕ್ಕು ಶಿಲಾವೃಷ್ಟಿಯ ಏಟಿನಲ್ಲಿ ಪಾರಾಗಿ ಉಳಿದಿರುವ ಈ ಮಾಗಧೀಯ ದಂಡನ್ನು ತುಂಡರಿಸಿ ಚೆಲ್ಲಿರಿ; ಹಾಗು ಮದೋನ್ಮತ್ತನೂ, ಪರಮ ನೀಚನೂ ಆಗಿರುವ ಮಗಧೇಶ ಧನನಂದನನ್ನು ಸೆರೆ ಹಿಡಿಯಿರಿ, ಎಂದು ತನ್ನ ಭೀಮಗರ್ಜನೆಯಿಂದ ಹೇಳಿದನು. ಹೀಗೆ ನುಡಿದವನು ಬೇರೆ ಯಾವನೂ ಇರದೆ, ನಮ್ಮ ಮಂದಾಕಿನಿಯ ದಳಪತಿಯಾದ ವೃದ್ಧ ಭೈರವನೇ ಆಗಿದ್ದನು.

ಭೈರವನ ಆ ಆದೇಶವನ್ನು ಕೇಳಿ, ಧನನಂದನು ನಮ್ರ ವಾಣಿಯಿಂದ ಆತನಿಗೆ:—ಪಾರ್ವತ್ಯ ಸೇನಾಪತಿಯೇ, ಇನ್ನು ನೀನು ನನ್ನ ದಂಡನ್ನು ಸಂಹರಿಸಿದರೆ, ನಿನಗೆ ನಿಮ್ಮ ಕಾಲಭೈರವನ ಆಣೆಯಿರುತ್ತಗೆ. ನನ್ನ ದಡ್ಡತನದ ಬಗ್ಗೆ ನನಗೆ ತುಂಬಾ ಪಶ್ಚಾತ್ತಾಪವಾಗಿದೆ ನಾನು ಶರಣಾಗತನಾದರೆ ಯುದ್ಧವನ್ನು ನಿಲ್ಲಿಸುತ್ತೇನೆಂದು ನೀನು ವಚನ ಕೊಡುತ್ತಿದ್ದರೆ ನಾನು ಈಗಲೆ ನನ್ನ ಖಡ್ಗವನ್ನು ನೆಲಕ್ಕಿಟ್ಟು ನಿಮಗೆ ಶರಣು ಬರುತ್ತೇನೆ! ನನ್ನನ್ನು ಬೇಕಾದಲ್ಲಿಗೆ ಸೆರೆ ಹಿಡಿದುಕೊಂಡು ಹೋಗು; ಆದರೆ ನಿರಪರಾಧಿಗಳಾದ ನನ್ನ ಈ ದಂಡಾಳುಗಳನ್ನು ಸಂಹರಿಸ ಬೇಡ, ಎಂದು ಅತ್ಯಂತ ಅಂಗಲಾಚಿ ಬೇಡಿಕೊಳ್ಳಹತ್ತಿದನು.

ಅದನ್ನು ಕೇಳಿ ಭೈರವನು:—ಮಹಾರಾಜ, ಮಗಧೇಶನಾದ ಧನನಂದರೇ, ಯುದ್ಧ ಮಾಡಿ ಪ್ರಾಣಹಿಂಸೆ ಮಾಡುವದು ನಮಗಾದರೂ ಎಲ್ಲಿ ಬೇಕಾಗಿರುತ್ತದೆ. ನೀವು ನುಡಿದಂತೆ ನಡೆದರೆ, ನಾವೂ ನಡೆಯುವೆವೆನ್ನಲು,

ಹಿಂದು-ಮುಂದಿನ ಪೇಚುಗಳನ್ನು ತಿಳಿಯದ ಆ ಮೂರ್ಖ ಧನನಂದನು ಆಗ ತನ್ನ ಅಸ್ತ್ರವನ್ನು ಕೆಳಗಿಟ್ಟು, ತನ್ನ ದಂಡಾಳುಗಳಿಂದಲೂ ಕೆಳಗಿಡಿಸಿದನು. ಭೈರವನು ಧನನಂದನನ್ನು ಕೂಡಲೆ ಸೆರೆ ಹಿಡಿದು ಮಲಯಪುರಿಗೆ ಕಳಿಸಿದನು; ಅದರಂತೆ ಅವನ ದಂಡಾಳುಗಳೂ ಬಂಧಿಸಲ್ಪಟ್ಟರು!!

ವಾಚಕರೇ! ಧನನಂದನ ಶಿಬಿರದ ಬಳಿಯಲ್ಲಿ ಬೇಡರವನ ವೇಷದಿಂದ ನಡುಗುತ್ತಿದ್ದವನು ಯಾರೆಂಬದು ನಿಮಗೆ ತಿಳಿದಿರಬಹುದಲ್ಲವೇ? ನಮ್ಮ ಚಾಣಕ್ಯನ ಗುಪ್ತಹೇರನಾದ ಚಂಡನೇ ಅವನೆಂಬದನ್ನು ಅರಿಯದ ವಾಚಕರಿಗಾಗಿ ತಿಳಿಸುವೆವು.

---

## ಚಾಣಕ್ಯಾ, ನಿನ್ನಂಥ ಶಿಷ್ಯಕೋಪಿ ಲೌಕಿಕಕ್ಕನರ್ಹ.

ಮಂದಾಕಿನಿಯ ಆಜ್ಞೆಯ ಮೇರೆಗೆ ಭೈರವನು ಧನನಂದನನ್ನು ಒಂದು ವಿಶಾಲವಾದ ದಿವಾಣಖಾನೆಯಲ್ಲಿ ನಜರಕೈದಿಯನ್ನಾಗಿ ಇರಿಸಿದನು ಮಗಧೇಶನು ಭೈರವನಿಂದ ಮಲಯಪುರಿಗೆ ತರಲ್ಪಟ್ಟಾಗ ಆ ರಾತ್ರಿಯ ತೃತೀಯ ಯಾಮವು ಇನ್ನೂ ಮುಗಿದಿರಲಿಲ್ಲ ಮಗದೇಶನಿಗೆ ಬಹು ಆಯಾಸವಾಗಿರುವದೆಂತಲೂ, ಆತನ ಹಸಿವೆ-ನೀರಡಿಕೆಗಳಿಗೆಂತಲೂ ಅಲ್ಲಿ ಉತ್ತಮವಾದ ಖಾದ್ಯಪೇಯಪದಾರ್ಥಗಳೂ,ಶಯ್ಯಾಮಂಚಕವೂ ಇರಿಸಲ್ಪಟ್ಟದ್ದವು; ಆದರೆ ಶತ್ರುಗಳ ಸೆರೆಯಲ್ಲಿ ಸಿಕ್ಕು ಬಿದ್ದ ಧನನಂದನಿಗೆ, ಅವಾವವೂ ಬೇಡಾದವು. ಆತನು ಅಲ್ಲಿಯೇ ಒತ್ತಟ್ಟಿಗೆ ಸುಮ್ಮನೆ ಕುಳಿತು, ತನ್ನ ದೈವದುರ್ವಿಪಾಕದ ಬಗ್ಗೆ ಆಲೋಚಿಸಹತ್ತಿದನು. ಅದೆಂತೆನೆ:—

"ನಾನು ಯಾರು? ಎಲ್ಲಿರುವೆನು? ನನ್ನ ದರ್ಪವೆಲ್ಲಿ ಅಡಗಿತು? ನನ್ನ ಅಭಿಮಾನವೆತ್ತ ಹೋಯಿತು? ದೇವರೇ ನನ್ನ ಮೇಲೆ ಮುನಿದುದರಿಂದ ನನಗೀ ಅವಸ್ಥೆಯು ಪ್ರಾಪ್ತವಾಗಿರಬೇಕಲ್ಲದೆ ಮತ್ತೇನು? ಇನ್ನು ನಾನು ನನ್ನ ಈ ಕಲಂಕಿತ ಜೀವವನ್ನು ತಕ್ಕೊಂಡು ಮಾಡುವದೇನು? ಶತ್ರುಗಳು ನನ್ನನ್ನು ಇಲ್ಲಿಯೇ ಕೊಲ್ಲುವರು. ಕುಟಿಲಪಟುವಾದ

ಚಾಣಕ್ಯನು ಇಲ್ಲಿಯೆ ಇರುತ್ತಾನೆಂಬದನ್ನು ನಾನು ಕೇಳಿದ್ದೇನೆ. ಆ ಬ್ರಾಹ್ಮಣನಿಗೆ ನಾನೇಕೆ ಅಪಮಾನ ಮಾಡಿರಬಹುದು? ಆ ನನ್ನ ನೀಚ ಶಾಲಕನಾದ ಕಪಟಿಕನ ಮಾತಿಗೆ ಕಿವಿ ಜೋತು ನಾನು ಆ ಹೇಯ ಕೆಲಸವನ್ನು ಮಾಡಿದೆನಲ್ಲವೇ? ಥೂ! ನನ್ನ ಬಾಳಿಗೆ ಬೆಂಕೀ ಬಡೆಯಲಿ!! ಪಾಪ, ಆ ಮುನಿವರನನ್ನು ನಿಷ್ಕಾರಣವಾಗಿ ಅಪಮಾನಗೊಳಿಸಿದ್ದರ ಪರಿಣಾಮವನ್ನೇ ನಾನೀಗ ಭೋಗಿಸುತ್ತಿರುವೆನಲ್ಲದೆ ಮತ್ತೇನು? ಕುಬೇರನಂಥ ಭಾಂಡಾರ, ಲಕ್ಷಗಟ್ಟಲೆ ದಂಡು, ಏಕ ಛತ್ರದ ಸಾಮ್ರಾಜ್ಯ ಇವೆಲ್ಲವುಗಳಿದ್ದೂ ಈ ಪ್ರಸಂಗದಲ್ಲಿ ನಾನು ಈ ಕಲಂಕವನ್ನು ಹೊಂದಬೇಕಾಯಿತಲ್ಲವೇ? ಇವರು ನನ್ನನ್ನು ಇಲ್ಲಿ ಕೊಂದುಬಿಟ್ಟರೆ ನನ್ನ ಈ ವಿಶಾಲ ರಾಜ್ಯಕ್ಕೆ ಮುಂದೆ ಅಧಿಪತಿಗಳಾರು? ಯಾರಿರಬೇಕು? ನಾನೇ ನನ್ನ ತಮ್ಮನಾದ ಚಂದ್ರಗುಪ್ತನನ್ನು-ಆತನು ನನಗೆ ಯಾವ ಕೇಡನ್ನೂ ಬಗೆಯದಿದ್ದರೂ ಕೂಡ-ನನ್ನ ದೇಶದಿಂದ ಹೊರದೂಡಿಸಿ ಬಿಟ್ಟಿದ್ದರಿಂದ, ನನ್ನ ಆ ಮಗಧ ಸಾಮ್ರಾಜ್ಯವು ಇನ್ನು ಈ ಮಲಯಕೇತುವಿನ ಆಧಿಪತ್ಯಕ್ಕೇ ಒಳಗಾಗುವದು. ಹಾಯ್! ಹಾಯ್! ನನ್ನಂತಹ ಕುಲ ನಾಶಕನು ಜನ್ಮಿಸಿ, ಬಹು ಪ್ರಖ್ಯಾತವಾದ ನಂದ ವಂಶವನ್ನು ಛೇದಗೊಳಿಸಿಬಿಟ್ಟೆನಲ್ಲವೆ?''

ಈ ಪ್ರಕಾರದ ಎಷ್ಟೋ ತನ್ನ ಕೀಳು ಕೃತಿಗಳನ್ನು ನೆನೆ ನೆನೆದು ಧನನಂದನು ಸಂತಾಪ ಪಡಹತ್ತಿದನು. ಆದರಿಂದ ಎಷ್ಟೋ ಹೊತ್ತಿನ ವರೆಗೆ ಆತನಿಗೆ ನಿದ್ರೆಯೇ ಹತ್ತಲಿಲ್ಲ ಕಡೆಗೆ ಸೃಷ್ಟಿ ನಿಯಮದ ಪ್ರಕಾರ, ಬಹಳ ದಣಿದಿದ್ದ ಆವನಿಗೆ ಕುಳಿತಲ್ಲಿಯೇ ಜಂಪು ಹತ್ತಿತು.

ಂ ಂ ಂ ಂ

ಆದೇ ಕಾಲಕ್ಕೆ ಮಲಯಪುರಿಯ ಮಲಯಕೇತುವಿನ ದಿವಾಣಖಾನೆಯಲ್ಲಿ ನಾಲ್ವರು ಗೃಹಸ್ಥರು ಆಲೋಚನಾ ತತ್ಪರರಾಗಿದ್ದರು. ಚಾಣಕ್ಯ, ಶಕಟಾರ, ಚಂದ್ರಗುಪ್ತ ಹಾಗು ಮಲಯಕೇತು ಇವರೇ ಅವರು. ಮಲಯಕೇತುವು ಗಿರಿನದಿಯ ಆಚೆಯಿಂದ ಶತ್ರುಪಕ್ಷದವರ ಮೇಲೆ ಬಾಣ ಎಸೆಯುವದರಲ್ಲಿ ಮಗ್ನನಾಗಿದ್ದನು. ವೈರಿ ಪಕ್ಷದವರೂ ಇವರ ಮೇಲೆ ಬಾಣ ಬಿಡುತ್ತಿದ್ದರು; ಆದರೆ-ತುಸ ಹೊತ್ತಿನಲ್ಲಿಯೇ ಅರಿ ವರ್ಗದವರ ಗದ್ದಲವು ಕಡಿಮೆಯಾಗಿ ಹೋಯಿತು. ಉಳಿದ ಅಲ್ಪ ಸ್ವಲ್ಪ ದಂಡಾಳುಗಳು ಅತ್ತಿತ್ತ ದಾರಿ ಸಿಕ್ಕತ್ತ ಕಾಲಿಗೆ ಬುದ್ಧೀ ಹೇಳಹತ್ತಿದರು. ಇದನ್ನು ಕಂಡು ಮಲಯಕೇತುವು ತನ್ನ ಒಬ್ಬ ದೂತನನ್ನು ಮಗಧವ ದಂಡಿನ ಠಾಣ್ಯದ ಕಡೆಗೆ ಕಳಿಸಿ ಸುದ್ದಿಯೇನೆಂದು ತಿಳಿದು ಬರಲು ಹೇಳಿದನು. ಗಿರಿನದಿಯ ಪ್ರವಾಹದಲ್ಲಿ

ಶತ್ರುಗಳ ಸೈನ್ಯವು ತೇಲಿ ಹೋಯಿತೆಂದು ಆತನು ಬಂದು ತಿಳಿಸಲು, ಇದು ಚಾಣಕ್ಯನ ಕೌಟಿಲ್ಯವೆಂದು ಆತನು ನಿರ್ಧರಿಸಿದನು. ಬಳಿಕ ಆತನು ತನ್ನ ದಂಡನ್ನು ಪಾಟಲಿಪುತ್ರದ ಕಡೆಗೆ ಕಳಿಸಿ. ತಾನು ಚಂದ್ರಗುಪ್ತನೊಡನೆ ತನ್ನ ಪಟ್ಟಣಕ್ಕೆ ಬಂದನು ಅರಮನೆಯ ದಾರಿಯಲ್ಲೇ ಮಂದಾಕಿನಿಯ ದಳ ಪತಿಯಾದ ಭೈರವನು ಮಗಧೇಶನನ್ನು ಸೆರೆ ಹಿಡಿತಂದುದನ್ನು ಅವರು ನೋಡಿದರು ಬಳಿಕ ಅವರು ತಮ್ಮ ದಿವಾಣಖಾನೆಗೆ ಬಂದರು. ಅಷ್ಟ ರೊಳಗೆ ಚಾಣಕ್ಯ-ಶಕಟಾರರೂ ಅಲ್ಲಿಗೆ ಬಂದರು. ಆಗ ಮಲಯಕೇತುವು ಚಾಣಕ್ಯನನ್ನುದ್ದೇಶಿಸಿ:— ವಿಪ್ರಶ್ರೇಷ್ಠರೇ, ಇಂದು ಮುಖ್ಯವಾಗಿ ತಮ್ಮ ಕೌಶ ಲ್ಯದಿಂದಲೇ ಈ ಎಲ್ಲ ಅಘಟಿತ ಘಟನೆಗಳಾಗಿರುತ್ತವೆ ಶ್ರೀಕಾಲಭೈರವನು ತಮ್ಮನ್ನು ನಮ್ಮಲ್ಲಿಗೆ ಕಳಿಸಿದ್ದರಿಂದಲೇ ಇಂದು ನಮಗೆ ಹೀಗೆ ಅನಾಯಾಸ ವಾಗಿ ವಿಜಯವು ಲಭಿಸಿರುತ್ತಿಗೆ. ಎಂದೆಂದು ಚಾಣಕ್ಯನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದನು.

ಚಾಣಕ್ಯ:— ತಮ್ಮಾ, ಮಲಯಕೇತೂ. ನೀನು ಧರ್ಮರಾಜನಂತಿ ರುತ್ತೀ. ಆದುದರಿಂದಲೇ ನಿನ್ನ ಸಂರಕ್ಷಣಕ್ಕೆಂದು ಭಗವಂತನು ಅಪ್ರತ್ಯಕ್ಷ ವಾಗಿ ನಿನಗೆ ಸಹಾಯಮಾಡಿ ವಿಜಯವನ್ನು ದೊರೆಕಿಸಿ ಕೊಟ್ಟಿರುತ್ತಾನೆ. ಇನು ಮೇಲೆ ನೀನು ನನ್ನದೊಂದು ಮಾತು ನಡೆಯಿಸಬೇಕಾಗುವದು. ಅದು ನಿನ್ನಿಂದ ಆದೀತೇ?

ಆಗ ಮಲಯಕೇತು ಅತಿ ನಮ್ರನಾಗಿ: — ಮುನಿವರರೇ, ಅದೇನು?

ಚಾಣಕ್ಯ:— ಸೆರೆಯಲ್ಲಿದ್ದ ಈ ಮಗಧೇಶನನ್ನು ನೀನು ಏನು ಮಾಡ ಬೇಕೆಂದಿರುತ್ತೀ?

ಮಲಯಕೇತು:— ಸಾಯುವ ವರೆಗೂ ಅವನನ್ನು ಸೆರೆಯಲ್ಲೇ ಇಡ ಬೇಕೆಂದಿದ್ದೇನೆ.

ಚಾಣಕ್ಯ:— ಹಾಗೆಂದಿಗೂ ಮಾಡಬೇಡ. ಈಗಾದ ಅಪಮಾನ ದಿಂದ ಆತನು ಹೆಚ್ಚು ದಿವಸ ಬದುಕಲಾರನು. ಸೆರೆಯಲ್ಲಿಟ್ಟುಕೊಳ್ಳುವದ ಕ್ಕಿಂತ, ಆತನನ್ನು ಇಂದೇ- ಈಗಲೇ-ಬಂಧಮುಕ್ತ ಮಾಡಿ ಬಿಡು. ಆತನ ಆಯುಷ್ಯವೇ ತೀರಿದೆ. ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ನೀನು ಆವನನ್ನು ಈಗಲೇ ಬಂಧಮುಕ್ತ ಮಾಡು. ಅವನಿಂದ ಇನ್ನು ನಿನಗೆ ಯಾವ ಕೇಡೂ ಉಂಟಾಗಲಾರದೆಂಬದನ್ನು ಖಂಡಿತವೆಂದು ತಿಳಿ ಅವನನ್ನು ಈಗ ಸೆರೆ ಯಲ್ಲಿರಿಸುವದಕ್ಕಿಂತ ಬಂಧಮುಕ್ತಗೊಳಿಸುವದೇ ಎಲ್ಲ ಬಗೆಯಿಂದಲೂ ಯೋಗ್ಯವಾಗಿರುತ್ತದೆ. ಸೆರೆ ಸಿಕ್ಕವರನ್ನು ಗೋಳಾಡಿಸುವದು ನನ್ನ ಕೌಟಿಲ್ಯ

ಶಾಸ್ತ್ರಕ್ಕೆ ತೀರ ವಿರುದ್ಧವಾದ ಸಂಗತಿ. ಆದುದರಿಂದಲೇ ನಾನು ಆತನನ್ನು ಅತ್ಯಂತ ಬುದ್ಧಿಶಾಲಿನಿಯಾದ ತಡಿತೆಯ ಮುಖಾಂತರ ಬಂಧ ಮುಕ್ತ ಗೊಳಿಸುತ್ತೇನೆ. ಮಹಾರಾಜ, ನೀವು ಕಾಲಭೈರವನ ದರ್ಶನ ತೆಕ್ಕೊಂಡು ಬರ್‍ರಿ.

ಹಾಗೆಯೆ ಆಗಲೆಂದು ಹೇಳಿ ಮಲಯಕೇತುವು ಚಂದ್ರಗುಪ್ತ-ಶಕಟಾರರೊಡನೆ ಶ್ರೀ ಕಾಲಭೈರವನ ಮಂದಿರಕ್ಕೆ ನಡೆದನು.

● ● ●

ಚಾಣಕ್ಯನು ತಡಿತೆಗೆ ಏನೇನೋ ಹೇಳಿ ಕಳಿಸಿ, ಅವಳಿಂದ ಮಗಧೇಶ ಧನನಂದನನ್ನು ಬಂಧಮುಕ್ತಗೊಳಿಸಿದನು; ಮತ್ತು ಆಕೆಯ ಕೈಯಿಂದಲೇ ಈ ಮೊದಲು ಕಳವು ಮಾಡಿಸಿದ್ದ ಆ ಮಂತ್ರಪೂತ ಕಂಕಣವನ್ನು ಮುರಲಾ ರಾಣಿಯ ಮಂಚದ ಕೆಳಗಿನ ಒಂದು ಮೂಲೆಯಲ್ಲಿ ಯಾರಿಗೂ ಗೊತ್ತಾಗದ ಹಾಗೆ ಇಡಿಸಿದನು.

ಯಾವುದೊಂದು ಮಂತ್ರಪೂತ ವಸ್ತುವು ತಕ್ಕ ಸ್ಥಳದಲ್ಲಿದ್ದರೇ ಅದರಲ್ಲಿ ಆ ಮಂತ್ರದ ಮಹತ್ವ ಉಳಿಯುವದು. ಅದು ಆ ಸ್ಥಾನದಿಂದ ಚ್ಯುತಿ ಯಾಯಿತೆಂದರೆ,ಅದರ ಮೂಲ ಕರಾಮತಿ–ಮಹತ್ವ–ಲೋಪವಾಗುವದಲ್ಲದೆ ಅಂಥ ನಿರ್ಮಾಲ್ಯವತ್ ವಸ್ತುವನ್ನು ಮತ್ತೆ ಧರಿಸುವದರಿಂದ, ಧರಿಸಿದವರಿಗೆ ಅರಿಷ್ಟ ಬಡೆಕೊಳ್ಳುವದು ಮಾತ್ರ ಖಂಡಿತವು. ಒಂದು ದಿನ ಮುರಲಾ ರಾಣಿಗೆ ಕಳೆದು ಹೋಗಿದ್ದ ತನ್ನ ಆ ಕಂಕಣವು ಸಿಕ್ಕಿದ್ದರಿಂದ ಬಹು ಸಂತೋಷವಾಯಿತು. ಅದನ್ನು ಅವಳು ಗೌಪ್ಯವಾಗಿ ಪುನಃ ತನ್ನ ಎಡಗೈಯಲ್ಲಿ ಧರಿಸಿದಳು; ಅದರೆ ಮೇಲೆ ವಿವರಿಸಿದಂತೆ ಆಕೆಗೂ ಧನನಂದನಿಗೂ ಅದರಿಂದ ಅರಿಷ್ಟ ಬಡಿದು, ಅವರಿಬ್ಬರೂ ಮುಂದೆ ತುಸ ದಿನಗಳಲ್ಲೇ ಇಹಲೋಕವನ್ನು ತ್ಯಜಿಸಿದರು!

○ ○ ○

ಶ್ರೀ ಸ್ವಾಮಿ ಯೋಗಾನಂದರು ತೀರ್ಥ ಯಾತ್ರೆಗಳನ್ನು ಮುಗಿಸಿಕೊಂಡು ಇಂದು ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ಚಾಣಕ್ಯನು ಅವರಿಗೆ ಭೆಟ್ಟಿಯಯಗಿ, ಅವರಿಲ್ಲದಾಗ ನಡೆದ ಸಕಲ ಸಂಗತಿಯನ್ನೂ ಹೇಳಿದನು. ಧನನಂದನು ಆ ರೀತಿ ಕೊರಗಿ ಕೊರಗಿ ಸತ್ತದ್ದಕ್ಕೆ ಅವರು ಹೆಚ್ಚಾಗಿ ಮಿಡುಕಿದರು. ಒಂದು ಸುಮುಹೂರ್ತದಲ್ಲಿ ಚಾಣಕ್ಯನು ಚಂದ್ರಗುಪ್ತನನ್ನು ಮಗಧ ದೇಶದ ಸಾರ್ವಭೌಮ ಪಟ್ಟಕ್ಕೆ ಕೂಡ್ರಿಸಿದನು. ಚಾಣಕ್ಯನ

ಅತ್ಯಾಗ್ರಹದ ಮೂಲಕ ಮೊದಲಿನ ಸಮಸ್ತ ವಿಶ್ವಾಸ್ಯತೆಯನ್ನೂ ತೋರಿದು, ರಾಕ್ಷಸನು ಚಂದ್ರಗುಪ್ತನ ಮಂತ್ರಿ ಪದವನ್ನು ವಹಿಸಿದನು.

ತನ್ನ ಉಪವರ ಭಗಿನಿಯಾದ ಮಂದಾಕಿನಿಯನ್ನು ಮಲಯಕೇತುವು ಚಂದ್ರಗುಪ್ತನಿಗಿತ್ತು ಲಗ್ನ ಮಾಡಿದನು. ಇದುವರೆಗೂ ನಲಾಂದಾ ಕಾರಾಗಾರದಲ್ಲಿ ಕೊಳೆಯುತಲಿದ್ದ ಮುರಾ ರಾಣಿಯು ಸಾರ್ವಭೌಮನ ತಾಯಿಯಾಗಿ ಸಮಸ್ತ ಸೌಖ್ಯಗಳನ್ನೂ ಅನುಭವಿಸಿದಳು.

\+ \+ × \+

"ಚಾಣಕ್ಯಾ, ನಿನ್ನಂಥ ಶೀಘ್ರಕೋಪಿ ಈ ಲೌಕಿಕ ವ್ಯವಹಾರದಲ್ಲಿರಲಿಕ್ಕೆ ತಕ್ಕವನಲ್ಲ"ೆಂದು ಹೇಳಿ, ಸ್ವಾಮಿ ಯೋಗಾನಂದರು ಚಾಣಕ್ಯನನ್ನು ತಪಾಚರಣೆಗಾಗಿ ಬದರಿಕಾಶ್ರಮಕ್ಕೆ ಕಳಿಸಿಕೊಟ್ಟರು.

ಔ ಔ ಔ ಔ ಔ

ಶಕಟಾರನು ಲಲಿತೆಯೊಡನೆ ಸುಖವಾಗಿದ್ದನು. ಆತನು ಆ ಗುಹೆಯೊಳಗಿನ ಭಾಂಡಾರವನ್ನೆಲ್ಲ ಚಂದ್ರಗುಪ್ತನಿಗೇ ಒಪ್ಪಿಸಿದನು. ತಡಿತೆಯು ತನ್ನ ಕುಸುಮಪುರದ ದೇವಾಲಯದಲ್ಲಿದ್ದುಕೊಂಡು, ತನ್ನ ಹೃದಯೇಶ್ವರನಾದ ಶಕಟಾರ ದೇವನನ್ನು ಭಜಿಸಿ, ಮುಕ್ತಿಸಾಧನ ತತ್ಪರಳಾದಳು. ಶಕಟಾರನು ಆಕೆಯ ಅನುಮತಿಯಿಂದ ಅವಳ ಸಕಲ ಸಂಪತ್ತನ್ನೂ ಮಲಯಕೇತುವಿಗೆ ಅರ್ಪಿಸಿದನು.

\+ \+ \+

ಮಲಯಕೇತುವೂ, ಚಂದ್ರಗುಪ್ತನೂ ಒಳ್ಳೇ ಪ್ರೇಮಭಾವದಿಂದ ನಡೆಕೊಳ್ಳುತ್ತಿದ್ದರು. ಅದರಿಂದ ಪಾರ್ವತ್ಯ ಮತ್ತು ಮಗಧ ದೇಶಗಳ ಪ್ರಜೆಗಳಲ್ಲಿ ದೃಢತರವಾದ ಮೈತ್ರಿಯು ನೆಲಿಸಿತು.

.... .... .... ....

ಚಂದ್ರಗುಪ್ತನು ಪಾಟಲಿಪುತ್ರದಲ್ಲಿ ಸರಾಸರಿ ೨೫೦೦ ವರ್ಷಗಳ ಹಿಂದೆ ಏಕ ಛತ್ರಪತಿಯಾಗಿ ರಾಜ್ಯವಾಳಿದನು. ಆತನ ವಂಶದಲ್ಲಿಯೇ ಅಶೋಕನಂಥ ಪ್ರಖ್ಯಾತ ಸಮ್ರಾಟರು ಆಗಿ ಹೋದರು. ಚಂದ್ರಗುಪ್ತನ ಕಾಲಕ್ಕೆ ಪಾಟಲಿಪುತ್ರವು ಭರತವರ್ಷದಲ್ಲೆಲ್ಲ ಪ್ರಖ್ಯಾತ ಹೆರಿಂದಿತು. ಆಗ ಅಲ್ಲೊಂದು ವಿಶ್ವವಿದ್ಯಾಲಯವು ಸ್ಥಾಪಿಸಲ್ಪಟ್ಟಿತ್ತೆಂದೂ, ಆ ವಿದ್ಯಾಲಯದ ಸಕಲ ಶಾಖೆಗಳಲ್ಲೂ ಕೂಡಿ ಹತ್ತು ಸಾವಿರ ಗಟ್ಟಲೆ ವಿದ್ಯಾರ್ಥಿಗಳು ಓದುತ್ತಿದ್ದರೆಂದೂ ಇತ್ತೀಚೆಗೆ ತಿಳಿದಿರುತ್ತದೆ.

ಸಂಪೂರ್ಣ

## ಶ್ರೀ ಶೇಷಾಚಲ ಗ್ರಂಥಮಾಲೆಯ

# ಐತಿಹಾಸಿಕ ಪುಸ್ತಕಗಳು.

| ಪುಸ್ತಕದ ಹೆಸರು | ಲೇಖಕ | ಬೆಲೆ—ರೂ | ಆ |
|---|---|---|---|
| ಅಮಾತ್ಯ ರಾಕ್ಷಸ | ನಾಗೇಶ | ೦ | ೮ |
| ಅಡಮುಟ್ಟ ಸಿಪಾಯಿ | ಕಾಳೆ | ೦ | ೬ |
| ಊರ್ಮಿಳೆ | ನಾಗೇಶ | ೨ | ೦ |
| *ಈಶ ಸಂಕಲ್ಪ | ,, | ೧ | ೮ |
| ಕಂಕಣ ಚೋರ | ಕಾಳೆ | ೩ | ೦ |
| ಚಾಣಕ್ಯ | ,, | ೨ | ೦ |
| ದಳವಾಯಿ ಸಾತನಾಮಿ | ಅಂಗಿರಸ | ೦ | ೪ |
| ನೇತಾಜಿ | ಕಾಳೆ | ೧ | ೪ |
| ಪತಿತೋದ್ಧರಣ | ನಾಗೇಶ | ೦ | ೪ |
| ಪ್ರಾರಬ್ಧ ಪ್ರಹಾರ | ,, | ೦ | ೮ |
| ಪ್ರಾಣದಾನ | ಬೆಳ್ಳಿ | ೦ | ೬ |
| ಪ್ಲಾಸೀ ಕದನ | ಅಚ್ಯುತರಾವ | ೦ | ೬ |
| ಮ್ಯಾಝಿನಿ-ಸಾವರಕರ | ಕಾಳೆ | ೧ | ೦ |
| ಮಂದಾಕಿನಿ | ಕರ್ಜಗಿ | ೨ | ೦ |
| ರಕ್ತ ಸಿಂಚನ | ನಾಗೇಶ | ೦ | ೪ |
| *ರಾಣೀ ಕುರಂಗಿ | ,, | ೦ | ೮ |
| *ವಡಗಾಂವದ ವಿಜಯ | ಕಾಳೆ | ೨ | ೦ |
| ವೀರರಾಜ ವಿಜಯ | ಕೃಷ್ಣಯ್ಯ | ೦ | ೧೨ |
| ಶಕ್ತಿಮಯೀ | ಕಾಳೆ | ೧ | ೦ |
| ಸಿರಾಜ ಉದ್ದೌಲ | ನಾಗೇಶ | ೧ | ೮ |
| *ಸ್ವಾಧೀನ ಜೀವನ | ಭಾರತಿಸುತ | ೩ | ೮ |
| ಸೂರ್ಯಾಸ್ತ | ನಾಗೇಶ | ೦ | ೧೦ |
| *ಸೂರ್ಯಗ್ರಹಣ | ಅವಿನಾಶಭಾವಿ | ೧ | ೮ |
| ಹಿಂದೂ-ಮುಸಲ್ಮಾನರ ಐಕ್ಯ | ಕಾಳೆ | ೦ | ೪ |

ಬಿ. ಪಿ. ಕಾಳೆ, ಮದಿಹಾಳ-ಧಾರವಾಡ